





# ಪ್ರಬುದ್ಧ ಕರ್ಣಾಟಕ

ಸ್ವಭಾನು ಸಂವತ್ಸರ] —೯೬— [ದೀಪಾವಳಿ ಸಂಚಿಕೆ






ಮೈಸೂರು :
ಮೈಸೂರು ವಿಶ್ವವಿದ್ಯಾನಿಲಯ
೧೯೪೩

ಸಂಪುಟ ೨೫] [ಸಂಚಿಕೆ ೨

# ವಿಷಯಸೂಚಿಕೆ

ಕದಂಬ ದುದ್ದರಸನ ಮಹಿಷಿ ಮೇಚಲದೇವಿಯ

**ಹಾರುವ ಬೆಲುಹೂರು ಅಗ್ರಾಹಾರದ ಶಾಸನ**

ಕ್ರಿ.ಶ. ೧೮೯೫



**ಹಾರುವ ಬೆಲುಹೂರು (ಹಾಳೆ ಬೇಲೂರು) ಗ್ರಾಮ**

**ವಾಸುದೇವ ಮೂರ್ತಿ**

(ಈಚಿನ ಕದಂಬರ ಕಾಲ)




ಸ್ವಭಾನು ಸಂವತ್ಸರ — ೯೩ — ದೀಪಾವಳಿಯ ಸಂಚಿಕೆ

## ಪ್ರಾರ್ಥನೆ

ಕನಸಿನೊಂದು ಕಾಡಿನಲ್ಲಿ
ಸರಸಿಯೊಂದು ಮೆರೆಯಲಿ;
ಶಶಿಯ ತುಂಬು ಬೆಳಕಿನಲ್ಲಿ
ದೋಣಿಯೊಂದು ಕೆರೆಯಲಿ!
ಕವಿದ ಕಾನು, ಬುವಿಯು, ಬಾನು
ಯೋಗಿವರರ ಹೋಲಲಿ!
ಅಲ್ಲಿ ನನ್ನ ಮನವು ತನ್ನ
ಸ್ವೇಚ್ಛೆಯಂತೆ ತೇಲಲಿ!
ಅಲ್ಲಿ ಗಗನದನಂತತೆಯ-
ನೆನ್ನ ಹೃದಯ ಬೆಳಗಲಿ;
ನಿನ್ನ ದಯಾಂಬುಧಿಯೊಳೆನ್ನ
ಮನೋವ್ಯಥೆಯು ಮುಳುಗಲಿ!
ನಿನ್ನ ತಂಪು ಗಾಳಿಯೆನಗೆ
ಶಾಂತಿಯುಸಿರನೊಯ್ಯಲಿ;

ನಿನ್ನ ಸುಮದ ಕಂಪೊಳೆನ್ನ
ಬಾಳು ನಿದ್ರೆಗೈಯಲಿ!
ಖಗಗಳಿನಿದು ಕೊರಳೊಲುಲಿದು
ಮಧುರಗಾನ ಮಾಡಲಿ;
ಅದರ ಸೊದೆಯ ಕುಡಿಯಲೆದೆಯ
ದುಗುಡವೆಲ್ಲ ಬಾಡಲಿ!
ದೇವ, ಕಡೆಗೆ ನಿನ್ನ ಎಡೆಗೆ
ನನ್ನ ದೋಣಿ ಜಾರಲಿ!
ಅರಳಿದೆನ್ನ ಭಕ್ತಿಯನ್ನ
ನಿನ್ನ ಅಡಿಗೆ ತೂರಲಿ!

ರಾಮರಾವ್.

## ವಿಶ್ವಭಿಕ್ಷು

ಸ್ವಾರ್ಥತಾ ಸೂತ್ರಂಗಳಿಂ ನೆಯ್ಯುತಿದೆ ಸೃಷ್ಟಿ
ಪರಾರ್ಥತಾ ಶುಭ್ರ ದೇವಾಂಗಮಂ. ವ್ಯಕ್ತಿ
ಪಡುವ ಗೆಯ್ಮೆಗೆ ತನತೆ ಸುಖಸಾಧನಾಸಕ್ತಿ
ಗಂತವ್ಯಮಾಗಿರಲದನ್ ಬ್ರಾಹ್ಮೀ ಸಮಷ್ಟಿ
ವಿಶ್ವಪ್ರಯೋಜನಕೆ ಪಾಸು ಪೊಕ್ಕಂ ಗೆಯ್ದು,
ಜೀವರಿಗೆ ಸ್ವಾತಂತ್ರ್ಯ ಸಂಭ್ರಾಂತಿಯಂ ನೀಡಿ,
ತನ್ನ ಇಚ್ಛಾಟರಥಯುಗಕ್ಕವರ್ಗಳಂ ಪೂಡಿ
ರಕ್ಷಿಸುತ್ತಿದೆ ಜಗತ್ ಕಲ್ಯಾಣಮಂ ನೆಯ್ದು.
ಹೇ ವ್ಯಕ್ತಿ, ನಿನ್ನ ತ್ಯಾಗದ ತಿರುಪೆಗಾ ಶಿವಂ
ಜೋಳಿಗೆಯನಾಂತು ಭಿಕ್ಷಾಟನೆಗೆ ಹೊರಟಿಹನೆ,
ಹೇಳ್, ಸ್ವಯಂ ತ್ಯಾಗೀಶ್ವರಂ? ತನ್ನ ಸಂತಸಕೆ
ಪ್ರಾಣಿ ಪ್ರಾಣಿಯನಪ್ಪಿಕೊಳೆ ಸಂತತಿಯ ಭವಂ
ತಾನಪ್ಪುದನಿವಾರ್ಯಮುಪಫಲಂ! ಪ್ರಕೃತಿಯನೆ
ಕೃತಿಗೆಯ್ದವಗೆ ನಿನ್ನ ಕೃತಿ ಭಿಕ್ಷೆಯೇನ್ ರಸಕೆ?

ಕುವೆಂಪು.

# ಶೂದ್ರತಪಸ್ವಿ

## ದೃಶ್ಯ ೧

[ಶಂಬೂಕಾಶ್ರಮವಿರುವ ಅರಣ್ಯದ ಬಹಿರ್ವಲಯದಲ್ಲಿ ಆಶ್ರಮದ ಮಹಾದ್ವಾರದಲ್ಲಿ ಕಾವಲು ನಿಂತಿರುವಂತಿದೆ ಒಂದು ಬೃಹದಾಕಾರದ ವಟತರು. ಶಾಂತಿಗೆ ತವರುವೀಡಾಗಿದ್ದ ಆ ವನವು, ನೋಡೆ ನೋಡೆ, ಕ್ಷುಬ್ಧಶೀಲವಾಗುತ್ತದೆ. ಬಲ್ಗಾಳಿ ಬೀಸಿ, ಹಕ್ಕಿ ಚೀರಿಡುತ್ತವೆ. ಕೊಂಬೆಗೆ ಕೊಂಬೆ ಉಜ್ಜಿ ಆರ್ತಧ್ವನಿಯನ್ನು ಹೋಲುವ ಚೀತ್ಕೃತಿಗಳುಣ್ಮುತ್ತವೆ. ಮೃಗತತಿ ಗಾರಾಗಿ ದೆಸೆದೆಸೆಗೆ ಓಡುತ್ತವೆ. ದೃಷ್ಟಿಗೆ ಕೇಂದ್ರವಾಗಿ, ದೃಶ್ಯದ ಮುಂಭಾಗದಲ್ಲಿರುವ ಆ ಮಹಾ ವಟತರುವೂ ಕ್ಷೋಭೆಗೆ ಸಿಕ್ಕಿ ಅಸ್ಥಿರವಾಗುತ್ತದೆ. ಎಲೆ ಬಳಬಳನೆ ಉದುರುತ್ತವೆ. ಬಲ್ಗಾಳಿಗೆ ಧೂಳೆದ್ದು ಇದ್ದಕಿದ್ದಂತೆ ವನವೆಲ್ಲವೂ ಮಸುಕಾಗುತ್ತದೆ. ವಟತರುವೂ ಮಂಜುಮಂಜಾಗಿ, ಮಾಯ ವಾದಂತಾಗಿ, ಅದರ ಸ್ಥಾನದಲ್ಲಿ, ಒಯ್ಯೊಯ್ಯನೆ, ಆ ಮರದನಿತೆ ಭೀಮಾಕಾರನಾದ ಒಬ್ಬ ವೃಕ್ಷ ಭೈರವನು ದೃಗ್ಗೋಚರವಾಗುತ್ತಾನೆ. ತರುಶಾಖೆಗಳಂತಿರುವ ಬಹುಸಂಖ್ಯೆಯ ತೋಳುಗಳಲ್ಲಿ ತ್ರಿಶೂಲಾಯುಧ ಪಂಕ್ತಿ ಸಾಲ್ಗೊಂಡು ಸೇನಾವ್ಯೂಹದಂತೆ ಭಯಂಕರವಾಗಿರುತ್ತದೆ. ಕ್ರುದ್ಧನೆಂಬಂತೆ ಬದ್ಧಭ್ರುಕುಟಿಯಾಗಿ ಉರಿಗಣ್ಣುಗಳನ್ನು ಸುತ್ತಲೂ ಹೊರಳಿಸಿ ನೋಡುತ್ತಾನೆ. ತನಗೆ ತಾನೆಂಬಂತೆ ಮೊಳಗುತ್ತಾನೆ.]

ಭೈರವ.— ಏನವಿನಯಂ ಇಂದೀ ಪ್ರಕೃತಿ ಸಾಧ್ವಿಗೆ!
ಉಗ್ರಧೀ ಶಂಬೂಕಯೋಗಿಯಂ ಲೆಕ್ಕಿಸದೆ,
ವೃಕ್ಷಭೈರವನೆನ್ನ ರಕ್ಷೆಯಂ ಕಡೆಗಣ್ಚಿ,
ಅಂಡಲೆಯುತಿಹಳೀ ತಪೋವಿಪಿನಮಂ.
ಮಥನ ಕರ್ಮಕೆ ಸಿಲ್ಕಿದಂಬುಧಿಯ ತೆರೆಯವೊಲ್
ತರತರನೆ ನಡುಗುತಿದೆ ಕಾಡುಮಲೆ. ಒರಲುತಿವೆ
ಪಕ್ಷಿಗಳ್. ಕೀಚಕಧ್ವಾನಗಳ್ ಕರ್ಕಶಂ
ಕೂಗುತಿವೆ. ಕಾಲ್ಗೆಟ್ಟುವೋಡುತಿವೆ ಮೃಗಸಮೂಹಂ.
ಏಂ ನಿಮಿತ್ತಮೊ ಪರಿಕಿಸಲ್‌ವೇಳ್ಕುಂ.
ಧೂರ್ತಳೀ ದುಷ್ಕೃತಿಗೆ ಶೃಂಖಲೆಯನಿಕ್ಕದಿರೆ
ತಪಸ್ವಿಯಾಗ್ರಹಕೆ ಪಕ್ಕಾದಪೆನ್.



[ಮತ್ತೆ ಸುತ್ತಲೂ ನೋಡಿ ಧ್ಯಾನಿಸುತ್ತಾನೆ. ತೆಕ್ಕನೆಚ್ಚತ್ತವನಂತೆ ಇದಿರುನೋಡಿ ಅಧಿಕಾರ ವಾಣಿಯಿಂದ ಆಜ್ಞಾಪಿಸುತ್ತಾನೆ.]

ನಿಲ್ ನಿಲ್ ! ಅಲ್ಲಿಯೆ ನಿಲ್ !
ಹತ್ತೆ ಸಾರದಿರ್ ! ಅತ್ತಲ್ ತೊಲಗತ್ತಲ್ ! ಅತ್ತಲ್ !

[ನೋಡುತ್ತಿರುವಂತೆಯೆ ಏನೂ ಇಲ್ಲದೆ ಶೂನ್ಯವಾಗಿದ್ದ ಬಯಲು ನಸುಗಪ್ಪಾಗುತ್ತದೆ. ಕರಿಮಂಜು ದಟ್ಟಯಿಸುತ್ತದೆ. ಬರಬರುತ್ತಾ ಗಟ್ಟಿಯಾಗುತ್ತದೆ. ಕಡೆಗೆ ಮೃತ್ಯುವಿನ ಕರಾಳಾಕೃತಿ ರೂಪುಗೊಂಡು ಸ್ಪಷ್ಟಾಸ್ಪಷ್ಟವೆಂಬಂತೆ ನಿಲ್ಲುತ್ತದೆ.]

ಆರ್ ನೀನ್ ? ನಿನಗೇನಿಲ್ಲಿ ಕಜ್ಜಂ, ಘೋರಮುಖಿ ?

ಮೃತ್ಯು.— (ಭಯಂಕರಧ್ವನಿಯಿಂದ)
ಪೆಸರ್‌ಗೇಳ್ವ ಕೆಚ್ಚಿರ್ಪುದೇನ್ ನಿನಗೆ ?

ಭೈರವ.— (ಉಗ್ರನಾಗಿ)
ಇರ್ಪುದರಿಂದಮೆ ಕೇಳ್ದೆನ್, ವಿಕೃತವದನೆ,
ಅಧಿಕಪ್ರಸಂಗಿಯಾಗದಿರ್ !

ಮೃತ್ಯು.— ನನ್ನ ನಾಮಶ್ರವಣಮಾತ್ರದಿಂ
ತನ್ನ ಗವಿಗೊರಲ್ಗಳಿಂದೊರಲ್ವುದಯ್ ನರಕಂ;
ಗಿರಿಗಹ್ವರಗಳಿಂ ರೋದಿಸುವುದೀ ಪೃಥ್ವಿ ;
ಬೆಬ್ಬಳಿಸಿ ಬೆಳ್ಪೇರ್ವುದಯ್ ಸಗ್ಗದ ಮೊಗಂ.
ಪೆಸರ ಭೀತಿಗೆ ಬೆಚ್ಚಿ ಕಂಪಿಪುದೊ ಮೂಜಗಂ !

ಭೈರವ.— ನಿನಗಂಜದಾನ್ ನಿನ್ನ ಪೆಸರ್ಗಳ್ಕುವೆನೆ ?
ಪೇಳ್ ಬೇಗದಿಂದಲ್ಲದಿರೆ ನೀನಿನ್ನೆಗಂ
ಕಾಣದನುಭವವನುಣ್ಣಿಪೆನ್ !

ಮೃತ್ಯು.— ಆ ಗರ್ವಮಿರ್ಕೆ. ಕೇಳ್ :
ಮೃತ್ಯುವೆನ್ ! ದುರ್ಮೃತ್ಯುವೆನ್ !
ಪುಗಲ್ ಬಯಸಿ ಬಂದಿರ್ಪೆನ್
ಈ ತಪೋವನಕ್ಕೆ !

ಭೈರವ.— (ವಿಕಟಹಾಸ್ಯದಿಂದ ನಕ್ಕು)
ಕೆಟ್ಟುದಾವುದವ್ ನಿನಗೀಗಳ್ ?
ಬಟ್ಟೆಯೊ ಬಗೆಯೊ ?

ಮೃತ್ಯು.— ನೀನಾರ್ ಕೇಳಲ್ಕೆ ?

ಭೈರವ.— ತಪೋವನಮಂ ರಕ್ಷಿಪ್ಪ ವೃಕ್ಷಭೈರವನೆನ್ ! —

ಅಮೃತಮಿಾ ಕ್ಷೇತ್ರಮ್ :
ನಿನಗಿದು ದಿಟಂ ಪುಗಲ್ ತಾಣಂ!

ಮೃತ್ಯು.— ಮೂಲೋಕದೊಳ್ ಮಿಾಸೆವೊತ್ತನನ್ ಕಾಣೆನ್
ನನ್ನನ್ ತಡೆವ ಗಂಡನನ್!
ನೀನ್ ತಡೆವಯ್, ವೃಕ್ಷವಾಸಿ?

ಭೈರವ.— (ಕಟುಹಾಸ್ಯದಿಂದ)
ಆಃ! ಮಾಚೆಲ್ವುಪೆಣ್ಣಲ್ತೆ ನೀನ್?
ನಿನಗೆ ಸೋಲದರುಂಟೆ? — ಆದೊಡಂ ಕೇಳ್.
ಮಹರ್ಷಿ ಶಂಬೂಕನುಜ್ವಲ ತಪಃಪ್ರಭಾವದಿನ್
ನನಗೆ ಲಭಿಸಿರ್ಪೊಂದು ಕರ್ತವ್ಯ ಧರ್ಮ ಬಲದಿಂ
ನಿನ್ನನ್, ಒರ್ ಪಜ್ಜೆ ಮುಂದಿಡದವೊಲ್,
ತಡೆಗಟ್ಟಲ್ ಆನ್ ಸಮರ್ಥನೆನ್.
ಮಿಾರಿ ಮುಂಬರಿಯಲೆಳಸಿದರೆ
ಈ ನನ್ನ ತೋಳ್ಗಳೀ ತ್ರಿಶೂಲ ಪಂಕ್ತಿಗಳ್,
ತೋಳಗಳ್ ಕುರಿಯನ್ ಅರೆಯಟ್ಟುವೋಲ್,
ಅಟ್ಟುವುವು ನಿನ್ನಾಲಯಕೆ ನಿನ್ನನ್!

ಮೃತ್ಯು.— ಲಯಮೆ ನಾನ್. ನನಗೆಲ್ಲಿ ಲಯಮಯ್?

ಭೈರವ.— ಬೆಳ್ಪರೋಲಾಡದಿರ್ ತಿಳಿಯದೆ ಪದಾರ್ಥಮಂ.

ಮೃತ್ಯು.— ಕೆರಳ್ಚದಿರ್ ಅನರ್ಥಮಂ!

(ಮೃತ್ಯುಛಾಯೆ ಮುನ್ನುಗ್ಗಲೆಳಸುವುದು)

ಭೈರವ.— (ರೌದ್ರವಾಣಿಯಿಂದ)
ಮಹರ್ಷಿ ಶಂಬೂಕದೇವನಾಣೆ!
ಕಲ್ಲವೊಲ್ ನಿಲ್ ನೀನ್!

[ತನ್ನ ತೋಳುಗಳಲ್ಲಿ ಹೊಳೆಯುವ ತ್ರಿಶೂಲಗಳನ್ನು ಮೃತ್ಯುವಿನ ಮುಂದೆ ಬೇಲಿಗಟ್ಟುವನು]

ಮೃತ್ಯು.— ಎಲೆ ಮರುಳೆ, ಕೇಳ್ :
ಶಂಬೂಕ ಋಷಿಯ ಗೌರವಕಾಗಿ ಬಂದೆನಯ್,
ಧರ್ಮದೇವತೆಯಾಜ್ಞೆಯಿಂ.
ನೀನಾತನ ಮೆಯ್‌ಗಾವಲ್;
ನಾನುಸಿರ್ ಗೌರವಕೆ ಕಾವಲಯ್!
ತಿಳಿದು ತೆರೆ ಬಟ್ಟೆಯಂ. ಈಡಾಗದಿರ್ ನಗೆಗೆ!.

ಭೈರವ.— (ಅಚ್ಚರಿವಟ್ಟು)

ಧರ್ಮದೇವತೆಯಾಜ್ಞೆ ? ಋಷಿಯ ಗೌರವಕಾಗಿ ?
ಮೃತ್ಯುಗೆ ತಪೋವನ ಪ್ರವೇಶವನ್ ? —
ಜಟಿಲವಿಾ ವಾರ್ತಾ ಕಂಟಕ ನಿಕುಂಜದೊಳ್
ಸಿಲ್ಕಿತವ್ ನನ್ನಬಗೆ. ಬಿಡಿಸದನ್ ಮೊದಲ್ !

ಮೃತ್ಯು.— ಇಂದು ಪೊಳ್ತರೆಯಿನ್, ಆರಾರ್ಗೆ,
ಈ ಬನಕೆ ತೆರವಿತ್ತೆ, ಪೇಳ್.

ಭೈರವ.— ಸೂರ್ಯದೇವನ ಕಿರಣದೂತರ್ಗೆ.

ಮೃತ್ಯು.— ಮೇಣ್ ?

ಭೈರವ.— ಪುಣ್ಯ ಲಕ್ಷ್ಮಿಯಂ ಕೂಡಿ
ವಸಂತಗಂಧಾನಿಲಂ ವೆರಸಿ ಬಂದಾ
ಶ್ರೀರಾಮಚಂದ್ರಮನ ಕೀರ್ತಿಕಾಂತೆಗೆ.

ಮೃತ್ಯು.— ಮೇಣ್ ?

ಭೈರವ.— ಪ್ರಕೃತಿ ದೇವಿಯ ದೈನಂದಿನ ಪರಿವಾರಕೆ.

ಮೃತ್ಯು.— ಮೇಣ್ ?

ಭೈರವ.— ಪಾರ್ವನೊರ್ವನ್ ತನ್ನಣುಗಂ ವೆರಸಿ
ಪೂಜಾವಿಧಿಗೆ ಪೂದಿರಿಯಲೆಂದು
ಒಳಪೊಕ್ಕನೈಸೆ.

ಮೃತ್ಯು.— ಅದೆ ನಿಮಿತ್ತಮಿಾ ನನ್ನ ಯಾತ್ರೆ.

ಭೈರವ.— ಕಾರಣಂ ?

ಮೃತ್ಯು.— ಗೆಯ್ದನ್ ಅಧರ್ಮಮಂ !

ಭೈರವ.— ಎಂತು ?

ಮೃತ್ಯು.— ಅವಜ್ಞೆಯಿಂ !

ಭೈರವ.— ಆರ್ಗೆ ?

ಮೃತ್ಯು.— ಮತ್ತಾರ್ಗೆ ? ಋಷಿಗೆ !
ನಿನ್ನ ಗುರುದೇವನಾ ಶಂಬೂಕ ಋಷಿಗೆ !

ಭೈರವ.— (ಕೆರಳಿ) ಏನ್ ಗರ್ವಮಾ ಪಾರ್ವಂಗೆ ?

ಮೃತ್ಯು.— ಪುಟ್ಟೊಳಾತಂ ಶೂದ್ರನಾಗಿರ್ದನೆಂದು !

ಭೈರವ.—(ತಟಕ್ಕನೆ ಬೇಲಿಗಟ್ಟದ್ದ ಶೂಲಪಂಕ್ತಿಯನ್ನೆತ್ತಿ)

ಶಿವಶಿವಾ ! ಏನ್ ಭಯಂಕರಂ ಪಾಪಂ
ಶ್ರೀರಾಮನಾಳುತಿಪ್ಪೀರ್ಗ ಧರ್ಮರಾಜ್ಯದೊಳ್ !

[ಮೃತ್ಯು ಮೆಲ್ಲಮೆಲ್ಲನೆ ಕರಿಮಂಜಾಗಿ ಆಶ್ರಮದ ಕಡೆಗೆ ಚಲಿಸುತ್ತದೆ. ಭೈರವನು ಮಸುಕು ಮಸುಕಾಗಿ ಮತ್ತೆ ವೃಕ್ಷರೂಪಿಯಾಗಿ ನಿಲ್ಲುತ್ತಾನೆ.]

ತೆರೆ ಬೀಳುತ್ತದೆ.

## ದೃಶ್ಯ ೨

[ತಿಂಗಳ್ಬೆಳಗು ಹಾಲುಚೆಲ್ಲಿದ ಅಯೋಧ್ಯೆ. ಶ್ರೀರಾಮಚಂದ್ರನ ಅರಮನೆಯ ಬಳಿಯ ಉದ್ಯಾನದಲ್ಲಿ ಉತ್ತರ ವಯಸ್ಸಿನ ಬ್ರಾಹ್ಮಣನೊಬ್ಬನು ಹುಯ್ಯಲಿಟ್ಟು ರೋದಿಸುತ್ತಿದ್ದಾನೆ. ಸುತ್ತಲೂ ಬಹುದೂರದ ವರೆಗೆ ಹಬ್ಬಿ, ಬಣ್ಣಬಣ್ಣದ ಹೂವಿನ ಪೊದೆಗಳೂ ಬಳ್ಳಿಗಳೂ ಮರಗಳೂ ರಂಜಿಸಿರುತ್ತವೆ. ನೀರ್ಬುಗ್ಗೆಗಳು ನರ್ತಕಿಯರಂತೆ ನಾಟ್ಯವಾಡುತ್ತಿವೆ. ದೂರದಲ್ಲಿ ಹಾಲುಗಲ್ಲಿನ ಅರಮನೆ ಶೋಭಿಸಿದೆ. ಅದರ ಸೋಪಾನಪಂಕ್ತಿ ತರಂಗವಿನ್ಯಾಸದಿಂದ ಉದ್ಯಾನದ ಕಡೆಗೆ ಇಳಿದಿರುವುದು ಕಾಣಿಸುತ್ತದೆ.]

ಬ್ರಾಹ್ಮಣ.— ಕಂದಾ, ಕಂದಯ್ಯಾ, ಕಂದಮ್ಮಾ,

ಓ ಎನ್ನ ಕಂದಾ,
ಸಹಿಪೆನೆಂತೀ ಬಗೆಯ ಬೆಂಕೆಯಂ,
ನಿನ್ನಗಲ್ಕೆಯಂ.
ಕಣ್ಗೆ ಬೆಳಕಾಗಿರ್ದೆ ನೀನ್ ;
ಬಾಳ್ಗೆ ಉಸಿರಾಗಿರ್ದೆ ನೀನ್ ;
ಮುದಿತನಕ್ಕೊಂದೂರೆಗೋಲಾಗಿರ್ದೆ ನೀನ್, ಪುತ್ರಕ.
ನೀನಳಿಯಲೊರ್ಮೊದಲೆ ಸರ್ವಮುಂ ಕಳಲ್ದಾನ್
ಜಗತೀ ಶ್ಮಶಾನದೊಳ್ ಜಂಗಮ ಶವಂ !
ನೀನೊರ್ವನೆಯೆ ಕಂದನುಂ ಕಣ್ಣುಮಾಗಿರ್ದ
ಕುರುಡಿ ನಿನ್ನಬ್ಬೆಯಂ ಮರಳಿ ನಾನೆಂತು ಕಾಣ್ಬೆನ್ ?
ನಾನ್ ಬಳಿಸಾರಲ್
ಪಜ್ಜೆಸದ್ದಂ ಕೇಳ್ದು 'ಬಾ ಚಿಣ್ಣ ಬಾ' ಎನುತೆ
ಮೊಗದ ಸುರ್ಕಳಿಯೆ ಸುಖವುಕ್ಕಿ ಚಾಚಿದ ತೋಳ್ಗೆ,
ಕರು ಕಳಿದ ಹಸುವ ಹಾಲ್ ಕರೆವ ಗೌಳಿಗನಂತೆ

ನಾನಾವ ಚಕ್ಕಳದ ಕವಡು ಸಂತೈಕೆಯಂ ತುಂಬಿ,
ಬಾಳ್ಗಡಲ ಪೀರ್ವ ಬಡಬಾಗ್ನಿಯಂ ನಂದಿಸಲಿ ?
ಪೇಳ್, ಪುತ್ರಕ ! ಪೇಳ್ ! ಪೇಳ್ ! ಪೇಳ್ !

(ತುಸುಪೊತ್ತು ಮೌನವಾಗಿ ಬಿಕ್ಕಿಬಿಕ್ಕಿ ಅಳುತ್ತಾ)

ಪೋದ ಜನ್ಮಗಳಾವ ದುಷ್ಕೃತವೊ ? ಅಲ್ಲದಿರೆ,
ಬಾಳ್ದುದಿಗೆ ನಾಂ ಪಡೆದೊರ್ವನೆಯೆ ಮಗನ್,
ಕಣ್ಣೆದುರೆ ಮಡಿವುದನ್ ಕಾಣ್ಬರೊಳರೇ
ಈ ಪುಣ್ಯಯುಗದೊಳ್ ?
ಅಪ್ರಾಪ್ತ ಯೌವನನ್,
ಅಕೃತ ಪಿತೃಕಾರ್ಯನ್,
ಅಪಾಪಜೀವಿತನ್,
ಪಂಚವತ್ಸರದೆನ್ನ ವತ್ಸನ್
ಆವ ಕತದಿಂದಿಂತು ರಾಮರಾಜ್ಯವನುಳಿದು
ಯಮರಾಜ್ಯಕೆಯ್ದಿದನ್ ?
ನಾನಾವ ಪಾಪಮನ್ ಎಸಗಿದುದೆನಗೆ ನೆನಪಿಲ್ಲ.
ಎಂದುಮ್ ಅನೃತವನೊರೆದೆನಿಲ್ಲ.
ಮೇಣ್ ಹಿಂಸೆಯಂ ಗೆಯ್ದೆನಿಲ್ಲಾವ ಜೀವಿಗುಂ.
ಮತ್ತಾರ ದುಷ್ಕೃತಕಿಂದು ಕೊಲೆವೋದುದೆನ್ನ ಶಿಶು ?

(ದುಃಖಾತಿಶಯದಿಂದಲೂ ಕೋಪದಿಂದಲೂ)

ಪೇಳ್ ನೀನ್, ಓ ಬೆಳ್ದಿಂಗಳಿರುಳೇ !
ಪೇಳ್ ನೀನ್, ಓ ಇಕ್ಷ್ವಾಕು ರಘು ದಿಲೀಪಾದಿ
ರವಿಕುಲ ನರೇಂದ್ರ ರಾಜ್ಯಧರ್ಮ ಸ್ವರೂಪಿಣೀ
ಹೇ ಅಯೋಧ್ಯಾ ನಗರಲಕ್ಷ್ಮೀ !
ಪಿಂತೆಂದುಂ ಕಂಡುದಿಲ್ಲಿಂತಪ್ಪ ಘೋರಮಂ ;
ಮೇಣ್ ಕೇಳ್ದುದಿಲ್ಲಮ್.
ಶ್ರೀರಾಮನಾಳ್ವಿಂದೆ ರಾಮಪ್ರಜೆಗೆ ಕುಂದೆ ?
ದೊರೆಯ ದೋಷವೆ ಕಾರಣಂ ಪ್ರಜಾಸಂಕಟಕೆ !
ಪೆರತಲ್ತು ! ಪೆರತಲ್ತು !
ಏಸೊ ಬಂದಿರ್ಗಲ್ವೇಳ್ಕುಮಾ ರಾಮಪಾಪಂ !

(ಆಲೋಚಿಸಿ ತರಿಸಂದು)

ಪೆರತೇನ್ ?
ಸಾಲದೇನಾ ಶೂದ್ರನ ತಪಕೆ ಮುನಿದ ಧರ್ಮಶಾಪಂ !

(ದಿಟ್ಟದನಿಯಿಂದ)

ಮಡಿದ ಮಗನನ್ ಮರಳ್ಚದಿರ್ದೊಡೆ
ಕೇಳ್, ಓ ರಾಮಚಂದ್ರ,
ಸಾವೆನಿಲ್ಲಿಯೆ ನಿನ್ನರಮನೆಯ ಬಾಗಿಲೊಳ್.
ಬ್ರಹ್ಮಹತ್ಯಂಗೆಯ್ದು ಸುಖದಿಸಿರು ; ಇರು ; ಇರು !

(ಗಟ್ಟಿಯಾಗಿ)

ಆಗಸವೇ, ನೀನ್ ಸಾಕ್ಷಿ !
ತಣ್ಗದಿರನೇ, ನೀನ್ ಸಾಕ್ಷಿ !
ಓ ಅಯೋಧ್ಯೆ, ನೀನುಂ ಸಾಕ್ಷಿ !
ಕೇಳಿಮ್, ಓ ಸಗ್ಗದೊಳಿರ್ಪ ನೇಸರ್ಬಳಿಯ ಅರಸರಿರ
ನೀಮೆಲ್ಲರುಮೆನ್ನ ಪೂಣ್ಕೆಗೆ ಸಾಕ್ಷಿಗಳ್ !

(ಕುಸಿಯುತ್ತಾನೆ)

[ಬೆಳ್ದಿಂಗಳಲ್ಲಿ ಬೆಳ್ಳಗಾಗಿರುವ ಹಾಲ್ಗಲ್ಲಿನ ಅರಮನೆಯಿಂದ ನೀಲಶರೀರಿ ಶ್ರೀರಾಮಚಂದ್ರನು ಕರುಣಮುಖಮುದ್ರೆಯಿಂದಲೂ ಹುಡುಕುವವನಂತೆ ಸುತ್ತಲೂ ನೋಡುತ್ತಲೂ, ಗಂಭೀರವಾಗಿ, ಆಶೆಯಂತೆ, ಆಶೀರ್ವಾದದಂತೆ, ಪ್ರವೇಶಿಸುತ್ತಾನೆ. ದೂರದಿಂದಲೆ ಆತನನ್ನು ಗುರುತಿಸಿ, ಬ್ರಾಹ್ಮಣನು ಭಯಭಕ್ತಿಯಿಂದೆದ್ದು ಕೈಮುಗಿದು ನಿಲ್ಲುತ್ತಾನೆ. ಶ್ರೀರಾಮನು ಬಳಿಬಳಿಗೆ ಬಂದಂತೆಲ್ಲ ಬ್ರಾಹ್ಮಣನ ದುಃಖಭಾವವೂ ಧನ್ಯಭಾವಕ್ಕೆ ತಿರುಗುತ್ತದೆ. ಶ್ರೀರಾಮನು ಹಜ್ಜೆಯಿಟ್ಟು ಮುಂದುವರಿದಂತೆಲ್ಲ, ಒಂದೊಂದು ಹಜ್ಜೆಗೆಂಬಂತೆ, ಒಂದೊಂದು ಮಾತನ್ನು ಧ್ವನಿಪೂರ್ವಕವಾಗಿ ತನಗೆ ತಾನೆ—ಹೇಳಿಕೊಳ್ಳುತ್ತಾನೆ.]

ತ್ರಿಭುವನ ಪುಲಕಕಾರಿ ಧನ್ಯಮೀ ದರ್ಶನಂ !
ಕ್ರಮನ್ಯಾಸಂ ಸಪ್ತಸಾಗರ ಜೀವನಕ್ರಮಂ !
ವ್ಯೋಮಮ್ ವಪುಃಕಾಂತಿ !
ವನಾದ್ರಿ ಸಂಗದಿಂದಂಗಮೆ ವನಾದ್ರಿಯಾಗಿರ್ಪನ್ !
ದಶರಥ ಪುತ್ರನೀತನ್ ರಘುಶ್ರೇಷ್ಠನೆ ದಿಟಂ.—
ಕರುಣಮೂರ್ತಿಯೀತನ್ ಕೌಸಲೆಯ ಕಂದನೆ ವಲಂ.
ಋಷಿಶಿಷ್ಯನೀತನ್ ಮಹಾ ಸಂಯಮಿಯ್ಕೆಸೆ.
ಹರಧನುವ ಮುರಿದವನ್, ಸುರಧನುಸ್ಸುಂದರನ್,
ಮೈಥಿಲೀ ಮನೋಹರನ್ ಕುಸುಮಕೋಮಲನ್.

ನೀಲಮೇಘಶ್ಯಾಮನ್, ಗಿರಿವನಪ್ರಿಯನ್.—
ದಶಗ್ರೀವಾರಿ, ಉಗ್ರನೀತನ್, ವಜ್ರಪ್ರಜ್ಞಾ ಕಠೋರನ್ !
ಅಂಜನಾಸುತ ಹೃದಯಮಿತ್ರನ್, ಪವಿತ್ರನ್.
ಪಂಚವಟಿಯೊಳ್ ನಿಂದವನ್ ;
ಗೋದಾವರಿಯ ಮಿಂದವನ್ ;
ದೈತ್ಯಕೋಟಿಯ ಕೊಂದವನ್.—
ಶಬರಿಯ ಕಯ್ಯ ಪಣ್ಪಲಂಗಳನ್ ತಿಂದವನ್.
ಮೇರುಭವ್ಯನ್ !
ಪ್ರೇಮಮೂರ್ತಿ ; ಧರ್ಮಮೂರ್ತಿ, ಕ್ಷಮಾಮೂರ್ತಿ ;
ಶಿಷ್ಟರಕ್ಷಾಮೂರ್ತಿ, ದುಷ್ಟಶಿಕ್ಷಾಮೂರ್ತಿ,
ನರದೇವನೀತನ್ ಪರದೈವಮೆ ವಲಂ !—
ಆಶಾಸ್ವರೂಪಿಯಿಾತನ್
ಬಂದಪ್ಪನಾಶೀರ್ವಾದಮೈತಪ್ಪವೋಲ್.
ಧನ್ಯನಾನಿನ್ ಬರ್ದುಕಿದೆನ್ !
ಬರ್ದುಕಿದೆನ್ ! ಬರ್ದುಕಿದೆನ್ !
ಬರ್ದುಕದಿರ್ಪನೆ ನನ್ನ ಕಂದನ್ ?
ಬರ್ದುಕಿದನ್, ಅವನುಂ ಬರ್ದುಕಿದನ್ ! (ಎವೆಯಿಕ್ಕದೆ ನೋಡುತ್ತಾ ನಿಲ್ಲುತ್ತಾನೆ.)

ಶ್ರೀರಾಮ.— (ರಾಜರಾಜಗಾಂಭೀರ್ಯದಿಂದ ಬರುತ್ತಾನೆ.)
ಈ ವಸಂತಪೂರ್ಣಿಮಾ ರಜನಿಯಂ
ಈ ಅಯೋಧ್ಯಾಶಾಂತಿಯಂ
ತನ್ನ ಕರುಣಕಥೆಯಿಂ ಕದಡಿದಾ ದುಃಖಿ,
(ಸುಯ್ಯುತ್ತಾನೆ)
ಅಗಲ್ದರೆಮೆಯ್ಯಳನೆ ನೆನೆಯುತಿರ್ದೆನ್ನ
ಸೀತಾಶೋಕಮನಿತುಮನ್ ಮರುಕೊಳಿಸಿದಾ ದುಃಖಿ
ಎಲ್ಲಿರ್ಪನ್ ? ಎತ್ತವೋದನ್ ?
(ಸ್ವಲ್ಪ ನೋಡಿ)
ಇತ್ತಣಿಂದೀ ತೋಂಟದಿಂದ್ಯೈತಂದುದಾ ರುದಿತಂ.
(ವ್ಯಂಗ್ಯಸ್ಮಿತನಾಗಿ)
ನನ್ನ ಬಾಳ್‌ಗಿವಿಗೇಗಳುಮ್
ರೋದನಮೆ ಸಂಗೀತಮಾಯ್ತುಲಾ !

ಅವತಾರಿಯುಣ್ಬ ಕೂಳಲ್ತೆ ಗೋಳ್ ;
ಕುಡಿವಮುರ್ದಲ್ತೆ ಕಣ್ಣೀರ್ !

(ತನ್ನೆಡೆಗೆ ಬರುತ್ತಿರುವ ಬ್ರಾಹ್ಮಣನನ್ನು ಗಮನಿಸಿ)

ಆರೊ ಬರುತಿಪ್ಪರೀ ಎಡೆಗೆ.

(ನಿಟ್ಟಿಸಿನೋಡಿ)

ಮುದಿಯನ್ ; ಪಾರ್ವನ್ ; ದುಃಖ ಜರ್ಜ್ಜರಿತನ್.
ಈತನಾ ಪುಯ್ಯಲ್ಗಿದನೆ ಇರಲ್‌ವೇಳ್ಕುಮ್.

(ಎರಡು ಹೆಜ್ಜೆ ಮುಂಬರಿಯುತ್ತಾನೆ)

ಬ್ರಾಹ್ಮಣ.— (ಬೇಗ ಬೇಗ ಬರುತ್ತಾ)
ಅನಾಥ ರಕ್ಷಕಾ, ದುಃಖವಿಮೋಚಕಾ,
ಸರ್ವಲೋಕಪ್ರಭೂ, ಸಲಹು, ಸಲಹು !

(ಕಾಲಿಗೆರಗುತ್ತಾನೆ)

ಶ್ರೀರಾಮ.— ಏಳಿಮೇಳಿಮ್. ಮುದುಕರ್, ಪಿರಿಯರ್, ಪಾರ್ವರ್,
ನೀಂ ಗುರುಜನ ಸಮರೆನಗೆ.

ಬ್ರಾಹ್ಮಣ.— ಅರ್ಥಿ ಸಹಜಮನೆಸಗಿದೆನ್, ದಾಶರಥಿ.
ಕಟ್ಟಳಲ್ಗುಂಟೆ ಮತಿ ? ತಿರುಪೆಗೆತ್ತಣ ಪೆರ್ಮೆ ?

ಶ್ರೀರಾಮ.— ಆರ್ ನೀಮ್ ? ದುಃಖಮೇನ್ ?

ಬ್ರಾಹ್ಮಣ.— ನೀನ್ ವಿಚಾರಿಸಲ್ ದುಃಖಮೆಂಬುದುಮುಂಟೆ ? —
ನೀನ್ ಪಾರ್ವರನ್ ಮೊಗದಿಂದುಗುಳ್ದಾತನಂ
ಪೊರ್ಕ್ಕುಳಿಂ ಪೆತ್ತಾತನಲ್ತೆ ?
ಕಾಲಮನೆ ಕೂಸೆಂಬ ನಿನಗಿಂ ವೃದ್ಧರಿರ್ಪರೆ ?
ವಿಶ್ವಮಂ ಸೃಜಿಸಿದಾ ಪಿರಿಯಂಗೆ ಪಿರಿಯನ್
ನಿನಗೆ ನಾನೆರಗಿದೊಡೆ ವಿಪರೀತಮಲ್ತು.
ಮನುಷ್ಯರೀತಿಯಿಂದಪ್ಪೊಡಂ ನಿನಗೆ
ಪೊಡವಿಯೊಡೆಯಂಗೆ ಪೊಡೆವಡುವುದೆ ಪಾಳಿ.
ಪ್ರೇಮ ಸಾಧನದಿಂ ನೀಂ ಮಹಾತಪಸ್ವಿಯಲ್ತೆ ?
ಪಿರಿದೇಗಳುಂ ತಪಂ. ಗುಣಕ್ಕೆ ಮಚ್ಚರಮೆ ?

ಶ್ರೀರಾಮ.— ಪಿರಿದನೊಲ್ವರುಂ ಪಿರಿಯರ್, ವಿಪ್ರೋತ್ತಮ !
ಪೇಳಿಮ್ ನಿಮ್ಮಳಲ್ಕೆಯುಂ.

ಬ್ರಾಹ್ಮಣ.— ಅಪಹರಿಸಿದನ್ ಪಂಚವತ್ಸರದೆನ್ನ ಕಂದನನ್. . . .
ಶ್ರೀರಾಮ.— ಆವನ್ ಆ ನೀಚನ್ ?
ಬ್ರಾಹ್ಮಣ.— ಯಮನೆಂಬ ಕೀರ್ತಿಯಾ ವೈವಸ್ವತನ್ !
ಶ್ರೀರಾಮ.— ದಿಟಮೆ !
ಬ್ರಾಹ್ಮಣ.— ನಸ್ನೊಡನೆ ಬಪ್ಪೆಯಪ್ಪೊಡೆ ತೋರ್ಪೆನಾ ತಾಣಮಂ ;
ಮೇಣ್, ನಸ್ನೊರ್ವಸೆಯೆ ಕುವರನಾ ಪೆಣಮುಮಂ. (ಅಳುತ್ತಾ)
ಹೇ ದಯಾನಿಧಿ,
ಕ್ಲೇಶ ಕಾಲದೊಳೆಲ್ಲರುಂ ನಿನ್ನ ಪೆಸರನುಸಿರ್ದು
ರಕ್ಷೆಯಂ ಪಡೆವರಯ್. ನಿನ್ನನೇ ಬೇಡುತಿಹೆ ನಾಂ.
ನನ್ನ ಕಂದನ ಹರಣಮಂ ಬಿಕ್ಕೆನೀಡೆನಗೆ.
ನೀನ್ ಕೃಪಾಬ್ಧಿಯಲ್ತೆ? —
ಸುಲಭಸಾಧ್ಯಂ ನಿನಗೆ ಅದೆಂತಪ್ಪ ಕಠಿಸಮುಂ.
ಲೋಕಾಪವಾದಕ್ಕೆ ನಿನ್ನರ್ಧಾಂಗಿಯಂ,
ಬೆಂಕೆವೊಕ್ಕೆಯ್ತಂದ ಪರಿಶುದ್ಧೆಯಂ,
ಸೌಂದರ್ಯ ಲಕ್ಷ್ಮಿ ಆ ಸೀತಾದೇವಿಯಂ
ತುಂಬು ಬಸಿರಿಯೆಂದೆರ್ದೆಸೋರದಡವಿಗಟ್ಟಿ
ನಿನ್ನಾ ಭೀಷ್ಮಪೌರುಷವ ಮೆರೆದೆಯಲ್ತೆ ?
ಶ್ರೀರಾಮ.—(ಸಿಡುಸುಯ್ದು ಮೊಗಮಂ ಪಿಂಡಿ)
ಸಾಲ್ಗುಮಾ ಕಥನಂ, ದ್ವಿಜನ್ಮ.
ಕಾಳ್ಗಿಚ್ಚಿಗೂರ್ಗಿಚ್ಚನಿದಿರೊಡ್ಡಿ ಸಂದಿಪ್ಪವೋಲ್
ನಿನ್ನಳಲ್ಗೆನ್ನಳಲ್ ಪರಿಹಾರಮೇನ್ ?
ಬ್ರಾಹ್ಮಣ.— ಮನ್ನಿಸು, ಮಹೀಶ್ವರ.
ನನ್ನ ಕಂದನ ಹರಣಮಂ ಬೇಡಿ ಬಂದೆನ್ ;
ಕೃಪೆಯಿಂದದನ್ ನೀಡು.
ಶ್ರೀರಾಮ.— ದ್ವಿಜೋತ್ತಮ, ನೀಂ ಪೇಳ್ವುದಕ್ಕಜಮ್ !
ಧರ್ಮಾಧಿಕಾರಿ ವೈವಸ್ವತನ್ ನಿರ್ನೆರಂ
ನನ್ನ ರಾಜ್ಯದೊಳಿಂತು ಗೆಯ್ವನಲ್ಲಂ.
ಇದರೊಳೊಂದೇನೊ ಧರ್ಮಚ್ಯುತಿಯಿರಲೆವೇಳ್ಕುಂ.
ಅಪ್ರಾಪ್ತಕಾಲನಂ, ಬಾಲನಂ,

ಕೊಂಡೊಯ್ದು ಕಾಲನಂ ಕಾಲ್ಗೆಡಿಸುವೆನ್
ತಪ್ಪು ಅವನದಾಗಿರಲ್.— ಆದೊಡಾಂ
ಅಪರಾಧಮ್ ಅವನದೆಂದಾಳೋಚಿಸೆನ್.
ನೀಮ್ ಏನಾದೊಡಂ ಅಪೂಜ್ಯಮಂ ಗೆಯ್ದಿರೇನ್ ?

ಬ್ರಾಹ್ಮಣ.— ಪೆರ್‌ನಡೆಯ ತಾಯ್ತಂದೆವಿರ್ ಸಜ್ಜನರ್.
ಬಿಜ್ಜೆಗಲಿಸಿರ್ಪೋಜರುಂ ಸಜ್ಜನರ್.
ಪಾರ್ವರೊಳ್ ಪುಟ್ಟಿರ್ಪುದೆನ್ನಾತ್ಮಂ, ಪ್ರಭೂ.

ಶ್ರೀರಾಮ.— ಮಾನ್ಯರ್ ನೀಮ್.
ಧನ್ಯಂ ನಿಮ್ಮನ್ನರಂ ಪಡೆದೆನ್ನ ರಾಜ್ಯಂ.—
ಇನ್ನಾರಾದೊಡಂ ಗೆಯ್ದರೇನಧರ್ಮಮಂ
ನಿಮ್ಮ ಮಗನಳಿವಿಂಗೆ ಕಾರಣಮೆನಲ್ ?
ನೀಮ್ ಅರಿತಿರ್ಪೊಡೆ ಅದನ್ ಒರೆಯಿಮ್ ;
ಅಳಿಪೆನದನ್.
ಕಾರಣದ ನಾಶದಿಂ ನಾಶಮಪ್ಪುದು ಕಾರ್ಯಮುಂ.

(ದೃಢವಾಣಿಯಿಂದ)

ನನ್ನ ರಾಜ್ಯದೊಳಿರಲ್ಕಾಗದು ಅಧರ್ಮಿ !

(ಶ್ರೀರಾಮನ ಧರ್ಮಕೋಪಕ್ಕೆ ಬ್ರಾಹ್ಮಣನು ಬೆದರುತ್ತಾನೆ. ಮಿಳ್ಮಿಳನೆ ನೋಡುತ್ತಿರುವಾತನಿಗೆ ರಾಮನು ಧೈರ್ಯ ಹೇಳುವಂತೆ)

ಬಿಡಿ ಬೆದರ್ಕೆಯುಂ ! ದಿಟಮನೊರೆಯಿಂ !

ಬ್ರಾಹ್ಮಣ.— ಕ್ಷಮಿಸಯ್, ಮಹಾಪುರುಷ. ಜಿಹ್ವೆ ತೊದಳ್ದಪುದೆನಗೆ.

ಶ್ರೀರಾಮ.— ನಿಜವನುಸುರಲ್ಕೆ ?

ಬ್ರಾಹ್ಮಣ.— ನಿನ್ನಿದಿರೆ ನಿನ್ನ ಪೆಸರಂ ಪೇಳ್ವುದರ್ಕ್ಕಳ್ಕಿ !

ಶ್ರೀರಾಮ.— (ನಸುಬೆಚ್ಚಿದಂತಾಗಿ ತನ್ನೊಳಗೆ ತಾನೆ)
ಅಪರಾಧಂಗಳ್ಗೆಲ್ಲ ನಾನೆ ಮೂಲಮೋ ಏನ್ ?
ಅಂದಸಗನಾಡಿದನ್ ; ಇಂದೀ ಪಾರ್ವನ್ !

(ಬ್ರಾಹ್ಮಣನಿಗೆ)

ದ್ವಿಜೋತ್ತಮ, ಸತ್ಯಂ ಸರ್ವಪೂಜ್ಯಂ.
ಸತ್ಯಕಂಜಲ್ ತರಮೆ ? ಪೇಸಲಿಲ್ಲಾವಗಂ
ಸತ್ಯಮನ್ನಾಲಿಸಲ್ಕೀ ದಶರಥಾತ್ಮಜಂ.

ಸತ್ಯಮಾರ್ಗರ್ಗಂ ಕ್ಷೇಮಮೇ, ಇಳೆಯ ಪಿರಿಯ.
ಪೇಳ್ವರ್ಗಂ, ಕೇಳ್ವರ್ಗಂ.— ತಳ್ವದೆ ಪೇಳಿಂ !
ನನ್ನದೇನಪರಾಧಂ ? ನನ್ನಿಂದಮೇನಧರ್ಮಂ ?
ಜನ್ಮದಿಂ ಮಾತ್ರಮಲ್ಲದೆ ಕರ್ಮದಿಂದಮುಂ
ಗುರುಗಳಪ್ಪಿರಿ ನೀಮ್.
ಪೇಳಿಮ್, ತಳ್ವದೆ ಪೇಳಿಮ್ !

ಬ್ರಾಹ್ಮಣ.— ಶಿಷ್ಟಪರಿತ್ರಾಣ ಮೂರ್ತಿ, ಕೇಳ್ :
ಇಂದು ಬೆಳಗುಂಬೊಳ್ತು ದೇವಾರ್ಚನೆಗೆ
ಪೂದಿರಿಯಲೆಂದು ನಾಂ ಪುತ್ರಕಂವೆರಸಿ
ಸಾರ್ದೆನ್ಸೊರ್ದೆಸರ ಬನಮಂ.

ಶ್ರೀರಾಮ.— ಪೆಸರಿರ್ಪುದೇನಾ ಬನಕೆ ? ಇರ್ಪುದೆತ್ತಣ್ಗೆ ?

ಬ್ರಾಹ್ಮಣ.— ಪಾಪಕರಮೆಂದುಸಿರ್ದೆನಿಲ್ಲಾ ಪೆಸರನ್.
ಇರ್ಪುದದು ಮೃತ್ಯುದಿಶೆಯೊಳ್.

ಶ್ರೀರಾಮ.— ಪೆಸರೊಳೇನ್ ಪಾಪಂ? ಉಸಿರಿಂ.

ಬ್ರಾಹ್ಮಣ.— ಶಂಬೂಕಾಶ್ರಮವೆಂದು ಕರೆವರಾ ಕಾಡನ್.

ಶ್ರೀರಾಮ.— (ಚಿಂತಾಮಗ್ನನಾಗಿ, ಬಳಿಕ)
ಓಹೊ ಈಗಳೆನಗೆ ಬೆಳಕು ಮೂಡುತಿದೆ ! —
ಮುಂದೆ ?

ಬ್ರಾಹ್ಮಣ.— ಮುಂದೇನ್, ಮಹಾಪ್ರಭೂ ?
ಕಂಡೆವಿರ್ವರುಮಾ ತಪರಿಬಿಡುತ್ತಿರ್ದನಂ,
ಶೂದ್ರನಂ, ಶಂಬೂಕವೆಸರಾಂತನಂ,
ಋಷಿವೇಷದಾ ಪಾಷಂಡಿಯಂ.

[ಶ್ರೀರಾಮನ ಹುಬ್ಬು ಗಂಟಿಕ್ಕುತ್ತವೆ. ಆಲೋಚಿಸುತ್ತಾ ನಿಲ್ಲುತ್ತಾನೆ. ಬ್ರಾಹ್ಮಣನು ತನ್ನಲ್ಲಿಯೆ ತಾನು ಹೇಳಿಕೊಳ್ಳುತ್ತಾನೆ.]

ಈಗಳಾ ಶೂದ್ರಂಗೆ ತಕ್ಕುದಕ್ಕುಂ.
ಅಧರ್ಮಶ್ರವಣಮಾತ್ರದಿಂ, ಕೋಪದಿಂ,
ಏಂ ರೌದ್ರಮಾದುದೀ ರಾವಣಾರಿಯ ಮುಖಂ !

ಶ್ರೀರಾಮ.— (ಸೌಮ್ಯನಾದವನಂತೆ ಬ್ರಾಹ್ಮಣನ ಕಡೆಗೆ ತಿರುಗಿ)
ನಮಸ್ಕಾರಂಗೆಯ್ದಿರೇಂ ?

ಬ್ರಾಹ್ಮಣ.— (ಕಿವಿಮುಚ್ಚಿ)
ಶಿವ ಶಿವ ಶಿವ!
ಅಂತಪ್ಪ ಘೋರಮಂ ನಾವೆಸಗಿದೆವಲ್ತು.
ಅರಿಯದಾ ಕುವರಂ ಕೈಮುಗಿಯಲಿರ್ದನ್;
'ಮಾಣ್, ಶೂದ್ರಂಗೆ ತುಳಿಲ್‌ಗೆಯ್ಯಲಾಗ!'
ಎಂದಾಂ ಬುದ್ಧಿಯಂ ತಿದ್ದಿ ತಡೆದೆನ್.

ಶ್ರೀರಾಮ.— (ವ್ಯಂಗ್ಯವಾಗಿ)
ಎಂತಾದೊಡಂ ತಾಮ್ ವೇದಮೂರ್ತಿಗಳಲ್ತೆ!

ಬ್ರಾಹ್ಮಣ.— ನಿನ್ನ ರಾಜ್ಯದೊಳಿರ್ದುಮ್
ಅಸಿತೊಂದನಾದೊಡಂ ಅಧರ್ಮಮಂ
ತಡೆಯದಿರೆ ನರಕಮಾಗದೆ ನಮಗೆ?

ಶ್ರೀರಾಮ.— ಓವೊ ದಿಟಂ; ಸ್ವರ್ಗಮಪ್ಪುದನೆಸಗಿದಿರಿ!
ಆ ಸೈಪಿನೊಂದು ಮೆಯ್ಮೆಗೇ ನಿಮ್ಮರ್ಭಕಂ
ಸ್ವರ್ಗಸ್ಥನಾದನೆಂಬಿರೇಂ?

ಬ್ರಾಹ್ಮಣ.— ಅಲ್ತಲ್ತು, ರಾಮಚಂದ್ರ,
ಶೂದ್ರನ್ ತಪಂಗೆಯ್ವೊಂದು ಅಧರ್ಮಕ್ಕೆ,
ವರ್ಣಾಶ್ರಮ ಧರ್ಮದುಲ್ಲಂಘನೆಯ ಪಾಪಕ್ಕೆ,
ನಿನ್ನ ಬಾಲಪ್ರಜೆಯೊರ್ವನ್ ಬಲಿಯಾದನ್.—
ಮುಂದಾವ ಮಹತ್ಕಾರ್ಯಮಂ ಗೆಯ್ಯಲಿರ್ದನೊ?
ಆವ ಶಾಸ್ತ್ರವನೊರೆಯಲಿರ್ದನೊ?
ಆವ ಕಬ್ಬಮಂ ಕಟ್ಟಲಿರ್ದನೊ?
ಆವ ತಪದಿಂದಾವ ಸಿದ್ಧಿಯ ಪಡೆಯಲಿರ್ದನೊ?
ಆ ಪ್ರಜೆ ಶೂದ್ರನ ತಪೋದುಷ್ಕೃತಿಗೆ ಬೇಳ್ವೆಯಾದನ್!
ಪಾವಗಿದು ತೀರ್ದನ್! (ಅಳುತ್ತಾನೆ.)

ಶ್ರೀರಾಮ.— (ಸ್ವಗತ. ಕನಿಕರದಿಂದಲೂ ಕೋಪದಿಂದಲೂ)
ಈ ವರ್ಣ ಗರ್ವಾಂಧಂಗೆ,
ಈ ಶಾಸ್ತ್ರಮೂರ್ಖಂಗೆಂತೊ ಬುದ್ಧಿಗಲಿಪೆನ್?
ಶಂಬೂಕನ್ ಮಹಾಯೋಗಿ.
ತಪಸ್ವಿಯ ತಿರಸ್ಕೃತಿಗೆ ಮುನಿದ ಧರ್ಮಂ

ತಂದುದೀತನ ಮುದ್ದು ಕಂದಂಗೆ
ನನ್ನ ರಾಜ್ಯದೊಳುಂ ಅಕಾಲ ಮೃತ್ಯುವಂ.
ತನ್ನ ತಪ್ಪನೆ ತಿಳಿಯಲಾರದೀತನ್,
ಮರೆಯಿಂದಮೆನ್ನನ್,
ಬಹಿರಂಗಮಾ ಶಂಬೂಕಯೋಗಿಯನ್,
ನಿಂದಿಸುತ್ತಿರ್ಪನ್.

(ಆಲೋಚಿಸಿ, ನಿರ್ಣಯಿಸಿ, ಮತ್ತೆ)

ತೋರ್, ದ್ವಿಜನ್ಮ, ಶಂಬೂಕ ಏಪಿಸಮಂ.
ನಡೆವಮಾ ಎಡೆಗೆ, ತೊಡೆವಮ್ ಅಧರ್ಮಮಂ.
ರಾಮರಾಜ್ಯದೊಳ್ ಅಧರ್ಮಮೆ ಮೃತ್ಯು.
ಅಧರ್ಮ ಸಂಹಾರಮೆ ಮೃತ್ಯುವಿಜಯಂ :
ಅರಸ ಗೆಲ್ ಯಮನ ಸೋಲ್ !
ಬರ್ದುಕಲ್ ಧರ್ಮಂ ಬರ್ದುಕುವನ್ ನಿನ್ನಣುಗನ್ !

ಬ್ರಾಹ್ಮಣ.— (ಸ್ವಗತ)
ರಾಮನಿಂದೆಯುಮ್ ಅವ್ಯರ್ಥಮೆನಲ್
ಪೊಗಳ್ಕೆ ಇನ್ನೆಂತೊ ಸಫಲಮಕ್ಕುಂ? (ರಾಮನಿಗೆ)
ಪೋಗುವಂ, ರಾಕ್ಷಸಾರಿ. ಧನ್ಯನಾದೆನ್.

ಶ್ರೀರಾಮ.— ಬನ್ನಿಮ್. (ಆಕಾಶದೆಡೆಗೆ ನೋಡುತ್ತ)
ಪುಷ್ಪಕವೇರ್ದು ಶಂಬೂಕಾಶ್ರಮಕ್ಕೈದುವಮ್.

[ಶ್ರೀರಾಮನು ಉತ್ತರದಿಕ್ಕಿನ ಕಡೆಗೆ ನೋಡಿ ಪುಷ್ಪಕವನ್ನು ನೆನೆಯುತ್ತಾನೆ. ಬಹುಸಂಖ್ಯೆಯ ಕಿರುಗಂಟೆಯ ಟಿಂಟಣಿಯ ಮಧುರನಾದವು ಕೇಳಲಾರಂಭವಾಗುತ್ತದೆ. ಇಚ್ಛಾರೂಪದ ಕಾಮಗಮನದ ಆ ಬಾನ್ದೇರು, ಬೆಳ್ದಿಂಗಳೆ ಹೆಪ್ಪಾಯ್ತೊ ಎಂಬಂತೆ, ಮುಗಿಲ್‌ಮುಗಿಲ್ ಗೋಚರವಾಗಿ ನೆಲಕ್ಕಿಳಿಯುತ್ತದೆ. ಶ್ರೀರಾಮನೊಡನೆ ಬ್ರಾಹ್ಮಣನೂ ತೇರಿಗೆ ಪುಳಿಲ್‌ಗೆಯ್ದು ಅಡರುತ್ತಾನೆ. ವಿಮಾನವು ಮೇಲೆದ್ದು ಹಾರಿ, ದೂರದೂರವಾಗಿ, ಕಣ್ಮರೆಯಾಗಿ, ನಾದಾವಶೇಷವಾಗುತ್ತದೆ.]

ತೆರೆ ಬೀಳುತ್ತದೆ.

## ದೃಶ್ಯ ೩

[ಶಂಬೂಕಾಶ್ರಮದ ವನ್ಯಸೀಮೆ. ಹುಣ್ಣಿಮೆಯ ಬೆಳ್ದಿಂಗಳಲ್ಲಿ ಮಿಂದಿದೆ. ಎಲ್ಲೆಲ್ಲಿಯೂ ನಿಶ್ಶಬ್ದ. ಹೂವಿನ ಹೊದೆ ಬೆಳೆದ ಒಂದು ಹುತ್ತದೆಡೆ ಬ್ರಾಹ್ಮಣಕುಮಾರನು ಬಿದ್ದಿದ್ದಾನೆ. ಕಳೇಬರಕ್ಕೆ ಸಮೀಪದಲ್ಲಿ ಛಾಯಾರೂಪಿ ಮೃತ್ಯು ನಿಂತಿರುವುದು ಕಂಡುಬರುತ್ತದೆ. ಅಲ್ಲಿಗೆ ಅನತಿ

ದೂರದಲ್ಲಿಯೆ ಸಮಾಧಿಮಗ್ನನಾಗಿರುವ ಶಂಬೂಕ ಮಹರ್ಷಿಯ ಧ್ಯಾನಸ್ತಿಮಿತವಾದ ಆಕೃತಿಯೂ ಇಂಗಿತವಾಗಿ ಕಂಡುಬರುತ್ತದೆ. ಆತನ ಸುತ್ತಲೂ ಹಳು ಬೆಳೆದಿದೆ. ಶ್ಮಶ್ರುಮಯವಾದ ಮುಖವೂ ಜಟಾಸ್ತೋತಗಳೂ ಬಳ್ಳಿಗಳಲ್ಲಿ ಹೆಣೆಗೊಂಡಿವೆ. ಅರ್ಧಭಾಗದ ಮೆಯ್ಗೆ ಹುತ್ತವೂ ಬೆಳೆದಿದೆ. ಆ ಭವ್ಯ ದೃಶ್ಯವನ್ನಾವರಿಸಿ ಒಂದು ತೇಜಸ್ಸಿನ ಪರಿವೇಷವೂ ಕಂಗೊಳಿಸುತ್ತದೆ. ಸವಿಾಕ್ಷಿಸಿದರೆ ಮಾತ್ರವೆ ವೇದ್ಯವಾಗುವಷ್ಟರ ಮಟ್ಟಿಗೆ ಪ್ರಕೃತಿಲೀನವಾಗಿದೆ ಋಷ್ಯಾಕೃತಿ. ಇದ್ದಕ್ಕಿದ್ದ ಹಾಗೆ ವನದಲ್ಲಿ ಭಾವಸಂಚಾರವಾದಂತಾಗಿ, ಎಲರು ತೀಡಿ, ಹೂಬಳ್ಳಿ ಹೊದೆ ಎಲ್ಲವೂ ತಲೆಯೊಲೆಯುತ್ತವೆ. ಮೃತ್ಯುವೂ ಭಕ್ತಿಯಿಂದ ಬಾಗಿ ಕೈಮುಗಿಯುತ್ತದೆ. ಆ ದಿಕ್ಕಿನಿಂದಲೆ ಬ್ರಾಹ್ಮಣ ದ್ವಿತೀಯನಾಗಿ ಶ್ರೀರಾಮನು ಪ್ರವೇಶಿಸುತ್ತಾನೆ. ಆತನ ವದನವು ಭಾವದೀಪ್ತವಾಗಿದೆ. ತನ್ನಾನಂದಕ್ಕೆ ತಾನೆ ಮಾತಾಡಿಕೊಳ್ಳುವಂತಿದೆ.]

ಶ್ರೀರಾಮ.— ಏನ್ ಶಾಂತಿ ನೆಲೆಸಿರ್ಪುದೀ ಚೆಲ್ವಿನೊಳ್ !
ಅನುಭವಮೆ ಪೇಳ್ವುದು ಇದು ಋಷಿಯ ಬೀಡೆಂದು.
ತಪೋಮಹಿಮೆಗೆಣೆಯುಂಟೆ ?

(ರಸಾನುಭವ ಮಾಡುವವನಂತೆ ಧ್ಯಾನಭಂಗಿಯಿಂದ ನಿಲ್ಲುತ್ತಾನೆ.)

ಬ್ರಾಹ್ಮಣ.— (ಸ್ವಗತ)
ಸೋಜಿಗಮಾಗಿರ್ಪುದೀ ರಾಜೇಂದ್ರನೀ ತೆರಂ !
ಅರಮನೆಯೊಳಿರ್ಪೀತಂಗೆ ಗಿರಿವನಪ್ರಕೃತಿಯೆನೆ
ಅದೇನ್ ಪ್ರೇಮವೋ ? ಅದೇನ್ ಮೋಹವೋ ?
ಸೀತೆಯನ್ ಅರಣ್ಯಕೆ ವಿಸರ್ಜಿಸಿದೀತಂಗೆ
ಅರಣ್ಯಮೆ ಸೀತೆಯಾಗಿರ್ಪಳ್ !

ಶ್ರೀರಾಮ.— (ಬ್ರಾಹ್ಮಣಗೆ) ತೋರಿಮ್ ಆ ತಾಣಮಂ.

ಬ್ರಾಹ್ಮಣ.— ಬಾ, ಪ್ರಭೂ, ತೋರ್ದಪೆನ್. (ಮುಂದೆ ನಡೆದು)
ನೋಡಲ್ಲಿ ! ನೋಡಲ್ಲಿ, ಕೋಸಲೇಶ್ವರ,
ಕೆಡೆದಿರ್ಪುದೆನ್ನ ಕುಲಗೋಪುರದ ಕಲಶಮಣಿ !

(ಮುಂದೆ ನುಗ್ಗಿ)

ರಕ್ಷಿಸಯ್, ರಕ್ಷಿಸಯ್ ನನ್ನೀ ಕಣ್ಮಣಿಯಂ !

(ಶವದೆಡೆ ಕುಸಿಯುತ್ತಾನೆ)

ಶ್ರೀರಾಮ.— (ಪ್ರಯತ್ನಿಸಿದರೂ ಸಾಧ್ಯವಾಗದೆ ಅಸ್ಥಿರನಾಗಿ ಕಣ್ತೊಯ್ದು, ಸ್ವಗತ)
ಸ್ಥಿತಪ್ರಜ್ಞಂಗುಂ ಅಧೈರ್ಯಮನೊಡರ್ಚುವುದೀ
ಪುತ್ರಶೋಕದ ದೃಶ್ಯಮೇಗಳುಮ್ !
ಸನ್ನಗಲ್ಕೆಗಂದು ಎದೆಬಿರಿಯಲ್ ಪಳಯಿಸಿದಾ

ನನ್ನಯ್ಯನಂ ಬಗೆಗೆ ತರ್ಪ್ಪನೀ ಮುದುಕ ತಂದೆ!—
ಏನ್ ಮಾಯೆ?
ಅಮೃತ ಸಾಕ್ಷಾತ್ಕಾರಮಾರ್ದರ್ಗಂ
ಮೃತ್ಯು ಸಂಕಟಕರಂ!
ನಾಟಕದ ನಿಜವನರಿವುದು
ನೇಪಥ್ಯಮಂ ಪೊಕ್ಕ ಮೇಲಲ್ತೆ?

(ಬ್ರಾಹ್ಮಣನ ಬಳಿಗೆಯ್ದಿ)

ರೋದಿಸದಿರ್ ಅಬೋಧನೊಲ್, ವೇದವೇತ್ತ.
ನಡೆದೊಂದಧರ್ಮಮಂ ಪರಿಹರಿಸಲೊಡಂ
ಅಮೃತನಕ್ಕುಮ್ ನಿನ್ನೀ ಚಿರಂಜೀವಿ!

ಬ್ರಾಹ್ಮಣ.— (ಉನ್ಮತ್ತ ಹರ್ಷದಿಂದ ಮೇಲೆದ್ದು)
"ಅಮೃತನಕ್ಕುಮ್ ನಿನ್ನೀ ಚಿರಂಜೀವಿ!"
ಸತ್ಯವಾಕ್ ನೀನ್, ಇಕ್ಷ್ವಾಕು ಕುಲೇಂದ್ರ,
ಇನ್ ಎನ್ನ ಕಂದನ್ ಚಿರಂಜೀವಿ!—
ಪರಿಹರಿಸಾ ಅಧರ್ಮಚಾರಿಯನ್ ಶೀಘ್ರದಿಂ.

ಶ್ರೀರಾಮ.— (ಕೈಮುಗಿದು ನಿಂತಿದ್ದ ಮೃತ್ಯುದೇವತೆಯನ್ನು ಪ್ರಸನ್ನದೃಷ್ಟಿಯಿಂದ ನೋಡುತ್ತಾ)
ಇದೇನ್ ನೀನ್, ಈ ತಪೋವಿಪಿನದೊಳ್? (ಮುಗುಳ್ನಗೆವೆರಸಿ)
ಉಪವಾಸಮಾಚರಿಸುತಿರ್ಪಿರ್ಯೇನ್?

ಮೃತ್ಯು.— (ಹಸನ್ಮುಖಿಯಾಗಿ) ತಪಂಗೆಯ್ಯುತಿರ್ಪೆನ್!

ಶ್ರೀರಾಮ.— (ವಿನೋದದಿಂದ) ಆರ ಅಮಂಗಳದ ಅದಾವ ಸಿದ್ಧಿಗೋ?

ಮೃತ್ಯು.— ದೈತ್ಯವೈರಿಯ ಧರ್ಮಸಿದ್ಧಿಗೆ!

ಶ್ರೀರಾಮ.— ಅನೇಕ ವಂದನಂಗಳ್ ನಿನಗೆ!

ಮತ್ಯು.— ಧನ್ಯಳೆನ್!

ಬ್ರಾಹ್ಮಣ.— (ಶ್ರೀರಾಮನನ್ನು ವಿಸ್ಮಯದಿಂದ ನೋಡುತ್ತಾ ತನ್ನಲ್ಲಿಯೆ)
ಆರೊಡನೆ ಸಂವಾದಮೀ ಆಕಾಶವರ್ಣಂಗೆ!

ಶ್ರೀರಾಮ.—ದ್ವಿಜೋತ್ತಮ, ನೀಂ ಪೇಳ್ದಾ ಅನಧಿಕಾರಿ,
ಆ ಶೂದ್ರನ್,
ತಪವಿರ್ಪ ತಾಣಮಂ ತೋರ್ಪುದೆ ತಡಂ.

ಬ್ರಾಹ್ಮಣ.— (ಕೈದೋರಿ) ಅದೆ ನೋಡಾ ವಲ್ಮೀಕದೆಡೆ.

ಶ್ರೀರಾಮ.— (ಸ್ವಗತ)

ಏನ್ ಜಿಹ್ವೆ ಈ ಪಾರ್ವನದು ?
ಮಾತು ಮಾತಿಸೊಳೆನ್ನ ಮರ್ಮಮಂ ಚುಚ್ಚುವನ್.
ವಲ್ಮೀಕಮೆಂಬಾ ಪದವನಾಲಿಸಿದೆನಗೆ
ಸೀತೆಯುಂ ಸಲಹುತಿರ್ಪಾ ಮಹಾ ಕವೀಶ್ವರನ
ನೆನಹು ಮೊಳೆತು
ಏಕೊ ಉಕ್ಕುತಿರ್ಪುದು ಮನಕೆ ದಿವ್ಯದುಃಖಂ !
ಆ ಕವಿಋಷಿಯುಮಿಾ ಶಂಬೂಕನೊಲೆ
ಶೂದ್ರನ್ನೈಸೆ ?
ವ್ಯಾಧವೃತ್ತಿಯೊಳಿರ್ದವಂ ಉಗ್ರತಪದಿಂ
ಮಹರ್ಷಿತ್ವಕೇರ್ದನ್ನೈಸೆ ?
ತಪೋಮಹಿಮೆಗೆಣೆಯುಂಟೆ ?

[ಬ್ರಾಹ್ಮಣನು ಕೈದೋರಿದ ಕಡೆಗೆ ನೋಡುತ್ತಾ ಬಿಲ್ಲನ್ ಅಣಿಮಾಡುವ ನೆವದಿಂದಲೆಂಬಂತೆ ಶಂಬೂಕಮಹರ್ಷಿಗೆ ಕೈಜೋಡಿಸುತ್ತಾನೆ.]

ಬ್ರಾಹ್ಮಣ.— (ಬೆಚ್ಚಿ ತನ್ನೊಳಗೆ)

ಇದೇನ್ ?
ತಪಂಗೆಯ್ವ ಪಾಷಂಡಿಗೆ ಕೈಮುಗಿವನೋ ?
ಮೇಣ್, ಬಿಲ್ಗೆ ಹೆದೆಯಂ ಬಲಿವ ಬಿಜ್ಜೆಯ ಪಾಂಗೊ ?
ಅರಿಯೆನೀ ಪಾರ್ಥಿವೇಂದ್ರನ ವಿಚಿತ್ರಕೃತಿಯಂ !

(ಬೆರಗುನೋಟದಿಂದ ನಿಲ್ಲುತ್ತಾನೆ)

ಶ್ರೀರಾಮ.— (ಬ್ರಾಹ್ಮಣನ ಕಡೆ ತಿರುಗಿ)

ಭೂಸುರೋತ್ತಮ,
ಕ್ಷತ್ರಿಯನೊಂದು ಸಂದೇಹಮಂ ನಿವಾರಿಸಿ
ಕೃಪೆಗೆಯ್ಯುವೇಳ್ಕುಮ್.

ಬ್ರಾಹ್ಮಣ.— (ವಿನಯದಿಂದ) ನನ್ನಲ್ಪಬುದ್ಧಿಗೆ ತೋರ್ಪುದಂ ಪೇಳ್ವೆನ್.

ಶ್ರೀರಾಮ.— (ವ್ಯಂಗದಿಂದಾದರೂ ಗಂಭೀರವಾಗಿ)

ಪೂಜ್ಯರ್ ಉದಾತ್ತ ಬುದ್ಧಿಯಿನ್ ಒರೆಯುವೇಳ್ಕುಮ್.

ಬ್ರಾಹ್ಮಣ.— ಯಥಾ ಸಾಮರ್ಥ್ಯಮನ್, ರಾಜೇಂದ್ರ.

ಶ್ರೀರಾಮ.— ತಪಂ ಪೂಜ್ಯಕರ್ಮಮಲ್ತೆ, ದ್ವಿಜೇಂದ್ರ ?

ಬ್ರಾಹ್ಮಣ.— ತಪಕ್ಕೆಣೆಯುಂಟೆ, ರಾಘವೇಂದ್ರ?

ಶ್ರೀರಾಮ.— ತಪಂಗೆಯ್ವನುಂ ಪೂಜ್ಯನಲ್ತೆ; ವಿಬುಧವರ್ಯ.

ಬ್ರಾಹ್ಮಣ.— ದಿಟಂ, ಧರ್ಮಮೂರ್ತಿ.

ಶ್ರೀರಾಮ.— ಪೂಜ್ಯ ಹನನಂ ಪಾಪಕರಮಲ್ತೆ, ಸತ್ತ್ವಶೀಲ?

ಬ್ರಾಹ್ಮಣ.— ನಿಸ್ಸಂಶಯಂ, ವಾಲಿಸಂಹಾರಿ.

ಶ್ರೀರಾಮ.— (ಹುಬ್ಬುಗಂಟಿಕ್ಕಿ ನಿಧಾನವಾಗಿ ಹೇಳುತ್ತಾನೆ)
ಅಂತೆವೋಲ್
ಈ ತಪಸ್ವಿಯುಂ ಕೊಲ್ವುದುಂ ಪಾಪಮಾಗದೆ!

ಬ್ರಾಹ್ಮಣ.— ವಸಿಷ್ಠ ಶಿಷ್ಯ,
ತರ್ಕಕೆ ಮಿಗಿಲ್ ಶ್ರುತಿವಾಕ್ಯಮೈಸೆ!
ತಪಕ್ಕನಧಿಕಾರಿ ಶೂದ್ರನ್
ಎಂಬುದದು ಶಾಸ್ತ್ರ ಪ್ರಸಿದ್ಧಂ.
ಕೃತಯುಗದೊಳ್ ತಪಕ್ಕರ್ಹರ್ ಬ್ರಾಹ್ಮಣರ್ ಮಾತ್ರಂ.
ತ್ರೇತೆಯೊಳ್ ಕ್ಷತ್ರಿಯರುಮ್ ಅರ್ಹರ್.
ವೈಶ್ಯರುಂ ತಪಂಗೆಯ್ವರಾ ದ್ವಾಪರದೊಳ್.
ಕಲಿಕಾಲಂ ಬರಲ್ ಶೂದ್ರನುಂ ತಪಸ್ವಿ!
ಅದು ಕಾರಣದಿಂ
ಕೃತಯುಗದೊಳ್ ನಾಲ್ಕುಂ ಕಾಲೊಳ್ ನಿಂತ ಧರ್ಮಂ
ತ್ರೇತೆಯೊಳ್ ಮೂಗಾಲಿಯಕ್ಕುಮ್;
ದ್ವಾಪರದೊಳ್ ದ್ವಿಪಾದಿ;
ಕಲಿಯುಗದೊಳ್ ಒಂಟಿಗಾಲೊಳ್ ಕುಂಟಿ
ತತ್ತರಿಸಿ ಸತ್ತುರುಳ್ವುದಾ ವಿಲಯದತ್ತಣ್ಗೆ.—
ಕೇಳ್, ವರ್ಣಾಶ್ರಮ ಧರ್ಮಪಾಲಕ,
ಪಾಲ್ ಪೂಜ್ಯಮಾದೊಡಂ,
ಜೀವಾತುವಾದೊಡಂ,
ತ್ಯಾಜ್ಯಮಾ ನಾಯ ಪಾಲ್:
ನಾಯ ಪಾಲ್ಗೆಣೆ ಶೂದ್ರನ ತಪಂ!

ಶ್ರೀರಾಮ.— (ಕೋಪವನ್ನು ತೋರಗೊಡದೆ ವ್ಯಂಗ್ಯದಿಂದ)
ಸಾರ್ಥಕಮ್ ನೀಂ ಕಲ್ತ ಬಿಜ್ಜೆ, ಆಚಾರ್ಯ!

(ಸುಯ್ವನ್)

ನಿಮಗೆ ಸಮ್ಮತಮಲ್ತೆ ಬಾಣಪ್ರಯೋಗಂ?
ಬ್ರಾಹ್ಮಣ.— ಅಪ್ಪುದಯ್, ಧನುರ್ಧರ,
ಶಿಕ್ಷೆಗರ್ಹನೀ ಶೂದ್ರತಪಸ್ವಿ.
ಶ್ರೀರಾಮ.— ಶೂದ್ರನಪ್ಪೊಡಂ ತಪಂ ಶಕ್ತಿದಾಯಕಂ.
ಸೊಲದೀತನ ಕೊಲೆಗೆ ಸಾಮಾನ್ಯಸಾಯಕಂ.
ಬ್ರಾಹ್ಮಣ.— ಆವ ದಿವ್ಯಾಸ್ತ್ರದಿಂ ದೈತ್ಯೇಂದ್ರ ರಾವಣನ
ದಶಶಿರಗಳುರುಳಿದುವೊ ಅದನೆ ತುಡು, ಅರಿಂದಮ;
ಪಾಪ ಕರ್ಮದೊಳೀತನಾತಂಗೆ ಕೀಳಲ್ಲ.
ಶ್ರೀರಾಮ.— ಬ್ರಹ್ಮಾಸ್ತ್ರಂ ಅತಿಭಯಂಕರಂ, ದ್ವಿಜನ್ಮ.
ತನ್ನರಿಯನ್ ಅರಿಯದೆಯೆ ಬಿಡದೆಂತಾದೊಡಂ.
ಬ್ರಾಹ್ಮಣ.— ಈ ಪಾಷಂಡಿಗದು ತಕ್ಕುದೆ ವಲಂ!
ತುಡು, ಕೋದಂಡಪಾಣಿ!

[ಶ್ರೀರಾಮನು ಬತ್ತಳಿಕೆಗೆ ಕೈಯಿಕ್ಕುತ್ತಾನೆ. ಭೂಮಿ ನಡುಗುತ್ತದೆ. ಗಗನ ಗುಡುಗುತ್ತದೆ. ಬ್ರಾಹ್ಮಣನು ಹೆದರಿ, ಸೆಡೆತು, ರಾಮನ ಮರೆಗೆ ಹೊಗುತ್ತಾನೆ. ಮೃತ್ಯು ಬೆಪ್ಪಾಗಿ ಕೂಗುತ್ತದೆ.]

ಮೃತ್ಯು.— ತಾಳ್ ತಾಳ್, ಋತಪ್ರಭೂ!
ಶ್ರೀರಾಮ.— (ಮೃತ್ಯುವನು ಲಕ್ಷಿಸಿ) ನಿನಗಿದೇನ್ ತಲ್ಲಣಂ?
ಮೃತ್ಯು.— ಇದೇನ್ ಆಟವೋ ದಿಟವೋ?
ನನಗರಿವುದೋರ್!
ನನಗಾವುದು ನಡೆವ ಬಟ್ಟೆ?
ಶ್ರೀರಾಮ.— (ಹುಬ್ಬುಗಂಟಿಕ್ಕಿ)
ಮೃತ್ಯೂ,
ಅಲಂಘ್ಯಮೇಗಳುಂ ಕರ್ತವ್ಯಮಖಿಲರ್ಗಂ!—
ಮಾರ್ಗದರ್ಶಿ ಈ ಮಹಾಸ್ತ್ರಂ.
ಮೃತ್ಯು.— ಆಜ್ಞೆ! (ತಲೆಬಾಗಿ, ಅಸ್ತ್ರಾನುಸಾರಿಯಾಗಲು, ಸಿದ್ಧವಾಗುತ್ತದೆ.)

[ಶ್ರೀರಾಮನು ಬ್ರಾಹ್ಮಾಸ್ತ್ರವನ್ನು ತೊಟ್ಟು, "ಅರಸಿ ಕೊಲ್ ಅಸಗುಲಿಯನ್!" ಎಂದು ಆಘೋಷಿಸಿ, ಸೆಳೆದು ಬಿಡುತ್ತಾನೆ. ಮಿಂಚು ತಳಿಸುತ್ತದೆ. ಸಿಡಿಲೆರಗುತ್ತದೆ. ಬಿರುಗಾಳಿ ಭೋರಿಡುತ್ತದೆ. ಧೂಳಿ ಕವಿಯುತ್ತದೆ. ಅರಣ್ಯ ಸಮಸ್ತವೂ ತಪಿಸಿ ಚೀತ್ಕರಿಸುತ್ತದೆ. ಮೃತ್ಯುವಿನ ಕರಾಳ ಛಾಯೆ ರೌದ್ರರೋಷದಿಂದಲೂ ಶರವೇಗದಿಂದಲೂ ಅಸ್ತ್ರವನು ಹಿಂಬಾಲಿಸುತ್ತದೆ. ತಪಸ್ವಿಯ ಸಮೀಪ ಕೈದಿದ ಬ್ರಹ್ಮಾಸ್ತ್ರವು ತನ್ನ ಉಗ್ರತೆಯನ್ನುಳಿದು, ವಿನೀತವಾಗಿ, ಶಂಬೂಕ ಋಷಿಯನ್ನು ಬಲಗೊಂಡು

ಅಡ್ಡ ಬೀಳುತ್ತದೆ. ಮೃತ್ಯುವೂ ಅದನ್ನೇ ಅನುಕರಿಸುತ್ತದೆ. ಬೆಬ್ಬಳಿಸಿ ನೋಡುತ್ತಿರುವ ಬ್ರಾಹ್ಮಣನಿಗೆ ಶ್ರೀರಾಮನು ಮುಗುಳುನಗೆಗೂಡಿ ಹೇಳುತ್ತಾನೆ.]

ಶ್ರೀರಾಮ.— ಇದೇನ್, ಆಚಾರ್ಯ ?

ಬ್ರಾಹ್ಮಣ.— ಹೇ ದಾಶರಥಿ, ಇದೆಲ್ಲಂ ಶೂದ್ರತಪಸ್ವಿಸ
ತಮಃ ಪ್ರಭಾವಮೆ ದಲ್ !
ನೀನೆಚ್ಚ ಬ್ರಹ್ಮಾಸ್ತ್ರಮುಂ ಆಯ್ತೆ ನಿಷ್ಫಲಂ ?

ಶ್ರೀರಾಮ.— ಬ್ರಹ್ಮಾಸ್ತ್ರಮಾದಪುದೆ ನಿಷ್ಫಲಂ ?
ಈಗಳೆಯೆ ಸಫಲಮಕ್ಕುಂ.

ಬ್ರಾಹ್ಮಣ.— (ಅಚ್ಚರಿಯಿಂದ) ಎಂತು ?

ಶ್ರೀರಾಮ.— ಋಷಿವರಗೆ ಮರ್ಯಾದೆಯಂ ಸಲಿಸಿ,
ತದನಂತರಂ, ಬರ್ಪುದಿತ್ತಣ್ಗೆ.

ಬ್ರಾಹ್ಮಣ.— ಮತ್ತಮಿತ್ತಣ್ಗೆ ? ಅದೇಕಯ್ ?

ಶ್ರೀರಾಮ.— ಧ್ವಂಸಗೆಯ್ಯಲ್ಕೆ ತನ್ನ ಹಗೆಯನ್ !

ಬ್ರಾಹ್ಮಣ.— ಆರನ್ ?

ಶ್ರೀರಾಮ.— ಅಧರ್ಮಿಯನ್.

ಬ್ರಾಹ್ಮಣ.— ಆ ಶೂದ್ರಸನೆ ?

ಶ್ರೀರಾಮ.— ಅಲ್ತಲ್ತು. ಬ್ರಾಹ್ಮಣವರೇಣ್ಯಸನ್ !

ಬ್ರಾಹ್ಮಣ.— ಬ್ರಾಹ್ಮಣ ವರೇಣ್ಯಸನ್ ?

ಶ್ರೀರಾಮ.—(ದರ್ಪಧ್ವನಿಯಿಂದ)
ಪೂಜ್ಯರನ್ ಅವಜ್ಞೆಗೆಯ್ದಾತನನ್ ;
ಶಾಸ್ತ್ರ ಸಂಭ್ರಾಂತನನ್, ದುರ್ವಿನೀತನನ್ !

ಬ್ರಾಹ್ಮಣ.— (ಶ್ರೀರಾಮನ ಇಂಗಿತಕ್ಕಳ್ಕಿ) ಅ್ಞಃ ? !

ಶ್ರೀರಾಮ.— (ಬ್ರಾಹ್ಮಣನ ಕಡೆಗೆ ನೋಡದೆ) ನಿನ್ನನ್, ದ್ವಿಜೋತ್ತಮ !

ಬ್ರಾಹ್ಮಣ.— ರಕ್ಷಿಸು, ಅನಾಥರಕ್ಷಕಾ, ದೀನಬಂಧೂ ! (ಕಾಲ್ವಿಡಿಯಲೆಳಸುತ್ತಾನೆ.)

ಶ್ರೀರಾಮ.— (ಅವನ ಕಡೆಗೆ ನೋಡದೆ)
ನೀಮ್ ಅವಜ್ಞೆಗೆಯ್ದುದು ನನ್ನನಲ್ತು.

ಬ್ರಾಹ್ಮಣ.— ಗತಿಯೇನೆನಗೆ ಬಟ್ಟೆದೋರಯ್,
ಕ್ಷಮಾಕನ್ಯಾ ಜೀವಿತೇಶ್ವರ !

ಶ್ರೀರಾಮ.— (ಅವನ ಕಡೆಗೆ ನೋಡದೆ)
ಮಾರ್ಗದರ್ಶಿ ಆ ಮಹಾಸ್ತ್ರಂ !

ಬ್ರಾಹ್ಮಣ.— ಅಂತೆಗೆಯ್ವೆನ್ ; ನಿನ್ನಾಜ್ಞೆ.

ಶ್ರೀರಾಮ.— (ಅವನನ್ನು ನೋಡಿ, ದಯೆಯಿಂದ)

ಸಾಲದಿಲ್ಲಿಗೆ ಬರಿಯ ಆಜ್ಞಾಪಾಲನಂ.

ಕಣ್‌ದೆರೆಯವೇಳ್ಕುಂ ಬುಧಪ್ರಜ್ಞೆಯುಂ, ದ್ವಿಜನ್ಮ :

ತಂದೆಯುಂ ಬರ್ದುಕುವನ್ ; ಕಂದನುಂ ಬಳ್ದಪನ್.

ಬ್ರಾಹ್ಮಣ.— ಅಶಾಸ್ತ್ರಮೆಂದಳ್ಕುವೆನ್, ಕ್ಷತ್ರಿಯೋತ್ತಮ.

ಶ್ರೀರಾಮ.— ಸನ್ಮತಿಯ ಸತ್ಕೃತಿಗೆ ಶಾಸ್ತ್ರದ ನೆರಂ ಬೇಕೆ ?

ಆದೊಡಂ ನಿನಗೋಸುಗಮ್ ಒರೆವೆನೊಂದನ್,

ಶ್ಲೋಕಪ್ರಮಾಣಮನ್ : ಕೇಳ್, ಶ್ರೋತ್ರೀಯ !

ಆಕಾಶವಾಕ್.— "ಕೇವಲಂ ಶಾಸ್ತ್ರಮಾಶ್ರಿತ್ಯ ನ ಕರ್ತವ್ಯೋ ವಿನಿರ್ಣಯಃ |

ಯುಕ್ತಿಹೀನ ವಿಚಾರೇ ತು ಧರ್ಮಹಾನಿಃ ಪ್ರಜಾಯತೇ ||"

ಬ್ರಾಹ್ಮಣ.— (ಎವೆಯಿಕ್ಕದೆ ಶ್ರೀರಾಮನನ್ನೇ ನೋಡುತ್ತಾ ತುಸುಹೊತ್ತು ನಿಂತು, ತೆಕ್ಕನೆ)

ಬೋಧಮಾಯ್ತೆನಗೀಗಳ್, ಮಹಾಪ್ರಾಜ್ಞ.

ಬುದ್ಧಿಗಲಿಸಿದಯ್ ಸಂಪ್ರದಾಯಬದ್ಧಂಗೆ,

ಶಾಸ್ತ್ರಸಂಮೂಢಂಗೆ, ಜಾತಿಗರ್ವಾಂಧಂಗೆ.—

ಆವ ಜಾತಿಯು ತರುವೊ ? ಇಂಧನಕೆ ಹೊರತುಂಟೆ ?

ಬೆಂಕೆಗೇಂ ಭೇದಮೆ ? ದಳ್ಳುರಿಗೆ ದಾಕ್ಷಿಣ್ಯವೆ ?

ಆರಾದರೇನ್ ? ಆರಾಧ್ಯರ್ ತಪೋಧನರ್ !

ನಮಸ್ಕಾರಮೆ ಪುಣ್ಯಂ ; ತಿರಸ್ಕಾರಮೆ ಪಾಪಂ !

ಶ್ರೀರಾಮ.— ಅವರ್ಗೇನ್ ಗೆಯ್ದೊಡಂ ಪುಣ್ಯಮೆಂದರಿವಿರೀಗಳ್ :

ಭೂಮದಿಂದೆಂತಾದೊಡಂ ಅಲ್ಪಫಲಮಕ್ಕುಮೇ ?

ಪೀಡಿಸಿದೊಡಮ್ ಇಕ್ಷು ಮಧುರಸವನೀವಂತೆ,

ಕಡೆದೊಡಂ ಕಡಲ್ ಅಮೃತಮಂ ಕೊಡುವಂತೆ,

ನಿಮಗೊಳ್ಳಿತಕ್ಕುಮ್, ವಿಪ್ರದೇವ !

[ಮುಂದೆ ಮುಂದೆ ಹೂಣಗೊಂಡವನಂತೆ ನಡೆದು ಬ್ರಾಹ್ಮಣನು ಶಂಬೂಕ ಮಹರ್ಷಿಗೆ ಸಾಷ್ಟಾಂಗಪ್ರಣಾಮ ಮಾಡುತ್ತಾನೆ. ವನವೆಲ್ಲ ಸಸಂಭ್ರಮವಾಗುತ್ತದೆ. ಹೂಮಳೆಗರೆಯುತ್ತದೆ. ದೇವದುಂದುಭಿ ಮೊಳಗುತ್ತದೆ. ಮೃತ್ಯುಛಾಯೆ ಬೇಗಬೇಗನೆ ಓಡಿ ಕಣ್ಮರೆಯಾಗುತ್ತದೆ. ಬ್ರಾಹ್ಮಣ ಕುಮಾರನು ಮಲಗಿದ್ದವನು ಏಳುವಂತೆ ಎದ್ದು ಕಣ್ಣುಜ್ಜಿಕೊಂಡು, ಸುತ್ತಲೂ ನೋಡಿ, ತನ್ನ ತಂದೆಯನ್ನು ಕರೆಯುತ್ತಾನೆ.]

ಕುಮಾರ.— ತಾತ! ತಾತ! — ಓ ತಾತಾ! —

ಹೂ ಕುಯ್ಯುತಿದ್ದವನ್ ಇಲ್ಲಿಯೆ ಮಲಗಿದೆನೆ? —

ಎತ್ತವೋದನೊ ತಾತನ್ ನನ್ನನಿಲ್ಲಿಯೆ ಬಿಟ್ಟು?

(ಹೂಬುಟ್ಟಿ ತೆಗೆದುಕೊಂಡು ಮುಂಬರಿದು ರಾಮನನ್ನು ನೋಡಿ)

ಆರೀತನ್ ರುಂದ್ರಸತ್ತ್ವನ್? ದೇವತೆವೋಲ್ ಪೊಳೆವನ್!

ಶ್ರೀರಾಮ.— ಅಂಜದಿರ್, ಬಾ ವತ್ಸ, ನಿನ್ನಯ್ಯನದೋ (ತೋರುತ್ತಾನೆ.)

[ಎದ್ದು ಬರುತ್ತಿದ್ದಾ ಹೊಸ ತೇಜಸ್ಸಿನಿಂದ ಹೊಳೆಯುತ್ತಿದ್ದಾ ಬ್ರಾಹ್ಮಣನನ್ನು ನೋಡಿ ಕುಮಾರನು 'ತಾತ! ತಾತ!' ಎನ್ನುತ್ತಾ ಓಡಿಹೋಗಿ ತಬ್ಬಿಕೊಳ್ಳುತ್ತಾನೆ. ಮಾತಿಲ್ಲದ ಹರ್ಷದಿಂದ ಕಣ್ಣೀರಿಡುತ್ತಾ ಬ್ರಾಹ್ಮಣನು ಮಗನನ್ನು ರಾಮನೆಡೆಗೆ ಕರೆತರುತ್ತಾನೆ.]

ಬ್ರಾಹ್ಮಣ.— (ಸಗದ್ಗದನಾಗಿ)

ಕೈಮುಗಿ, ಕಂದಾ, ಸೀತಾಪತಿಗೆ.

ರಾಜರಾಜೇಂದ್ರಂಗೆ! ಶ್ರೀರಾಮಚಂದ್ರಂಗೆ!

ನಮ್ಮಿರ್ವರುಮನ್ ಪೊರೆದಂಗೆ!

[ಕುಮಾರನು ಹಿಗ್ಗಿ ಕೈಮುಗಿಯುತ್ತಾನೆ. ಶ್ರೀರಾಮನು ಅವನನ್ನೆತ್ತಿ, ಮುದ್ದಾಡಿ, ಶಂಬೂಕ ಋಷಿಯನ್ನು ತೋರಿಸುತ್ತಾನೆ.]

ಶ್ರೀರಾಮ.— ನಮಸ್ಕರಿಸಾ ಮಹಾತಪಸ್ವಿಗೆ, ದ್ವಿಜಕುಮಾರ.

ಋಷಿಕೃಪೆಯಿಂ ನೀನಿಗಳ್ ದಿಟದಿಂ ದ್ವಿಜನ್.

ತಪಂ ತಾನಿರ್ಪೆಡೆಯೊಳೆ ದೂರಕರ್ಮಿ! (ಕುಮಾರನು ಕೈಮುಗಿಯುತ್ತಾನೆ.)

ನಿನ್ನ ಕೈಗಳೆ ನಿನ್ನನೆತ್ತಿರ್ಪನ್ನ ಕೈಗಳಕ್ಕೆ!

ಅಖಿಲರ್ಗಂ ಶ್ರೇಯಮಕ್ಕೆ!

ರಾಜ್ಯಂ ನಿರ್ವಿಘ್ನಮಕ್ಕೆ! ಋತಂ ಗೆಲ್ಗೆ!

[ಕುಮಾರನಂತೆ ಬ್ರಾಹ್ಮಣನೂ ಕೈಮುಗಿಯುತ್ತಾನೆ. ಶಂಬೂಕಋಷಿಯನ್ನು ಸುತ್ತಮುತ್ತಿದ್ದ ಹೊದೆಯ ಹಳು ಅಲುಗುತ್ತದೆ. ತೋಳ್ಗರೆರಡು ಹೊರದೋರಿ ಒಯ್ಯನೆ ಆಶೀರ್ವಾದ ಮುದ್ರೆಯಲ್ಲಿ ಸ್ಥಾಯಿಯಾಗುತ್ತವೆ. ದೇವವೀಣಾಗಾನವು ವಾಯುಮಂಡಲವನ್ನೆಲ್ಲ ತುಂಬುತ್ತದೆ. ಪುಷ್ಪವೃಷ್ಟಿಯಾಗಿ, ಆ ವೃಷ್ಟಿಧಾರೆಯೆ ನೆಯ್ದ ಜವನಿಕೆಯೆಂಬಂತೆ ದೃಶ್ಯದ ಮೇಲೆ ತೆರೆಬೀಳುತ್ತದೆ.]

ಕುವೆಂಪು.

ಸಂಪೂರ್ಣಂ.

# ಅಲಂಪೂರು

" ನಾನು ಹೇಳುವುದು ಅತ್ಯುಕ್ತಿಯಲ್ಲ, ರಾಯರೇ. ಆ ಊರು ಪುಣ್ಯಕ್ಷೇತ್ರ ವೆನಿಸಿ ದಕ್ಷಿಣಕಾಶಿ ಎಂದು ಹೆಸರಾಗಿರುವುದಲ್ಲದೆ ನಿಮ್ಮಂತಹರು ಸಂದರ್ಶಿಸತಕ್ಕ ಚಾರಿತ್ರಕ ವಿಷಯಗಳೂ ಅಲ್ಲಿ ಹೇರಳವಾಗಿವೆ. ನೀವು ಆ ಸ್ಥಳವನ್ನು ಅಗತ್ಯವಾಗಿ ನೋಡಬೇಕು."

ಕಳೆದ ಫೆಬ್ರುವರಿ ತಿಂಗಳು; ಕರ್ನೂಲ ಜಿಲ್ಲೆಯ ನಂದೀಕೊಟ್ಕೂರ ತಾಲೂಕಿನಲ್ಲಿ ಅನ್ವೇಷಣ ಸಂಚಾರಮಾಡುತ್ತಿರುವಾಗ ಪರಿಚಿತರೊಬ್ಬರು ಈ ಮೇರೆಗೆ ಹತ್ತಿರದಲ್ಲಿ ಇರುವ ಅಲಂಪೂರು ಗ್ರಾಮದ ಸಮಾಚಾರವನ್ನು ಅರುಹುತ್ತ ನಾನದನ್ನು ನೋಡುವುದಾಗಿ ಸೂಚಿಸಿದರು. ನಂದೀಕೊಟ್ಕೂರು ತಾಲೂಕಿನ ಕೆಲಭಾಗಕ್ಕೆ ವಾಯವ್ಯ ಮೇರೆಯಾಗಿ ಹರಿದ ತುಂಗಭದ್ರೆ ನೈಜಾಂ ರಾಜ್ಯ ಮತ್ತು ಮದ್ರಾಸ್ ಪ್ರಾಂತಗಳನ್ನು ಬೇರ್ಪಡಿಸುವ ಎಲ್ಲೆಕಟ್ಟಾಗಿದೆ. ಅಲಂಪೂರು ಈ ಹೊಳೆಯ ಆಚೆಯ ದಂಡೆಯಲ್ಲಿ ನೆಲಸಿದ್ದು ನೈಜಾಂ ರಾಜ್ಯಕ್ಕೆ ಸೇರಿದೆ. ಅದು ರಾಯಚೂರ ಜಿಲ್ಲೆಯಲ್ಲಿಯ ಅದೇ ಹೆಸರಿನ ತಾಲೂಕಿನ ಮುಖ್ಯಸ್ಥಳವು. ಪರಿಚಿತರ ಸೂಚನೆಯಂತೆ ಈ ಊರನ್ನು ನೋಡುವುದಾಗಿ ನಿರ್ಧರಿಸಿ ಒಂದು ದಿನ ಅಲ್ಲಿಗೆ ಹೊರಟೆನು.

ಈ ಊರನ್ನು ಸುತ್ತಿಕೊಂಡು ಬರುವ ಸಾಮಾನ್ಯ ಪ್ರವಾಸಿಯ ಕಣ್ಣಿಗೂ ಇಲ್ಲಿಯ ಇಂದಿನ ಅರಸೊತ್ತಿಗೆಯ ಕುರುಹುಗಳು ಸಾಕಷ್ಟು ಬೀಳದಿರಲಾರವು. ಆದರೆ ಇಂದಿನ ಈ ನಾಗರಿಕತೆಗಿಂತ ಹೆಚ್ಚು ಆಕರ್ಷಕವಾದುದು ಇಲ್ಲಿಯ ಪ್ರಾಕೃತಿಕ ಮತ್ತು ಚಾರಿತ್ರಕ ರಚನೆ. ಮಹಮ್ಮದೀಯ ಯುಗದಲ್ಲಿ ನಿರ್ಮಿತವಾಗಿ ಇಂದಿಗೂ ಬಹುಮಟ್ಟಿಗೆ ಭದ್ರವಾಗಿ ಉಳಿದಿದ್ದ ಇಲ್ಲಿಯ ವಿಸ್ತಾರವಾದ ಕೋಟೆಯೂ ಆ ಕೋಟೆಗೆ ಅಂಟಿಕೊಂಡು ಮೆದುವಾಗಿ ಹರಿಯುವ ತುಂಗಭದ್ರೆಯೂ ಆ ಹೊಳೆಯ ವಿಶಾಲವಾದ ಪಾತ್ರವೂ ಈ ಸ್ಥಳದ ಘನತೆಯನ್ನೂ ಭವ್ಯತೆಯನ್ನೂ ಹೆಚ್ಚಿಸಿವೆ.

ಮಹಮ್ಮದೀಯ ಆಳಿಕೆಯ ಅನೇಕ ಪಾಳುಗಳೂ ಪ್ರಾಚೀನ ಅವಶೇಷಗಳೂ ಇಲ್ಲಿ ದೊರೆಯುವುವು. ಅವುಗಳಲ್ಲಿ ಸಿರ ಮುಬಾರಕ (ಪವಿತ್ರ ತಲೆ) ಮತ್ತು ಧಡ ಮುಬಾರಕ (ಪವಿತ್ರ ದಿಂಡು) ಎಂದು ಕರೆಯಲಾಗುವ ಸಯ್ಯದ ಶಾಹ ಅಲಿ ಬಾದಷಹನ ಎರಡು ಸಮಾಧಿಗಳು ಮುಖ್ಯವಾದುವು. ಸಯ್ಯದ ಶಾಹ ಅಲಿ ಕಾದುತ್ತಿರುವಾಗ ಆತನ ರುಂಡವು ಕತ್ತರಿಸಿ ಒಂದುಕಡೆ ಬಿದ್ದಿತಂತೆ; ಆ ಎಡೆಯಲ್ಲಿ ಒಂದು ಸಮಾಧಿ ಆಯಿತು. ಮುಂದೆ ಸ್ವಲ್ಪ ಹೊತ್ತು ಹಾಗೆಯೆ ಹೋರಾಡುತ್ತ ಆತನ

ಡಿಂಬವು ಇನ್ನೊಂದುಕಡೆ ಬಿದ್ದಿತಂತೆ; ಅಲ್ಲಿ ಮತ್ತೊಂದು ಸಮಾಧಿ ಆಯಿತು. ಈ ಸಮಾಧಿಗಳ ಮೂಲಕ ಈ ಊರು ಮಹಮ್ಮದೀಯರಿಗೆ ಪವಿತ್ರ ಕ್ಷೇತ್ರವಾಗಿದ್ದು ಪ್ರತಿ ವರ್ಷ ಇಲ್ಲಿ ಉತ್ಸವವು (ಉರುಸ) ನಡೆಯುತ್ತಿದೆ.[1] ಈ ಸಿರ ಮುಬಾರಕದ ಇನ್ನೊಂದು ಸೋಜಿಗವೆಂದರೆ ಇದರ ಸಮಾಧಿ. ಈ ಮುಂದೆ ಹೇಳಲಾಗುವ ಬಾಲ ಬ್ರಹ್ಮೇಶ್ವರ ದೇವಾಲಯದ ಒಳಪ್ರಾಕಾರದಲ್ಲಿ ಇದೆ. ಈ ಸಿರ ಮುಬಾರಕ ದರಗಕ್ಕೂ ಬಾಲಬ್ರಹ್ಮೇಶ್ವರ ದೇವಾಲಯಕ್ಕೂ ಪ್ರವೇಶದ್ವಾರವಾಗಿರುವ ಹೆಬ್ಬಾಗಿಲ ಒಂದು ಗೂಡಿನಲ್ಲಿ ಕಂಚಿ ಕಾಮಾಕ್ಷಿಯ ವಿಗ್ರಹವಿದೆ. ಶಾಹ ಅಲಿಗೆ ಅಭಯವಿತ್ತು ಕಾಪಾಡಿದ ದೇವತೆ ಇವಳು ಎಂದು ಹೇಳುವರು. ಕಾಮಾಕ್ಷಿಯಂತೆ ಕಂಚಿಕ್ಷೇತ್ರದ ಇನ್ನೊಂದು ನಾಮಾಂಕಿತ ದೈವತವಾದ ಏಕಾಮ್ರೇಶ್ವರನೂ ಇಲ್ಲಿ ನೆಲಸಿರುವನು. ಆತನಿಗೆ ಕಾಮಾಕ್ಷಿಯ ಪಕ್ಕದ ಇನ್ನೊಂದು ಗೂಡಿನಲ್ಲಿ ಸ್ಥಳವು ದೊರೆತಿದೆ.

ಮುಸಲ್ಮಾನರ ಕಾಲದ ಈ ವಿಚಿತ್ರ ಅವಶೇಷಗಳಿಗಿಂತ ಪ್ರಾಚೀನವೂ ವಿಲಕ್ಷಣವೂ ಆದ ಅವಶೇಷಗಳು ಹಿಂದು ಯುಗಕ್ಕೆ ಸಂಬಂಧಿಸಿದುವಾಗಿವೆ. ಇವುಗಳಲ್ಲಿ ಪ್ರಧಾನವಾದುವು ಒಂದು ವಿಶಾಲವಾದ ಪ್ರಾಕಾರದಲ್ಲಿ ಅಲ್ಲಲ್ಲಿ ನೆಲಸಿರುವ ಗರ್ಭಗೃಹ, ಸುಖನಾಸಿ, ಮುಖಮಂಟಪ, ಮೇಲೆ ಗೋಪುರ, ಮುಂತಾದ ಸ್ವತಂತ್ರ ಗುಡಿಗಳ ಅಂಗಗಳಿಂದ ಕೂಡಿದ ಒಂಬತ್ತು ಈಶ್ವರಾಲಯಗಳು. ಇವುಗಳ ದೈವತವು ಶಿವಲಿಂಗ. ಇವುಗಳಿಗೆ ಬ್ರಹ್ಮ ಎಂಬ ಅಂಕಿತವುಳ್ಳ ಹೆಸರುಗಳು ಇವೆ. ಅವು ಹೀಗೆ: (೧) ಬಾಲಬ್ರಹ್ಮೇಶ್ವರ, (೨) ಅರ್ಕಬ್ರಹ್ಮೇಶ್ವರ, (೩) ಕುಮಾರಬ್ರಹ್ಮೇಶ್ವರ, (೪) ವೀರಬ್ರಹ್ಮೇಶ್ವರ, (೫) ಗರುಡಬ್ರಹ್ಮೇಶ್ವರ, (೬) ತಾರಕಬ್ರಹ್ಮೇಶ್ವರ, (೭) ಸ್ವರ್ಗ ಬ್ರಹ್ಮೇಶ್ವರ, (೮) ಪದ್ಮಬ್ರಹ್ಮೇಶ್ವರ, (೯) ವಿಶ್ವಬ್ರಹ್ಮೇಶ್ವರ. ಈ ಗುಡಿಗಳ ಮೇಲಿನ ಗೋಪುರ, ಒಳಗಿನ ಮಂಟಪದ ಕಂಬಗಳು ಮುಂತಾದ ಎಡೆಯಲ್ಲಿ ಚಿತ್ತಾರದ ಕೆಲಸವು ಕಂಗೊಳಿಸುತ್ತಿದೆ.

ಈ ಒಂಬತ್ತು ಶಿವಾಲಯಗಳಲ್ಲಿ ಬಾಲಬ್ರಹ್ಮೇಶ್ವರನದು ಅಗ್ರಸ್ಥಾನವು. ಇಲ್ಲಿ ಬ್ರಹ್ಮದೇವನು ಯಜ್ಞಮಾಡಿ ಆ ಹೋಮಕುಂಡದ ತಾಣದಲ್ಲಿ ಈ ಶಿವಲಿಂಗವನ್ನು ಪ್ರತಿಷ್ಠೆಮಾಡಿದನು ಎಂದು ಹೇಳುವರು. ಇದು ತೇಜೋಲಿಂಗವಂತೆ. ಕಲ್ಲಿನದಾದ ಈ ಲಿಂಗವು ಚಿಕ್ಕದಾಗಿದ್ದು, ಅದರ ಮೇಲೆ ಚಕ್ರಾಂಕಿತವೂ ಶಾಲಿಗ್ರಾಮ-ರುದ್ರಾಕ್ಷಿ

---

[1] ಈ ಶಾಹ ಅಲಿ ಚಾರಿತ್ರಿಕ ಪುರುಷನೇ. ಆದರೆ ಸಾಧನ ಮತ್ತು ಸಮಯಾಭಾವ ಮೂಲಕ ಆತನ ವಿಷಯವಾಗಿ ಹೆಚ್ಚಿನ ಅನ್ವೇಷಣ ನಡೆಸಲು ಸಾಧ್ಯವಾಗಿಲ್ಲ. ಇದೇ ಮೇರೆಗೆ ಈ ಲೇಖನದಲ್ಲಿ ಈ ಮುಂದೆ ನಿರೂಪಿಸಿದ ಅನೇಕ ಆಖ್ಯಾಯಿಕೆಗಳ ವಿಷಯವಾಗಿಯೂ ಹೆಚ್ಚಿನ ವಿಮರ್ಶೆಯನ್ನು ನಡೆಸಲು ಆಗಿರುವುದಿಲ್ಲ.

ಗಳ ಚಿಹ್ನೆಗಳೂ ಇವೆಯಂತೆ. ಈ ಲಿಂಗದ ಮೇಲೆ ಆವರಣವಾಗಿ ರಾಳದ ಲಿಂಗ ವೊಂದು ಇದ್ದು, ಈ ಆವರಣವನ್ನು ಸುಮಾರು ೨೦ ವರ್ಷಕ್ಕೆ ಒಮ್ಮೆ ತೆಗೆದು ಹೊಸ ದನ್ನು ಕೂಡಿಸುವರಂತೆ. ಮೂಲಲಿಂಗವನ್ನು ಸುರಕ್ಷಿತವಾಗಿ ಕಾಪಾಡುವ ಉದ್ದೇಶ ದಿಂದ ಮೇಲೆ ತೋರಿಕೆಗೆ ದರ್ಶನೀಲಿಂಗವನ್ನು ಇರಿಸಿರುವರಂತೆ. ಇದರ ಹೆಸರು ಘಟಾಟೋಪಲಿಂಗ. ಬಾಲಬ್ರಹ್ಮೇಶ್ವರ ಲಿಂಗವು ಶಿವ ಮತ್ತು ವಿಷ್ಣುವಿನ ಅಂಕಿತ ದಿಂದ ಕೂಡಿರುವುದರಿಂದ ಮಿಕ್ಕೆಡೆ ಶಿವನಿರ್ಮಾಲ್ಯವರ್ಜ್ಯವಾಗಿದ್ದರೂ ಇಲ್ಲಿ ಅದು ಗ್ರಾಹ್ಯವಾದುದು.

ಬಾಲಬ್ರಹ್ಮೇಶ್ವರನ ನೆರೆಯಲ್ಲಿ ಜೋಗಳಾಂಬೆ ಇರುವಳು. ಈಕೆ ಬಾಲಬ್ರಹ್ಮನ ಅರ್ಧಾಂಗಿ, ಈಕೆಯ ಮಹಿಮೆ ಘನವಾದುದು. ಯೋಗಿನಿಯಾದ ಈಕೆಯ ವಿಗ್ರ ಹವು ಉಗ್ರವಾಗಿದೆ. ಈಕೆಯ ಸ್ಥಾನವು ಅಷ್ಟಾದಶ ಶಕ್ತಿಪೀಠಗಳಲ್ಲಿ ಒಂದು ಅಂತೆ.

ಬಾಲಬ್ರಹ್ಮೇಶ್ವರ ಗುಡಿಯೊಳಗೆ ರಸಸಿದ್ಧನೆಂಬ ತಪಸ್ವಿಯೊಬ್ಬನ ಮೂರ್ತಿ ಇದೆ. ಈತನ ಬಗೆಗೆ ಈ ರೀತಿಯ ಆಖ್ಯಾಯಿಕೆಯನ್ನು ಹೇಳುವರು : ಈತನು ಮೊದಲು ಕಾಶಿ ಯವನು. ಒಬ್ಬ ವಿಧವೆಯ ಹೊಟ್ಟೆಯಲ್ಲಿ ಈಶ್ವರವೀರ್ಯದಿಂದ ಹುಟ್ಟಿದನು. ರಸಸಿದ್ಧಿ ಯನ್ನು ಪಡೆದನು. ಈತನು ಶಿಲ್ಪಕಲೆಯಲ್ಲಿ ಕುಶಲನು. ಈ ಊರಿಗೆ ಬಂದು ಗುಡಿಗಳನ್ನು ಕಟ್ಟಿಸಲಾರಂಭಿಸಿದನು. ಗುಡಿಗಳನ್ನು ಕಟ್ಟಿಸುವಾಗ ಅನೇಕ ಜನಗಳು ಈತನ ಕೈಕೆಳಗೆ ಕೆಲಸಮಾಡುತ್ತಿದ್ದರು. ಆ ಕೆಲಸಗಾರರಿಗೆ ಕೊಡತಕ್ಕ ವೇತನವೆಂದು ಉಸುಬಿನ ಕುಪ್ಪೆ ಗಳನ್ನು ಮಾಡಿ ಮಾಡಿ ಇಡುತ್ತಿದ್ದನು. ಆ ಕೆಲಸಗಾರನು ಬಂದೊಡನೆ ಆ ಮರಳನ್ನು ಮುಟ್ಟುವನು. ಕೂಡಲೆ ಅದು ಚಿನ್ನವಾಗಿ ಆ ಕೆಲಸಗಾರನ ಕೆಲಸದ ಯೋಗ್ಯತೆಯಂತೆ ಪ್ರತಿಫಲವು ದೊರೆಯುತ್ತಿದ್ದಿತು. ಆ ರಸಸಿದ್ಧನಿಗೆ ಇಷ್ಟನಾದ ಗಾಣಿಗನೊಬ್ಬನು ಇಲ್ಲಿ ಇರುತ್ತಿದ್ದು ಈತನು ಆತನಿಗೆ ನೆರವಾಗುತ್ತಿದ್ದನು. ಈ ಗಾಣಿಗನದು ಎಂದು ತೋರಿಸುವ ಇನ್ನೊಂದು ವಿಚಿತ್ರ ವಿಗ್ರಹವು ಈ ರಸಸಿದ್ಧನ ಪಕ್ಕದಲ್ಲಿ ಇದೆ. ಇದಲ್ಲದೆ ರಸಸಿದ್ಧನ ಶಿಷ್ಯರವು ಎಂದು ಹೇಳುವ ಇನ್ನೂ ಕೆಲ ತಪಸ್ವಿಗಳ ವಿಗ್ರಹಗಳೂ ಇವೆ. ರಸಸಿದ್ಧನ ವಿಗ್ರಹದ ಪಟ್ಟಿಯಮೇಲೆ ಹಳಗನ್ನಡ ಲಿಪಿಯ ಚಿಕ್ಕ ಲೇಖನವಿದೆ.

ಬಾಲಬ್ರಹ್ಮೇಶ್ವರ ಗುಡಿಯಲ್ಲಿ 'ಆಲೋಚನಾಗೃಹ' ಎಂದು ತೋರಿಸುವ ಗೂಡಿನಲ್ಲಿ ಬ್ರಹ್ಮ, ನರಸಿಂಹರೂಪಿ ವಿಷ್ಣು ಮತ್ತು ದಕ್ಷಿಣಾಮೂರ್ತಿಯಾದ ಶಿವನ ವಿಗ್ರಹಗಳು ಇವೆ. ಇದಲ್ಲದೆ ಕುಮಾರಸ್ವಾಮಿ, ಕಾಲಭೈರವ ಮೊದಲಾದ ವಿಗ್ರಹ ಗಳನ್ನೂ ಕಾಣಬಹುದು.

ನವಲಿಂಗೇಶ್ವರ ಗುಡಿಯ ಪ್ರಾಕಾರದಲ್ಲಿಯ ಇನ್ನೆರಡು ವಿಗ್ರಹಗಳನ್ನು ಗಮನಿಸಬೇಕಾದುದು. ಒಂದನೆಯದು ಸ್ತ್ರೀ ವಿಗ್ರಹ; ಚಿಕ್ಕದಾದ ಒಂದು ಗೂಡಿನಲ್ಲಿ

ಅಂಗಾತಾಗಿ ಮಲಗಿದೆ. ಸ್ಥೂಲವಾದ ಅವಯುವಗಳು; ಶಿರಸ್ಸು ಮಾತ್ರ ಮೂಲತಃ ಇಲ್ಲ. ನಗ್ನ ರೂಪ! ಸಂತಾನ ಬಯಸುವ ಹೆಂಗಸರು ಇದನ್ನು ಪೂಜಿಸುವರಂತೆ. ಇದು ರೇಣುಕೆಯ ವಿಗ್ರಹವೆಂದೂ ಇದರ ಶಿರಸ್ಸು ಸವದತ್ತಿಯಲ್ಲಿ (ಬೆಳಗಾವ ಜಿಲ್ಲೆ) ಇರುವ ಯಲ್ಲಮ್ಮನೆಂದೂ ಒಬ್ಬರು ಹೇಳಿದರು.[1] ಕೆಲಮಟ್ಟಿಗೆ ಇದೇ ಮಾದರಿಯ ಇನ್ನೊಂದು ವಿಗ್ರಹ ಸಂಗಮೇಶ್ವರದ (ನಂದೀಕೊಟ್ಕೂರ ತಾಲೂಕು) ಸಂಗಮೇಶ್ವರ ಗುಡಿಯ ಪ್ರಾಕಾರದಲ್ಲಿ ಇರಿಸಿದುದನ್ನು ಲಕ್ಷಿಸಿದ್ದೇನೆ. ಅದೂ ನಗ್ನ ರೂಪ; ಯೋನಿ ಪ್ರಾಮುಖ್ಯವಾಗಿ ಕಾಣುವಂತೆ ಕಾಲುಗಳನ್ನು ಇಕ್ಕೆಲದಲ್ಲಿ ಮಡಿಸಿ ತಿರುಗಿಸಿಕೊಂಡುದು. ಸರಿಯಾದ ಶಿರಸ್ಸು ಇಲ್ಲ. ಶಿರಸ್ಸಿನ ಸ್ಥಳದಲ್ಲಿ ಬಂಡಿಗಾಲಿಯ ಮಾದರಿ ಒಂದು ಚಕ್ರವಿದೆ. ಇದು 'ಭೂದೇವಿ'ಯೆಂದೂ ಮಕ್ಕಳನ್ನು ಎಳಸುವ ಹೆಂಗಳೆಯರು ಇದನ್ನು ಭಜಿಸುವರೆಂದೂ ಇಲ್ಲಿಯವರು ಹೇಳಿದರು. ಈ ವಿಧವಾಗಿ ಭಿನ್ನಭಿನ್ನ ಭಂಗಿಯ ನಗ್ನ ಸ್ತ್ರೀಪ್ರತಿಮೆಗಳನ್ನು ಭೂದೇವಿ ಮತ್ತು ಮಾತೃದೇವಿಯ ಹೆಸರಿನಿಂದ ಪೂಜಿಸುವ ಸಂಪ್ರದಾಯವು ಅತಿಪ್ರಾಚೀನವಾಗಿದ್ದು ಸಿಂಧುನದಿಯ ನಾಗರಿಕತೆಯ ಕಾಲದಿಂದಲೂ ನಡೆದುಬಂದಂತೆ ತಿಳಿಯಬರುತ್ತದೆ.[2]

ಇನ್ನೊಂದು ವಿಗ್ರಹವು ಮಾಧ್ವಸಂಪ್ರದಾಯಕ್ಕೆ ಸಂಬಂಧಿಸಿದುದು. ಈ ಸಂಪ್ರದಾಯದಂತೆ ವಾಯುದೇವನಿಗೆ ಮೂರು ಅವತಾರಗಳು: (೧) ಹನೂಮಾನ್, (೨) ಭೀಮಸೇನ, (೩) ಮಧ್ವಾಚಾರ್ಯ. ಈ ಮೂರು ಅವತಾರಗಳ ವೈಲಕ್ಷಣ್ಯಗಳಿಂದ (ಅಂದರೆ ಕಪಿಯಬಾಲ, ಗದೆ, ಗ್ರಂಥ ಮೊದಲಾದುವು) ಕೂಡಿದ ತ್ರಿರೂಪಾತ್ಮಕ ಸಂಯುಕ್ತ ಪ್ರತಿಮೆ ಇದು. ಪ್ರಾಚೀನವಲ್ಲದಿದ್ದರೂ ಇದರ ಅಪೂರ್ವತೆ ಅಲಕ್ಷಿಸುವಂತೆ ಇಲ್ಲ.

ನವಲಿಂಗೇಶ್ವರ ದೇವಾಲಯವಲ್ಲದೆ ಇನ್ನೂ ಕೆಲವು ಗುಡಿಗಳು ಈ ಊರಲ್ಲಿ ಇವೆ. ಅವುಗಳಲ್ಲಿ ಎರಡನ್ನು ನಿರ್ದೇಶಿಸಬೇಕಾಗಿದೆ. ಒಂದು ಸೂರ್ಯದೇವನ ಗುಡಿ. ಹಿಂದಿನ ಕಾಲದಲ್ಲಿ ನಮ್ಮ ನಾಡಿನಲ್ಲಿಯೂ ಭಾರತದ ಮಿಕ್ಕ ಭಾಗಗಳಲ್ಲಿಯೂ ಭಾಸ್ಕರನ ಉಪಾಸನೆ ಹೆಚ್ಚಾಗಿ ನಡೆಯುತ್ತಿದ್ದು ಆತನ ಗುಡಿಗಳು ಅನೇಕ ಕಡೆಗಳಲ್ಲಿ ಇದ್ದಂತೆ ಶಾಸನಾದಿ ಆಧಾರಗಳಿಂದ ನಿದರ್ಶನವಾಗುತ್ತದೆ. ಪ್ರಸ್ತುತ ಕಾಲದಲ್ಲಿ ರವಿದೇವನ

---

[1] ರೇಣುಕೆಯನ್ನು ನಗ್ನ ರೂಪದಲ್ಲಿ ಪೂಜಿಸತಕ್ಕದ್ದು ಎಂದು ರೇಣುಕಾತಂತ್ರದಲ್ಲಿ ಹೇಳಿದೆ. ಹೈದರಾಬಾದದ ನಾಮಾಂಕಿತ ಬ್ರಾಹ್ಮಣ ಸಂಸ್ಥಾನಿಕರೊಬ್ಬರ ಬಳಿಯಲ್ಲಿ ರೇಣುಕೆಯ ಚಿನ್ನದ ಮತ್ತು ಬೆಳ್ಳಿಯ ನಗ್ನ ವಿಗ್ರಹಗಳು ಇದ್ದು ಅವುಗಳನ್ನು ಅವರು ಉಪಾಸನೆಮಾಡುವರು ಎಂದು ತಿಳಿಯುತ್ತದೆ.

[2] *Mohenjo-Daro and The Indus Civilization*, pp. 51-52.

ಗುಡಿಗಳು ಸಿಕ್ಕುವುದು ಅಪರೂಪ. ಪ್ರಾಚೀನ ಕಾಲದಿಂದ ನಡೆದುಬಂದ ದಿನಕರ ಪೂಜೆಯ ಒಂದು ಅವಶೇಷವೇ ಅಲಂಪೂರ ಈ ಸೂರ್ಯ ದೇವಾಲಯವೆಂದು ಹೇಳ ಬಹುದು. ಎರಡನೆಯದು ನರಸಿಂಹದೇವಾಲಯ. ಸಾಮಾನ್ಯವಾಗಿ ವಿಷ್ಣುದೇವಾ ಲಯಗಳಲ್ಲಿ ವಿಷ್ಣುವಿನ ಮುಂದುಗಡೆ ಆತನ ಭಕ್ತನಾದ ಹನುಮಂತ ಇಲ್ಲವೇ ಗರುಡನ ವಿಗ್ರಹಗಳು ನಿಂತಿರುತ್ತವೆ. ಆದರೆ ಇಲ್ಲಿಯ ಈ ನರಸಿಂಹನ ಮುಂದೆ ನಿಂತಿರುವವನು ಹನುಮಂತನಲ್ಲ, ಗರುಡನೂ ಅಲ್ಲ, ಸುಗ್ರೀವ! ಈತನ ರೂಪವೇನೋ ಹನುಮಂತನಂತೆ ಸಾಮಾನ್ಯಕಪಿಯದು ಆಗಿದೆ. ಆದರೆ ಈತನು ಸುಗ್ರೀವನೆಂದೇ ಹೇಳುವುದು ವಾಡಿಕೆ.

ಊರಿಂದ ಸುಮಾರು ಒಂದೂವರೆ ಮೈಲಿ ಅಂತರದ ಮೇಲೆ ಹೊಳೆಯ ದಂಡೆ ಯಲ್ಲಿ ಪಾಪನಾಶಿನಿ ಎಂಬ ಸ್ಥಳವಿದೆ. ಅಲ್ಲಿ ಧಾರ್ಮಿಕ ದೃಷ್ಟಿಯಿಂದ ಈ ಕ್ಷೇತ್ರದ ಘನತೆಯನ್ನು ಸೂಚಿಸುವ ಕೆಲವು ವಿಗ್ರಹಗಳು ಇವೆ. ಅವುಗಳಲ್ಲಿ ಮೂರನ್ನು ನಿರ್ದೇಶಿಸುವೆ :

೧. ಷೋಡಶಬಾಹು ನರಸಿಂಹ — ಹಿರಣ್ಯಕಶಿಪುವನ್ನು ಸೀಳುತ್ತಿರುವನು.

೨. ಗುಲಗುಂಜಿ ಮಾಧವ — ಕೈಯಲ್ಲಿ ಒಂದು ಗುಲಗುಂಜಿ ಕಾಳನ್ನು ಹಿಡಿದಿರುವನು. ಇದರ ಅಭಿಪ್ರಾಯ ಹೀಗೆ: ಈ ಕ್ಷೇತ್ರ ದಕ್ಷಿಣಕಾಶಿ ; ಸುಪ್ರಸಿದ್ಧ ಕಾಶೀಕ್ಷೇತ್ರಕ್ಕೆ ಸಮಾನವಾಗಿರುವುದು ; ಒಂದು ಗುಲಗುಂಜಿ ತೂಕ ಹೆಚ್ಚೆಂದು ಹೇಳಿದರೂ ಹೇಳಬಹುದು.

೩. ಗದಾಧರ.

ಅಲಂಪೂರು ದಕ್ಷಿಣಕಾಶಿ ಎನಿಸುವುದು. ಇದರ ಪ್ರಾಚೀನ ಹೆಸರು ಹೇಮಲಾ ಪುರಿ. ಇಲ್ಲಿ ತುಂಗಭದ್ರೆ ಉತ್ತರವಾಹಿನಿಯಾಗಿ ಹರಿದಿರುವುದರಿಂದ ಇದರ ಪಾವಿತ್ರ್ಯವು ಅಧಿಕವಾಗಿದೆ. ಈ ಊರನ್ನು ಕಾಶಿಗೆ ಹೋಲಿಸಿರುವುದು ಇಂತು :

ಬ್ರಹ್ಮೇಶೋಯಂ ಸ ವಿಶ್ವೇಶಃ ಸಾ ಕಾಶೀ ಹೇಮಲಾಪುರೀ |
ಸಾ ಗಂಗಾ ತುಂಗಭದ್ರೇತಿ ಸತ್ಯಮೇತನ್ನ ಸಂಶಯಃ ||

ಸುಪ್ರಸಿದ್ಧ ಶ್ರೀಶೈಲಕ್ಷೇತ್ರವು ಈ ಊರಿಗೆ ಸಮೀಪವಾಗಿದೆ. ಅಲಂಪೂರು ಶ್ರೀಶೈಲದ ಪಶ್ಚಿಮದ್ವಾರ. ಇದರ ಮಹಿಮೆ ಪುರಾಣೋಕ್ತವಾಗಿದೆ.

ಈ ಊರಿಗೆ ಹೇಮಲಾಪುರೀ, ಹತಂಪುರೀ, ಅಲಕಾಪುರೀ ಮೊದಲಾದ ಹೆಸರುಗಳು ಇದ್ದಂತೆಯೂ, ವಿಲಸದ್ರಾಜನೆಂಬ ಅರಸನು ಇಲ್ಲಿ ಆಳಿದನೆಂತಲೂ, ಆತನ ಕಾಲದಲ್ಲಿ ರಸಸಿದ್ಧನು ಇಲ್ಲಿಗೆ ಬಂದು ದೇವಾಲಯಗಳನ್ನು ಕಟ್ಟಿಸಲು ಪ್ರಾರಂಭಿಸಿದ ನೆಂತಲೂ ಮುಂತಾದ ಕೆಲವಾರು ಕತೆಗಳು ಇಲ್ಲಿ ಪ್ರಚುರವಾಗಿವೆ. ಅವುಗಳ ಸತ್ಯತೆ ಪರೀಕ್ಷಾರ್ಹವಾದುದು. ವಿಜಯನಗರದ ಅರಸರು, ಗಜಪತಿರಾಜರು, ಪ್ರತಾಪರುದ್ರ

ಮೊದಲಾದ ಭೂಪತಿಗಳು ಇಲ್ಲಿಗೆ ಬಂದು ಇಲ್ಲಿಯ ಈಶ್ವರನನ್ನು ಪೂಜಿಸಿದರು ಎಂದು ಹೇಳುವರು. ಈ ಐತಿಹ್ಯವು ಇಲ್ಲಿ ಸಿಕ್ಕುತ್ತಿರುವ ಆ ಆ ನರಪತಿಗಳ ಶಾಸನ ಪ್ರಮಾಣ ಗಳಿಂದ ಪೋಷಿತವಾಗುವುದು.

ನವಲಿಂಗೇಶ್ವರ ದೇವಾಲಯದಲ್ಲಿಯೂ ಮಿಕ್ಕ ಗುಡಿಗಳಲ್ಲಿಯೂ ಕೋಟೆಯ ಗೋಡೆಯಲ್ಲಿ ನಟ್ಟ ಕಲ್ಲುಗಳ ಮೇಲೆಯೂ ಕಂಡರಿಸಿದ ಅನೇಕ, ವಿಚಿತ್ರ, ಸುಂದರ ಪ್ರಾಚೀನ ಶಾಸನಗಳನ್ನು ಕಂಡೆನು. ಆದರೆ ಸಮಯಸಂಕ್ಷೇಪದ ಮೂಲಕ ಅವು ಗಳನ್ನು ಓದುವುದಾಗಲಿ ಅಚ್ಚೊತ್ತಿಕೊಳ್ಳುವುದಾಗಲಿ ಆಗಲಿಲ್ಲ. ನೈಜಾಂ ಪ್ರಭುತ್ವದ ಪುರಾತತ್ತ್ವವಿಭಾಗದವರು (Archæological Department) ಇಲ್ಲಿಯ ಶಾಸನ ಗಳನ್ನು ಪ್ರತಿಮಾಡಿಕೊಂಡು ಒಯ್ದಿರುವರು ಎಂದು ತಿಳಿಯಿತು. ಅವು ಪ್ರಕಟ ವಾಗುವುದನ್ನು ಇದಿರು ನೋಡಬಹುದಷ್ಟೆ?

ಇಲ್ಲಿಯ ಗುಡಿಗಳ ಶಿಲ್ಪರಚನೆಯ ಮಾದರಿಯೇ ಬೇರೆ. ಈ ಗ್ರಾಮವು ಕರ್ಣಾಟಕ ಆಂಧ್ರನಾಡುಗಳ ಗಡಿಯೂರು ಆಗಿದ್ದರೂ ಅವುಗಳ ರೀತಿ ಕರ್ಣಾಟಕ ದಲ್ಲಿಯಾಗಲಿ ಈ ಕಡೆಯ ಆಂಧ್ರಭಾಗದಲ್ಲಿಯಾಗಲಿ ಸಿಕ್ಕುವ ಗುಡಿಗಳಿಗಿಂತ ಭಿನ್ನವಾಗಿದೆ. ಕರ್ಣಾಟಕದಲ್ಲಿ ಸಾಮಾನ್ಯವಾಗಿ ಪ್ರಚುರವಾಗಿರುವ 'ಜಕ್ಕಣಾ ಚಾರ್ಯರ ಕಟ್ಟು' ಇವುಗಳಲ್ಲಿ ಕಾಣಬರುವುದಿಲ್ಲ. ಇವು ನರಪಳಿಯ ದಿಂಡಿನ, ಮುಂಡಾಸದ ಆಕಾರದ ಗೋಪುರಗಳುಳ್ಳ ಓರಿಸ್ಸದ ಗುಡಿಗಳನ್ನು ಹೋಲುತ್ತವೆ. ಮೇಲೆ ನಿರೂಪಿಸಿದ ರಸಸಿದ್ಧನ ಆಖ್ಯಾಯಿಕೆಯಿಂದಲೂ ಈ ಸಂಗತಿ ಸೂಚಿತ ವಾಗುತ್ತದೆ. ಇವುಗಳನ್ನು ಕಟ್ಟಿಸಿದ ಶಿಲ್ಪಜ್ಞನೆಂದು ಹೇಳುವ ರಸಸಿದ್ಧನು ಜಕ್ಕಣಾ ಚಾರ್ಯರಿಗಿಂತ ವಿಭಿನ್ನವಾದ ಶಿಲ್ಪಸಂಪ್ರದಾಯದ ಪ್ರವರ್ತಕನಾಗಿರಬೇಕು.

ಇಂತು ಅಲಂಪೂರು ಅನೇಕ ದೃಷ್ಟಿಯಿಂದ ಅವಲೋಕನೀಯವಾಗಿದೆ. ಅನೇಕ ಕಾರಣಗಳ ಮೂಲಕ ನಾನು ಈ ಊರಲ್ಲಿ ಕೆಲವು ಗಂಟೆಗಳಿಗಿಂತ ಹೆಚ್ಚು ಕಾಲ ನಿಲ್ಲಲಾಗಲಿಲ್ಲ. ಈ ಅಲ್ಪಾವಧಿಯಲ್ಲಿ ನಾನು ಕಂಡ ಕೆಲ ವಿಷಯಗಳನ್ನು ಇಲ್ಲಿ ನಿವೇದಿಸಿದ್ದೇನೆ. ಈ ಮೆಲ್ಕಂಡ ಒಂದೊಂದು ಅಂಶದಲ್ಲಿಯೂ ಅನ್ವೇಷಣ — ವಿಮರ್ಶೆ ಗಳನ್ನು ನಡೆಸಲು ಅವಕಾಶವಿದೆ. ಆ ಕೆಲಸವನ್ನು ಮುಂದಕ್ಕೆ ಇರಿಸಿ ಇಂದು ಇಷ್ಟಕ್ಕೆ ಮುಗಿಸುವೆ.

ದೇಸಾಯಿ ಪಾಂಡುರಂಗರಾಯರು.

---

# ಭಕ್ತಿಯು ರಸವೆ?

ಪ್ರಾಚೀನ ಅಲಂಕಾರಶಾಸ್ತ್ರಜ್ಞರು ಮೇಲ್ಕಂಡ ವಿಷಯದಲ್ಲಿ ನಾನಾಬಗೆಯ ಮತಗಳನ್ನು ಸಿದ್ಧಾಂತಮಾಡಿರುತ್ತಾರೆ. ಮೊದಲು ಭಕ್ತಿಯ ಸ್ವರೂಪವನ್ನು ವಿವೇಚಿಸುವುದು ಆವಶ್ಯಕ. ಭಕ್ತಿಯೆಂದರೆ ಪ್ರೇಮವೆಂದು ಕರೆಯಬಹುದಾದ ಒಂದು ಮನೋವೃತ್ತಿ. ಗೃಹ ಆರಾಮ ಮುಂತಾದ ಅಚೇತನ ಉಪಕರಣವಸ್ತುಗಳಲ್ಲಿ, ಸಾಕಿದ ನಾಯಿ ಮುಂತಾದ ಪ್ರಾಣಿಗಳಲ್ಲಿ, ಅಥವಾ ಪೋಷ್ಯ ಕುಟುಂಬವರ್ಗಕ್ಕೆ ಸೇರಿದ ಕಲತ್ರಪುತ್ರಾದಿಗಳಲ್ಲಿ ಇರುವ ಪ್ರೇಮ ಭಕ್ತಿಯೆನಿಸುವುದಿಲ್ಲ. ಸರ್ವವಸ್ತುಗಳಿಗಿಂತಲೂ ಉತ್ಕೃಷ್ಟತ್ವಜ್ಞಾನಪೂರ್ವಕವಾಗಿ ಭಗವಂತನಲ್ಲಿಟ್ಟ ಪ್ರೇಮ ಭಕ್ತಿರೂಪವಾಗುತ್ತದೆ.

ಅಧ್ಯಾತ್ಮಶಾಸ್ತ್ರಗಳಲ್ಲಿಯೂ ಭಕ್ತಿಯ ವಿಷಯವನ್ನು ಪ್ರಸ್ತಾಪಿಸುವರು. ಭಕ್ತಿಯೋಗವೆಂಬುದು ತತ್ವಜ್ಞಾನವನ್ನುಂಟುಮಾಡಲು ಅಂತರಂಗಸಾಧನ. ಆದ್ದರಿಂದ ಭಕ್ತಿಯಿಂದ ಜ್ಞಾನೋದಯವಾಗಿ ಪರಮಪುರುಷಾರ್ಥವಾದ ಮುಕ್ತಿ ಲಭಿಸುವುದು ಎಂದು ಪ್ರತಿಪಾದಿಸಿರುವುದೂ ಕಂಡುಬರುವುದು. ಹಾಗೂ "ಶ್ರವಣಂ, ಕೀರ್ತನಂ, ವಿಷ್ಣೋಃ ಸ್ಮರಣಂ, ಪಾದಸೇವನಂ | ಅರ್ಚನಂ, ವಂದನಂ, ದಾಸ್ಯಂ, ಸಖ್ಯಮಾತ್ಮನಿವೇದನಂ | ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ | ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇಽಧೀತಮುತ್ತಮಂ" ಎಂದು ಭಕ್ತಿಯನ್ನು ಒಂಬತ್ತು ವಿಧವಾಗಿ ವಿಭಾಗಿಸುವರು. ಮುಂದೆ ವಿವರಿಸಬೇಕೆಂದಿರುವ ಪರಮಪುರುಷಾರ್ಥಪ್ರಾಯವಾದ ಪ್ರೇಮರೂಪ ಭಕ್ತಿಯ ದೃಷ್ಟಿಯಿಂದ ಆ ವಚನಗಳೆಲ್ಲವೂ ಗೌಣಭಕ್ತಿಪರವಾಗುವುವು. ಮುಖ್ಯ ಭಕ್ತಿಯನ್ನುದ್ದೇಶಿಸಿ "ಸಾಪುನರಸುರಕ್ತಿರೀಶ್ವರೇ" (ಶಾಂ. ಸೂ) "ಸಾತು ಅಸ್ಮಿನ್ ಪರಪ್ರೇಮರೂಪಾ, ಅಮೃತರೂಪಾ ಚ, ಸಾ ತು ಕರ್ಮಜ್ಞಾನೇಭ್ಯೋಽಪ್ಯಧಿಕತರಾ, ಫಲರೂಪತ್ವಾತ್" (ನಾ. ಸೂ) ಎಂಬ ಸೂತ್ರಗಳು ಇವೆ. ಸಾಧನಯೋಗಗಳಲ್ಲಿ ಸೇರಿರುವ ಜ್ಞಾನ ಕರ್ಮಗಳಿಗಿಂತಲೂ ಉತ್ಕೃಷ್ಟರೂಪವಾದದ್ದೂ, ಸ್ವತಂತ್ರಫಲಸ್ವರೂಪ ಮುಕ್ತ್ಯಾತ್ಮಕವಾದದ್ದೂ ಪರಮಪ್ರೇಮ ಎಂದು ಅವು ಪ್ರತಿಪಾದಿಸುತ್ತವೆ. ಮೇಲ್ಕಂಡ ಗೌಣಭಕ್ತಿ ಅಥವಾ ಸಾಧನಗಳ ಅನುಷ್ಠಾನ ಪರಿಪಾಕದಿಂದ ಹುಟ್ಟಿ ಇಂತಹ ಭಕ್ತಿ ಭಗವಚ್ಛರಣತ್ವರೂಪವಾಗಿ ಪರಿಣಮಿಸುತ್ತದೆ.

ಸಾಧನಗಳ ಅಭ್ಯಾಸಪರಿಪಾಕಗಳಿಗೆ ಅನುಗುಣವಾಗಿ ಈ ಭಕ್ತಿ ಮೂರು ಬಗೆಯಾಗಿದೆ: "ತಸ್ಯೈವಾಹಂ, ಮಮೈವಾಸೌ, ಸ ಏವಾಹಂ" ಎಂಬ ಭಾವನೆಗಳೇ

ಭಕ್ತಿಯನ್ನು ಮೂರಾಗಿ ವಿಂಗಡಿಸಿರುವುವು. "ಸತ್ಯಪಿ ಭೇದಾಪಗಮೇ ನಾಥ ತವಾಹಂ ನಮಾಮಕೀನಸ್ತ್ವಂ | ಸಾಮುದ್ರೋ ಹಿ ತರಂಗಃ ಕ್ವಚ ನ ಸಮುದ್ರೋ ನ ತಾರಂಗಃ" ಸಮುದ್ರತರಂಗಗಳ ತತ್ತ್ವ ಒಂದೇ ಆದರೂ ತರಂಗವು ಸಮುದ್ರ ಸಂಬಂಧಿಯಾಗಿ ವ್ಯವಹರಿಸಲ್ಪಡುತ್ತದೆ. ಹಾಗೆಯೇ ನಿನ್ನವನು ನಾನು ಎಂಬ ಭಾವನೆ ಮೊದಲನೆಯ ವಿಧ. ಹಸ್ತಮುತ್ಕ್ಷಿಪ್ಯ ಯಾತೋಽಸಿ ಬಲಾತ್ಕೃಷ್ಣ ಕಿಮದ್ಭುತಂ | ಹೃದಯಾದ್ಯದಿ ಯಾಸ್ಯೋಽಸಿ ಪೌರುಷಂ ಗಣಯಾಮಿ ತೇ" ಎಂಬಲ್ಲಿ ನನ್ನವನು ನೀನೆಂಬ ಭಾವನೆ ಎರಡನೆಯ ಪ್ರಕಾರ. "ಸಕಲಮಿದಮಹಂಚವಾಸುದೇವಃ ಪರಮಪುಮಾನ್ ಪರಮೇಶ್ವರಃ ಸ ಏಕಃ | ಇತಿ ಮತಿರಚಲಾ ಭವತ್ಯನಂತೇಹೃದಯ ಗತೇ ವ್ರಜ ತಾನ್ ವಿಹಾಯ ದೂರಂ" ಇಲ್ಲಿ ಸೋಹಂ (ಅವನೇ ನಾನು ಎಂಬ) ಭಾವನೆ ಭಕ್ತಿಯ ಮೂರನೆಯ ಪ್ರಕಾರ. ಉತ್ತಮ ಪ್ರೇಮರೂಪವಾದ ಇಂತಹ ಭಕ್ತಿ ರಸವಾಗಬಹುದೆ? ನೋಡೋಣ.

ಭರತನ ನಾಟ್ಯಶಾಸ್ತ್ರದಲ್ಲಿಯೂ ಅದನ್ನು ಅನುಸರಿಸುವವರ ಅನೇಕ ಗ್ರಂಥಗಳಲ್ಲಿಯೂ ಹೇಳಿರುವ ಎಂಟು ರಸಗಳಲ್ಲಿ ಭಕ್ತಿ ಸೇರಿಲ್ಲ. ಮತ್ತೆ ಕೆಲವರು ಇದನ್ನು ರಸಭಾವಗಳಲ್ಲಿ ಅಂತರ್ಭಾವ ಎಂದು ಹೇಳುತ್ತಾರೆ. ಭರತ ನಾಟ್ಯಶಾಸ್ತ್ರದಲ್ಲಿ ರಸಗಳನ್ನು ಎಂಟಾಗಿ ಭಾಗಿಸುವುದಕ್ಕೆ ಛಾಂದೋಗ್ಯದ "ಏಷಾಂಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋರಸೊಪಾಮೋಷಧಯೋರಸ ಓಷಧೀನಾಂ ಪುರುಷೋ ರಸಃ ಪುರುಷಸ್ಯವಾಗ್ರಸೋವಾಚ ಋಗ್ರಸ ಋಚಃ ಸಾಮರಸಃ ಸಾಮ್ನ ಉದ್ಗೀಥೋರಸಃ" ಎಂಬ ಉದ್ಗೀಥೋಪಾಸನಪ್ರಕರಣದ ವಾಕ್ಯದಲ್ಲಿ ಎಂಟು ರಸಪದಗಳ ಅಭ್ಯಾಸವಿದೆ. ಅದನ್ನು ಇದಕ್ಕೆ ಮೂಲವಿರಬಹುದೆಂದು ಊಹಿಸುವುದೂ ಉಂಟು. ಅವೂ ಎಂಟು ಇವೂ ಎಂಟು ಎಂಬ ಸಂಖ್ಯಾಮಾತ್ರ ಸಾಮ್ಯದಿಂದ ಈ ರೀತಿ ಕಲ್ಪನೆಮಾಡುವುದು ಸಮಂಜಸವಲ್ಲ. ಈಚೆಗೆ ಕೆಲವರು ಆಲಂಕಾರಿಕರು ಲೌಲ್ಯರಸ, ಕಾರ್ಪಣ್ಯರಸ, ಭಕ್ತಿರಸ, ವತ್ಸಲರಸ ಮುಂತಾದ ರಸಗಳನ್ನು ಅತಿರಿಕ್ತವಾಗಿ ಒಪ್ಪುವರು. ಅಲ್ಲದೆ ನಿರ್ವೇದಸ್ಥಾಯಿಭಾವವನ್ನುಳ್ಳ ಶಾಂತರಸವನ್ನು ಶ್ರೀ ಮಮ್ಮಟಾಚಾರ್ಯರು ಕೂಡ ಒಪ್ಪಿರುತ್ತಾರೆ. ಭಕ್ತಿಗೆ ರಸತ್ವವನ್ನು ಔಚಿತ್ಯದಿಂದಲೇ ಹೇಳಬೇಕಾಗಿ ಬಂದರೆ ಭರತನಾಟ್ಯಶಾಸ್ತ್ರದ ವಚನವನ್ನು ಅಭಿಪ್ರಾಯಾಂತರದಿಂದ ನಯನಮಾಡಬೇಕಾಗುವುದು. ಔಚಿತ್ಯವನ್ನು ವಿಚಾರಿಸೋಣ. ಶೃಂಗಾರಾದಿ ಎಲ್ಲ ಪ್ರಸಿದ್ಧ ರಸಗಳ ಆಸ್ವಾದವನ್ನು ರಸಿಕರು ಅನುಭವಿಸುವರಷ್ಟೆ. ರಸಿಕರಲ್ಲಿ ಮೊದಲಿಂದಲೇ ರತಿಯೆಂಬ ಸ್ಥಾಯಿಭಾವ ಸೂಕ್ಷ್ಮ ರೂಪವಾಗಿರುವುದು. ಕಾಮಿನೀ ವಿಷಯದಲ್ಲಿ ಅನುರಾಗ ಅಥವಾ ಪ್ರಣಯವುಂಟಲ್ಲವೆ? ಕಾವ್ಯನಾಟ್ಯಗಳಲ್ಲಿ ಶ್ರಾವಣ-ಚಾಕ್ಷುಷ ಪ್ರತ್ಯಕ್ಷ ವಿಗೋಚರಗಳಾದ

ವಿಭಾವ—ಅನುಭಾವ—ವ್ಯಭಿಚಾರಿ ಭಾವಗಳಿಂದ ಆ ರತಿಯು ಅಭಿವ್ಯಕ್ತವಾಗಿ ರಸವಾಗಿ ಪರಿಣಮಿಸುವುದು. ಅಂತಹ ರಸಾಸ್ವಾದವು ಕೇವಲ ಆನಂದಮಯವಾದ್ದು. ಚರ್ವ್ಯಮಾಣತಾಪ್ರಾಣವುಳ್ಳದ್ದು; ಹೃದಯಸಂವಾದಪೂರ್ಣವಾದ್ದು. ಹೃದಯ ಸಂವಾದ ಪ್ರಧಾನತೆಯಿಂದ ಮಿಕ್ಕ ಎಲ್ಲ ವೇದ್ಯವಸ್ತುಗಳನ್ನು ಮರೆಮಾಚುವಂತೆ ಮೂಡುವ ರಸಾಸ್ವಾದಕ್ಕೆ ಮೊದಲಿಂದಲೂ ನಮ್ಮೊಳಗೆ ನೆಲಸಿರುವ ವಾಸನೆಯೇ ಕಾರಣ. ಆದ್ದರಿಂದ ಕಾಮಿನೀಪ್ರೇಮ ಮತ್ತೂ ಅದರ ಕಾರ್ಯಗಳನ್ನು ಪ್ರಾಯಃ ಸಮಸ್ತ ದೇವ ಮನುಷ್ಯ ತಿರ್ಯಕ್ ಪ್ರಾಣಿಗಳೂ ಅನುಭವಿಸುವರು. ವಾಸನಾವಶಾತ್ ಎಲ್ಲರಿಗೂ ಹೃದಯಸಂವಾದವು ಸಂಭವಿಸುವುದು. ಹೀಗೆ ಸಾರ್ವತ್ರಿಕವಾಗಿರುವುದ ರಿಂದಲೇ "ಶೃಂಗಾರ ಏವ ಮಧುರಃ" (ಧ್ವ) ಎಂಬ ಕಾರಿಕೆಯಲ್ಲಿ ಶೃಂಗಾರರಸವನ್ನು ಮಧುರವನ್ನಾಗಿ ವರ್ಣಿಸಿರುತ್ತಾರೆ. ಭಗವದ್ಭಕ್ತರಿಗೆ ಭಕ್ತಿರಸದ ಆಲಂಬನವಿಭಾವ — ಭಗವಂತನು; ಉದ್ದೀಪನವಿಭಾವ — ತುಲಸೀ ಗೋಪೀಚಂದನಾದಿಗಳು; ಅನು ಭಾವ — ಆನಂದಾಶ್ರು ರೋಮಾಂಚ ಗದ್ಗದಾದಿಗಳು; ವ್ಯಭಿಚಾರಿಭಾವ — ಮತಿ ಹರ್ಷ ಮುಂತಾದವು. ಇವು ಸೇರಿ ವ್ಯಂಜನವೃತ್ತಿಯಿಂದ ಭಕ್ತಿಸ್ಥಾಯಿಭಾವವನ್ನು ವ್ಯಕ್ತಪಡಿಸಿ ಹೃದಯಸಂವಾದಾನಂದಮಯವಾದ ಚರ್ವಣೆಯನ್ನುಂಟುಮಾಡುವು ದಾದರೆ ರಸತ್ವವನ್ನು ನಿರಾಕರಿಸುವುದು ಹೇಗೆ? ರಾಧಾ ಮುಂತಾದ ಗೋಪಿಕೆಯರು ಭಗವಂತನಾದ ಕೃಷ್ಣಪರಮಾತ್ಮನಲ್ಲಿ ಅತ್ಯುತ್ತಮ ಪ್ರೇಮವನ್ನಿಟ್ಟುಕೊಂಡಿದ್ದರು. ಆ ಪ್ರೇಮವು ಶೃಂಗಾರಪ್ರೇಮವಲ್ಲದೆ ಉತ್ಕೃಷ್ಟತ್ವಜ್ಞಾನದಿಂದ ಭಗವಚ್ಛರಣತ್ವ ಪರ್ಯಾಯವಾದ ಭಕ್ತಿಯುಮಟ್ಟಕ್ಕೆ ಏರಿತ್ತು. ಆ ಉತ್ಕರ್ಷಜ್ಞಾನವಿಲ್ಲದಿದ್ದರೆ ಆ ಪ್ರೇಮವು ಜಾರಪ್ರೇಮವಾಗುತ್ತಿತ್ತು. "ತದ್ವಿಹೀನಂ ಜಾರಾಣಾಮಿವ" (ನಾ. ಸೂ) ಎಂಬ ಈ ವಚನವು ಇದನ್ನು ಸೂಚಿಸುತ್ತದೆ. "ಅಹೋ ಭಾಗ್ಯಮಹೋಭಾಗ್ಯಂ ನಂದಗೋಪವ್ರಜೌಕಸಾಂ | ಯನ್ಮಿತ್ರಂ ಪರಮಾನಂದಂ ಪೂರ್ಣಂ ಬ್ರಹ್ಮ ಸನಾ ತನಂ" ಎಂಬ ವಚನದ ಆಶಯವೂ ಇದೇ. ಭಾಗವತ ಮಹಾಪುರಾಣದಲ್ಲಿ ವರ್ಣಿತ ವಾದ ಲೀಲೆಗಳನ್ನು ಪೂರ್ತಿಯಾಗಿ ಪರಾಮರ್ಶಿಸಿದರೆ ಗೋಪಿಕೆಯರ ಪ್ರೇಮವು ಶೃಂಗಾರ ಪ್ರೇಮವಲ್ಲವೆಂಬುದು ಸ್ಪಷ್ಟವಾಗುತ್ತದೆ. ಭಯ ಲೋಭಭಾವಗಳ ಮೂಲ ಕವೂ ಭಕ್ತಿ ಅಂಕುರಿತವಾಗುವುದು ಕೆಲವೆಡೆಗಳಲ್ಲಿ ಉಂಟು. ಆದರೆ ಭಗವಂತನ ಸನ್ನಿಧಿ ಅಸನ್ನಿಧಿಗಳ ಪ್ರತ್ಯಕ್ಷ ಪರೋಕ್ಷಗಳ ಸಂದರ್ಭಗಳಲ್ಲಿ ಉಂಟಾಗುವ ಅನು ಭಾವ ವಿಶೇಷಗಳಿಂದಲೇ ಈ ಭಕ್ತಿ ಪ್ರೇಮೈಕಮೂಲವೆಂದು ಕಂಡುಹಿಡಿಯಬಹುದು.

ಭಕ್ತಿ ಒಂದು ರಸವೆಂದು ಯುಕ್ತಿಯಿಂದ ಸಾಧಿಸಿರುವುದು ಮೊದಲು ರೂಪ ಗೋಸ್ವಾಮಿಯು 'ಉಜ್ಜ್ವಲ ನೀಲಮಣಿ'ಯೆಂಬ ಗ್ರಂಥದಲ್ಲಿ; ಮತ್ತು, ಮಧುಸೂದನ

ಸರಸ್ವತಿಗಳ 'ಭಕ್ತಿರಸಾಯನ' ಗ್ರಂಥದಲ್ಲಿ, ಎನ್ನಬಹುದು. ಭಕ್ತಿರಸಾಯನದ ಮೊದಲನೆಯ ಶ್ಲೋಕ: — "ನವರಸ ಮಿಲಿತಂ ವಾ ಕೇವಲಂ ವಾ ಪುಮರ್ಥಂ ಪರಮ ಮಿಹ ಮುಕುಂದೇ ಭಕ್ತಿಯೋಗಂ ವದಂತಿ। ನಿರುಪಮ ಸುಖಸಂವಿದ್ರೂಪ ಮಸ್ಪೃಷ್ಟ ದುಃಖಂ ತಮಹಮಖಿಲತುಷ್ಟ್ಯೈ ಶಾಸ್ತ್ರದೃಷ್ಟ್ಯಾ ವ್ಯನಜ್ಮಿ" ಎಂಬಲ್ಲಿ ಭಕ್ತಿ ಸ್ವತಂತ್ರ ಪುರುಷಾರ್ಥರೂಪವಾದ್ದು ಎಂದು ಹೇಳಿದೆ. ಅದೇ ಗ್ರಂಥದಲ್ಲಿ "ದ್ರುತಸ್ಯ ಭಗವದ್ಧರ್ಮಾದ್ಧಾರಾವಾಹಿ ಕತಾಂಗತಾ। ಸರ್ವೇಶೇ ಮನಸೋವೃತ್ತಿರ್ಭಕ್ತಿರಿತ್ಯ ಭಿಧೀಯತೇ" ಎಂದು ಭಕ್ತಿಯ ಸ್ವರೂಪ ಹೇಳಲ್ಪಟ್ಟಿದೆ. ಹಾಗೆಯೇ ಜ್ಞಾನಯೋಗ ಮತ್ತು ಶಮ ಇವುಗಳಿಗೆ ಅಂತರಂಗ ಸಾಧನವಾದ ಭಕ್ತಿ ಗೌಣ. ಇದರಿಂದ ನಿರ್ವೇದ ಪೂರ್ವಕವಾಗಿ ತತ್ತ್ವಜ್ಞಾನವುಂಟಾಗುವುದು. ಆ ಮೂಲಕ ಮೋಕ್ಷ ಪುರುಷಾರ್ಥವೂ ಲಭಿಸುವುದು. ಚಿತ್ತವು ದ್ರುತವಾಗಿರುವ ಉತ್ತಮಾಧಿಕಾರಿಗೆ ಭಗವತ್ಕಥಾಶ್ರವಣ ಮುಂತಾದ ಭಾಗವತ ಧರ್ಮಶ್ರದ್ಧಾಪೂರ್ವಕವಾಗಿ ಭಕ್ತಿಯೇ ಪುರುಷಾರ್ಥರೂಪ ವಾಗುವುದು. ಈ ರಸಕ್ಕೆ ವಿಭಾವ ಅನುಭಾವ ವ್ಯಭಿಚಾರಿಭಾವ ಮುಂತಾದವು ಯಾವು ವೆಂಬುದನ್ನು ಹಿಂದೆಯೇ ಸೂಚಿಸಿದೆ. ಭಗವದ್ಭಕ್ತರ ಚಿತ್ತದಲ್ಲಿ ಪ್ರತಿಬಿಂಬಿಸಿರುವ ಭಗವ ದಾಕಾರವೇ ಸ್ಥಾಯಿಭಾವ; ಚಿತ್ತವು ಅರಗಿನಂತೆ ದ್ರುತಿಯಾಗುವ (ಕರಗುವ) ಶೀಲ ವುಳ್ಳದ್ದು. ತಾಪಕವಸ್ತುಗಳ ಸಂಪರ್ಕದಿಂದ ಅರಗು ಕರಗುವಂತೆ ಕಾಮಕ್ರೋಧ ಮುಂತಾದ ತಾಪಕಗಳಿಂದ ಚಿತ್ತ ಕರಗುವುದು. ಚಿತ್ತದ್ರಾವಕವಸ್ತುಗಳನ್ನು ತಾಪಕ ವೆಂದೇ ಹೇಳಬೇಕಾದುದು ಅಗತ್ಯವಿಲ್ಲ. ತನಗೆ ಅಭಿರುಚಿಯಿರುವ ಹುಳಿ ಅಥವಾ ಸಿಹಿ ವಸ್ತುಗಳನ್ನು ಎದುರಿಗೆ ಕಂಡಕೂಡಲೆ ನಾಲಿಗೆಯಲ್ಲಿ ನೀರು ಸುರಿಯುವುದು ಅನುಭವ ಸಿದ್ಧವಲ್ಲವೆ? ಎಂದರೆ ರಸನೇಂದ್ರಿಯವು ದ್ರುತವಾದಂತೆ ಆಗುವುದು. ಅದೇ ರೀತಿ ಚಿತ್ತಕ್ಕೆ ಅಭಿರುಚಿಯಾದ ವಸ್ತುವಿನ ಭಾವನೆಯಿಂದ ಚಿತ್ತ ಕರಗುವುದು. ಆ ಅವಸ್ಥೆ ಯಲ್ಲಿ ಭಗವದಾಕಾರವು ಪ್ರತಿಬಿಂಬಿತವಾದರೆ ಅರಗಿನಲ್ಲಿ ಅಂಟಿಕೊಂಡಂತೆ ಆ ಆಕಾ ರವು ದೃಢವಾಗಿ ಚಿತ್ತಾರೂಢವಾಗುವುದು. ಮತ್ತೆ ಆ ಚಿತ್ತ ಕಠಿನವಾದರೂ ಆ ಆಕಾರವು ಬಿಟ್ಟುಹೋಗುವುದಿಲ್ಲ. ವೇದಾಂತಿಗಳಿಗೆ ಸಂಮತವಾಗುವಂತೆ ರಸಾಭಿ ವ್ಯಕ್ತಿಯನ್ನು ಉಪಪಾದನ ಮಾಡುವ ರೀತಿ ಇದು.

ಸಾಂಖ್ಯಪ್ರಕ್ರಿಯೆಯನ್ನೂ ರಸಾಭಿವ್ಯಕ್ತಿಯಲ್ಲಿ ಹೊಂದಿಸಬಹುದು. ಸಾಂಖ್ಯ ಸಿದ್ಧಾಂತದಲ್ಲಿ ಪ್ರತಿಯೊಂದು (ವಿಕಾರಜನ್ಯ) ವಸ್ತುವೂ ಸುಖ ದುಃಖ ಮೋಹಾತ್ಮಕ ವಾದದ್ದು. ಆದುದರಿಂದಲೇ "ಪರಿವ್ರಾಟ್ ಕಾಮುಕ ಶುನಾಂ ಏಕಸ್ಯಾಂ ಪ್ರಮದಾತನೌ। ಕುಣಪಃ ಕಾಮಿನೀ ಕವ್ಯ ಇತಿ ತಿಸ್ರೋ ವಿಕಲ್ಪನಾಃ ॥ ಎಂಬಂತೆ ಒಂದೇ ಸುಂದರ ಸ್ತ್ರೀವ್ಯಕ್ತಿಯಲ್ಲಿ ಯತಿಗಳಿಗೆ ಶವದೃಷ್ಟಿಯೂ, ತರುಣನಿಗೆ ಭೋಗ್ಯ

ಕಾಮಿನೀ ದೃಷ್ಟಿಯೂ, ನಾಯಿಗೆ ಆಹಾರವಾದ ಮಾಂಸ ಪಿಂಡವೆಂಬ ದೃಷ್ಟಿಯೂ ಇರುವುವು. ಇದರಂತೆ ಕಾಮಿನಿಯಲ್ಲಿ ಪ್ರಿಯನಿಗೆ ಸುಖಾಕಾರವೂ, ಸಪತ್ನಿಯರಿಗೆ ದುಃಖಾಕಾರವೂ, ಆಕೆಯನ್ನು ಆಶಿಸಿದರೂ ಪಡೆಯದಿರುವ ಯುವಕನಿಗೆ ಮೋಹಾ ಕಾರವೂ ತೋರಿಬರುವುದು. ವಸ್ತು ಒಂದೇ ವಿಧವಾದದ್ದಾದರೆ ಈ ರೀತಿಯಾಗಿ ಭಿನ್ನದೃಷ್ಟಿಗಳು ಗ್ರಾಹಕರಿಗೆ ಸಂಭವಿಸುತ್ತಿರಲಿಲ್ಲ. ಹೀಗಿರಲು ಆಲಂಬನ ವಸ್ತುವಿನ ಸುಖಾಕಾರವು ಮನಸ್ಸಿನಲ್ಲಿ ಪ್ರವೇಶಿಸಿದಾಗ ಅದು ಸ್ಥಾಯಿಭಾವರೂಪವನ್ನು ಹೊಂದು ತ್ತದೆ. ಸಮಸ್ತ ರಸಗಳಲ್ಲಿಯೂ ವಿಭಾವಾದಿ ಸಂಯೋಗದಿಂದ ಅಭಿವ್ಯಕ್ತಿಯನ್ನು ಹೊಂದುವ ಮೊದಲು ಇರುವ ಭಾವವನ್ನು ಸ್ಥಾಯಿಭಾವವೆಂದು ಕರೆಯಲು ಇದೊಂದು ಆಶಯವಿದೆ. ಚಿತ್ತವು ಜಾಗರಣದಲ್ಲಿ ವಿಷಯೇಂದ್ರಿಯ ಸಂಯೋಗ ಮುಂತಾದ ಸಾಮಗ್ರಿಯಿಂದ ಬಾಹ್ಯವಾದ ಸ್ಥೂಲ ವಿಷಯಾಕಾರವನ್ನೂ ಸ್ವಪ್ನ ದಲ್ಲಿ ವಾಸನಾ ಸಹಾಯದಿಂದ ಸೂಕ್ಷ್ಮವಿಷಯಾಕಾರವನ್ನೂ ಗ್ರಹಿಸುತ್ತದೆ. ಸುಷುಪ್ತಿಯಲ್ಲಿ ವಿಷಯವನ್ನು ಗ್ರಹಿಸುವ ಸಾಮಗ್ರಿ ಇಲ್ಲದಿರುವುದರಿಂದ ನಿರ್ವಿಷ ಯವಾಗಿಯೇ ಇರುವುದು. ಹೀಗೆ ಪ್ರತಿಯೊಂದು ಬಾಹ್ಯವಸ್ತುವೂ ಬಾಹ್ಯಾಕಾರ ಮಾತ್ರವಲ್ಲದೆ ಮನೋಮಯಾಕಾರದಿಂದಲೂ ಕೂಡಿದೆ. ಸುಂದರಿಯಾದ ಅಂಗನೆ ಯಲ್ಲಿ ಕೈಕಾಲು ಮುಂತಾದ ಅವಯವಗಳಿಂದ ಕೂಡಿದ ಬಾಹ್ಯಾಕಾರವು ಸರ್ವರ ದೃಷ್ಟಿಗೂ ಒಂದು ರೂಪವಾಗಿದ್ದರೂ ಮನೋಮಯ ಆಕಾರ ಬೇರೆ ಬೇರೆಯಾಗಿ ರುವುದು. ಆದ್ದರಿಂದಲೇ ಗ್ರಾಹಕರ ಮನೋಽನುಗುಣವಾಗಿ ಹೆಂಡತಿ, ಸೊಸೆ, ನಾದಿನಿ ಮುಂತಾದ ವ್ಯವಹಾರಗಳು ಒಂದೇ ವ್ಯಕ್ತಿಯಲ್ಲಿ ಅಬಾಧಿತವಾಗಿರುವುವು. ಹಾಗೆಯೇ ಬಾಹ್ಯಾಕಾರವು ನಾಶವಾದರೂ ಮನೋಮಯವಾದ ಆಕಾರವು ಸ್ಥಿರವಾಗಿರುವುದರಿಂದ ಅದಕ್ಕೆ ಸ್ಥಾಯಿಯೆಂದು ಹೆಸರು.

ಕಠಿನಚಿತ್ತವು ವಿಷಯಾಕಾರವನ್ನು ಗ್ರಹಿಸುವುದೇ ಇಲ್ಲ. ಶಿಥಿಲ (ಸ್ವಲ್ಪ ಮಾತ್ರ ಮೃದುವಾದ) ಚಿತ್ತದಲ್ಲಿ ವಿಷಯಗೋಚರವೃತ್ತಿ ಹುಟ್ಟಿದರೂ ವಾಸನಾ ರೂಪವಾದ ಆಕಾರ ಹುಟ್ಟುವುದಿಲ್ಲ. ಆದುದರಿಂದ ಕಠಿನ, ಶಿಥಿಲ ಅವಸ್ಥೆಗಳಿಂದ ಕೂಡಿದ ಮನೋವೃತ್ತಿಯನ್ನು ಉಪೇಕ್ಷಾಜ್ಞಾನವೆಂದು ಕರೆಯುವರು. ಭಕ್ತಿ ರಸಾಸ್ವಾದವೆಂಬ ಪುರುಷಾರ್ಥವನ್ನು ಅಪೇಕ್ಷಿಸುವವರು ಭಗವಂತನಿಗಿಂತ ಇತರ ವಿಷಯಗಳಲ್ಲಿ ಚಿತ್ತವನ್ನು ಕಠಿನವನ್ನಾಗಿಯೂ, ಭಗವಂತನಲ್ಲಿ ದ್ರವೀಭೂತವನ್ನಾ ಗಿಯೂ ಮಾಡಲು ಯತ್ನಿಸಬೇಕು. ಆಗ ಅಲ್ಲಿ ಪ್ರತಿಬಿಂಬಿಸಿರುವ ಭಗವದಾಕಾರ ವೆಂಬ ಈ ಸ್ಥಾಯಿಭಾವವು ಆಯಾ ವಿಭಾವ ಅನುಭಾವ ವ್ಯಭಿಚಾರಿಗಳಿಂದ ಅಭಿವ್ಯಕ್ತವಾಗಿ ರಸರೂಪವಾಗುತ್ತದೆ—ಎಂಬುದು ರಸಾಸ್ವಾದದ ಪ್ರಕಾರ. ಪ್ರಕೃತ,

ಭಕ್ತಿರಸಕ್ಕೆ ಭಗವಂತನೆಂಬ ಆಲಂಬನ, ಪುಣ್ಯಾಶ್ರಮ ತಪೋವನಾದಿ ಉದ್ದೀಪನ, ರೋಮಾಂಚ ಅಶ್ರುಪಾತ ಮೊದಲಾದ ಅನುಭಾವ, ಹರ್ಷಾದಿ ವ್ಯಭಿಚಾರಿಭಾವ, — ಇವುಗಳ ಸಂಪರ್ಕದಿಂದ ಭಾಗವತಾದಿ ಪುರಾಣಶ್ರವಣ ಸಮಯದಲ್ಲಿ ಭಗವದ್ಭಕ್ತರಿಗೆ ಆಸ್ವಾದ್ಯಮಾನವಾಗುವುದಾದ್ದರಿಂದ ಇದನ್ನು ನಿರಾಕರಿಸಲಾಗದು.

ಕೆಲವು ಆಲಂಕಾರಿಕರು ಭಕ್ತಿಯನ್ನು ಶಾಂತರಸದಲ್ಲಿ ಅಂತರ್ಭಾವಮಾಡಿದ್ದಾರೆ. ಆದ್ದರಿಂದ ಅದು ರಸವೆಂಬ ಅಂಶಕ್ಕೆ ಅವರ ಸಂಮತಿಯೂ ಇದ್ದಂತಾಯಿತು. ಆದರೆ ಶಾಂತರಸವು ಸರ್ವತೋವಿರಕ್ತಿರೂಪವಾದ ನಿರ್ವೇದಪ್ರಧಾನವಾದ್ದು. ಭಗವದನು ರಾಗರೂಪವಾದ ಭಕ್ತಿಗೆ ಅಲ್ಲಿ ಅಂತರ್ಭಾವ ಹೇಗೆ ಸರಿಯಾದೀತು? ರತಿರ್ದೇವಾದಿ ವಿಷಯಾ ವ್ಯಭಿಚಾರೀ ತಥಾಂಜಿತಃ — ಎಂಬ ಪ್ರಾಚೀನಸಿದ್ಧಾಂತವು ಪರಿಪೂರ್ಣ ಸಚ್ಚಿದಾನಂದಾತ್ಮಕನಾದ ಭಗವಂತನಿಗಿಂತ ಇತರ ದೇವಾದಿಗಳ ವಿಷಯದಲ್ಲಿರುವ ಭಕ್ತಿ ಭಾವರೂಪವಾದುದೆಂದೂ ಭಗವದ್ವಿಷಯದಲ್ಲಿಯ ಪ್ರೇಮವು ರಸಸ್ವರೂಪ ವೆಂದೂ 'ಭಕ್ತಿರಸಾಯನ' ಗ್ರಂಥಕಾರರ ಆಶಯ. ಇಂತಹ ಭಕ್ತಿಯಲ್ಲಿ ಲೀನರಾಗಿರು ವವರಿಗೆ ಪ್ರಾರ್ಥನೀಯ ವಸ್ತು ಬೇರೆಯಿಲ್ಲವೆಂಬುದು ಅವರಿಗೆ ಅನುಭವಸಿದ್ಧ. ಈ ವಿಧದ ಭಗವತ್ಪ್ರೇಮಕ್ಕೆ ವಿರುದ್ಧವಾದುದಾಗಿ ಪರಮಪುರುಷಾರ್ಥವೇ ಆದರೂ ಅದು ದ್ವೇಷ್ಯವೆಂದೇ ಅವರ ನಿಶ್ಚಯ.' ರಾಮಾಯಣ ಮಹಾಭಾರತಾದಿಗಳಲ್ಲಿ ಕರುಣ — ಶಾಂತರಸಾದಿಗಳು ಪ್ರಧಾನವಾದರೆ ಭಾಗವತ ಕಾವ್ಯಕ್ಕೆ ಭಕ್ತಿರಸವೇ ಪ್ರಧಾನ. ಮಿಕ್ಕ ವರ್ಣನೆಗಳೆಲ್ಲವೂ ಭಾಗವತದಲ್ಲಿ ಇದಕ್ಕೆ ಉಪೋದ್ಬಲಕವಾಗಿಯೇ ಇವೆ. ಆಮೂಲಾಗ್ರ ಭಾಗವತ ವಿಮರ್ಶದಿಂದ ಈ ಸಂಗತಿ ವ್ಯಕ್ತವಾಗುವುದು. ಉದಾಹರಣೆಗೆ ಇದರ ಉಪಕ್ರಮದಲ್ಲಿರುವ "ನಿಗಮಕಲ್ಪತರೋಃ ಗಲಿತಂ ಫಲಂ ಶುಕಮುಖಾದಮೃತ ದ್ರವ ಸಂಯುತಂ| ಪಿಬತ ಭಾಗವತಂ ರಸಮಾಲಯಂ ಮುಹುರಹೋ ರಸಿಕಾ ಭುವಿ ಭಾವುಕಾಃ" ಎಂಬ ಪದ್ಯವನ್ನು ತೆಗೆದುಕೊಳ್ಳೋಣ. ಇಲ್ಲಿ ಭಾವುಕಾಃ ಎಂಬ ವಿಶೇಷಣದಿಂದ ಕೂಡಿ ರಸಿಕಾಃ ಎಂದು ಸಂಬೋಧಿಸಿ, "ಭಾಗವತಂ ರಸಂಪಿಬತ" ಎಂದು ಭಾಗವತರಸವನ್ನು ಆಸ್ವಾದಮಾಡಿ ಎಂದು ಹೇಳಿ ಮುಂದೆ ಭಕ್ತಿಯನ್ನೇ ಪ್ರಧಾನವಾಗಿ ನಿರೂಪಿಸಿರುವುದನ್ನು ಪರ್ಯಾಲೋಚಿಸಿದರೆ ಭಕ್ತಿಯು ರಸವೆಂದು ತೀರ್ಮಾನವಾಗುವುದು.

ಈ ಭಕ್ತಿ ರಸವಾಗುವುದು ಮಾತ್ರವಲ್ಲದೆ ಎಲ್ಲ ರಸಗಳಿಗಿಂತಲೂ ಉತ್ತಮವಾದು ದೆಂದು ಹೇಳಬಹುದು. ಶೃಂಗಾರಾದಿ ರಸಗಳಲ್ಲಿ ಹಿಂದೆ ಹೇಳಿರುವಂತೆ ಆಲಂಬನ ವಿಭಾವದ ಸುಖಾಕಾರವು ಮನಸ್ಸಿನಲ್ಲಿ ಅಂಟಿಕೊಂಡು ಸ್ಥಾಯಿಭಾವಸ್ವರೂಪವನ್ನು ಹೊಂದುವುದು; ಅದರ ಅಭಿವ್ಯಕ್ತಿ ಆನಂದಮಯವಾಗುವುದು. ಅದು ಆಸ್ವಾದ್ಯ

ಮಾನ ಅಥವಾ ರಸ್ಯಮಾನವಾದ್ದರಿಂದ ರಸವಾಗುವುದಷ್ಟೇ. ಚಿತ್ರದಲ್ಲಿ ಕಾಮಿನೀ ಮುಂತಾದ ಆಕಾರ ಸ್ವಾಭಾವಿಕವಾದುದಲ್ಲ. ಅದು ಆಗಂತುಕವಾದ ಕಾರಣದಿಂದ ಬರುವುದೆಂದು ಹಿಂದೆಯೇ ಹೇಳಿದೆ. ಭಗವಾದಾಕಾರವು ಸ್ವಾಭಾವಿಕವಾದುದು. ಪ್ರಪಂಚವನ್ನೆಲ್ಲಾ ವ್ಯಾಪಿಸಿ ಸರ್ವಾಂತರ್ಯಾಮಿಯಾದ ಭಗವಂತನು ಮನಸ್ಸಿನಲ್ಲಿಯೂ ಸ್ವತಃ ವ್ಯಾಪಿಸಿರುವನು. ಒಂದು ಗಡಿಗೆಯಲ್ಲಿ ಜಲಪೂರ್ಣತಾ ಎಂಬ ಗುಣವು ಕಾರಣಸಂಪರ್ಕದಿಂದ ಹುಟ್ಟುವುದೇ ಹೊರತು ಘಟದ ಸ್ವಾಭಾವಿಕ ಗುಣವಾಗಲಾರದು. ಆಕಾಶವು ಸರ್ವವ್ಯಾಪಕವಾಗಿರುವುದರಿಂದ ಆಕಾಶಪೂರ್ಣತಾ ಎಂಬುದು ಮಾತ್ರ ಸ್ವಾಭಾವಿಕವಾಗಿದೆ. ಈ ದೃಷ್ಟಾಂತದಿಂದ ಭಗವದಾಕಾರವು ಸ್ವಾಭಾವಿಕವಾದರೆ ಪೌರುಷದಿಂದ ಸಾಧಿಸುವುದೇನೆಂದು ಶಂಕೆ ಹುಟ್ಟೀತು. ಸ್ವಾಭಾವಿಕವಾದ ಭಗವದಾಕಾರವು ಬೇರೆ ವಿಷಯಗಳ ಆಕಾರದ ಜೊತೆಯಲ್ಲಿರುವುದರಿಂದ ಆ ವೇದ್ಯಾಂತರವನ್ನು ಮರೆಮಾಡುವ ಅದ್ವಿತೀಯಾನಂದಮಯ ರಸಾಸ್ವಾದಕ್ಕೆ ನಿಮಿತ್ತವಾಗಲಾರದು. ಶಾಸ್ತ್ರಾಭ್ಯಾಸದಿಂದ ಹುಟ್ಟಿದ ಭಗವದಾಕಾರವು ವೇದ್ಯಾಂತರವಸ್ತುಗಳ ಆಕಾರವನ್ನು ಮರೆಮಾಡಿ ಸಾಧನಾಭ್ಯಾಸದಿಂದ ಅಪರೋಕ್ಷವಾಗುವುದು. ಆಗ ಎಲ್ಲ ರಸಾಸ್ವಾದ ಮತ್ತು ಅದರ ಸಾಧನಗಳಲ್ಲಿರುವ ಪ್ರೇಮವು ಭಗವಂತನಲ್ಲಿಯೇ ಅರ್ಪಿತವಾಗುವುದು. ಈ ಅವಸ್ಥೆಯಲ್ಲಿ ಪ್ರಹ್ಲಾದನು " ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ| ತ್ವಾಮನುಸ್ಮರತಃ ಸಾಮೇ ಹೃದಯಾನ್ಮಾಽಪಸರ್ಪತು ||" ಎಂದು ಪ್ರಾರ್ಥಿಸಿರುವದು. ಇಂತಹ ಭಕ್ತಿಯ ಅನುಭವವೇ ರಸಾಸ್ವಾದ. ಭಕ್ತಿರಸದ ಆಲಂಬನವಾದರೋ ಅಪರಿಚ್ಛಿನ್ನಾನಂದ ಸ್ವರೂಪವೇ. ಹೀಗೆ ಇರುವುದರಿಂದ ಅದು ಸ್ಥಾಯಿಭಾವ. ರಸಪರಂಪರೆಯಿಂದ ಆಸ್ವಾದ್ಯವಾಗುವುದರಲ್ಲಿ ಆನಂದಮಯತ್ವವು ನಿರತಿಶಯವಾದುದು. ಆದ್ದರಿಂದ ಈ ರಸವೇ ಸರ್ವೋತ್ತಮವಾದ ರಸ. " ರಸೋ ವೈ ಸಃ " ಎಂಬ ಶ್ರುತಿಯಿಂದ ಆತ್ಮನು ರಸಸ್ವರೂಪನು ಎಂದೂ " ರಸಂ ಹ್ಯೇವಾಯಂ ಲಬ್ಧ್ವಾಽನಂದೀ ಭವತಿ " ಎಂಬ ಶ್ರುತಿಯಿಂದ ರಸಾಸ್ವಾದದಿಂದ ಆತನು ಆನಂದಾನುಭವಿಯಾಗುವನೆಂದೂ ಹೇಳಿರುವ ಮಾತು ಶೃಂಗಾರಾದಿ ರಸಗಳಿಗಿಂತ ಹೆಚ್ಚಾಗಿ ಭಕ್ತಿರಸಕ್ಕೇ ಉಚಿತವಾಗಿ ಅನ್ವಯಿಸುತ್ತದೆ. ಆದುದರಿಂದ ಭಕ್ತಿಯನ್ನು ರಸವೆಂದು ಹೇಳಬಹುದು.

ಪಾಟಣಕರ ಚಂದ್ರಶೇಖರ ಭಟ್ಟ.

---

# ಕನ್ನಡ ಮೇಘದೂತ*

೧

ಆವನೊರುವಂ ಯಕ್ಷನಧಿಕಾರಮದದಿಂದೆ
ದೊರೆಯ ಶಾಪಕೆ ಸಿಲುಕಿ ವರುಷಕಾಲ
ತನ್ನ ಕಾಂತೆಯನಗಲಿ ವಿರಹಭಾರದಿ ಬಳಲಿ
ವೈಗರೆದ ಮಹಿಮೆಯಿಂ ದೀನನೆನಿಸಿ
ವಾಸಗೈದಂ ಬಂದು ಜನಕನಂದನೆ ಮಿಂದ
ಪುಣ್ಯತೀರ್ಥಗಳಿರುವ ರಾಮಗಿರಿಯ
ನಿಬಿಡಮೆನೆ ನೆಳಲೀವ ತರುಗಳಾಸರೆಗಳಲಿ
ಉಚಿತಮಾದಾಶ್ರಮಂಗಳಲಿ ನೆಲಸಿ.

೨

ಅಬಲೆಯನು ತಾನಗಲಿ ಕನಕವಲಯವು ಕಳಚಿ
ಬರಿದಾದ ಮುಂಗೈಯೊಳಾ ಕಾಮಿಯು
ಅದುವೆ ಗಿರಿಯೊಳು ನೆಲಸಿ ಕೆಲವು ತಿಂಗಳು ಕಳೆದು
ಆಷಾಢಮಾಸದಲಿ ಮೊದಲದಿವಸ
ದಂತದಲಿ ಮಣ್ಣನಗೆದೆರಚುತಿರುವಾಟದಲಿ
ತೊಡಗಿರುವ ಆನೆವೊಲು ಕಣ್ಗೆ ಸೆಯುವ
ಸಾನುದೇಶವನಪ್ಪಿ ಸೊಬಗನಾಂತಿರುವೊಂದು
ಹಿರಿದಾದ ಮೋಡವನು ಕಂಡನಂದು.

೩

ಹಲವಾರು ಆಸೆಗಳ ಮನದೊಳೊಡಮೂಡಿಸುವ
ಆ ಮುಗಿಲ ಮುಂದೆಸೆಯೊಳೆಂತೊ ನಿಂತು
ರಾಜರಾಜಾನುಚರನುರುಳಿ ಬಹ ಕಂಬನಿಯ
ತಡೆದಂತೆ ಬಹುಪೊಳ್ತು ಚಿಂತಿಸಿದನು.

---

* ಸದ್ಯದಲ್ಲಿಯೆ ಪ್ರಕಟವಾಗಲಿರುವ 'ಕನ್ನಡ ಮೇಘದೂತ'ದಲ್ಲಿನ ಪೂರ್ವಮೇಘದ ಕೆಲವು ಪದ್ಯಗಳು.

ಮೇಘದಾಲೋಕಸದಿ ಸುಖಿಯುಂತರಂಗಮುಂ
ಅನ್ಯಥಾವೃತ್ತಿಯನು ತಾಳ್ವುದೆನಲು
ಕೊರಳಪಿಗಿಯಪ್ಪುಗೆಯನಾಶಿಸುವ ಪ್ರಣಯಿಜನ
ದೂರವಿರುವಂತಹರ ಪಾಡದೆಂತು !

೪

ಶ್ರಾವಣವು ಸನ್ನಿಹಿತವೆನೆ ಬಗೆದು ಪ್ರೇಯಸಿಯ
ಜೀವಿತಾಲಂಬನದೊಳಾಸಕ್ತನಾಗಿ
ತನ್ನ ಕುಶಲವನಾಕೆಗಾ ಮುಗಿಲ ಮೊಗದಿಂದೆ
ಕಳುಹಿಸುವ ಸಲುವಾಗಿ ಆತನಂದು,
ಅದೆತಾನೆ ಅರಳಿರುವ ಕುಟಜ ಕುಸುಮಗಳಿಂದೆ
ಅರ್ಘಮಂ ಕಲ್ಪಿಸುತೆ ಪ್ರೀತನಾಗಿ
ಪ್ರೇಮದೊಳ್ನುಡಿಗಳಿಂದಾ ಮುಗಿಲ ತಾಂ ಸುಡಿಸಿ
ಸ್ವಾಗತವ ಬಯಸಿದನು ಹರ್ಷದಿಂದೆ.

೫

ಹೊಗೆಯಿಂದೆ ಉರಿಯಿಂದೆ ಗಾಳಿನೀರುಗಳಿಂದೆ
ರೂಪುಗೊಂಡಿರುವ ಜಡವೋಡವೆತ್ತ !
ಪಟುವಾದ ಕರಣಗಳ ಪಡೆದಿರುವ ಜೀವಿಗಳು
ಕೊಂಡೊಯ್ವ ಸಂದೇಶ ವಿಷಯವೆತ್ತ !
ಔತ್ಸುಕ್ಯದಿಂದಿದನು ಗಣಿಸದೆಯೆ ಗುಹ್ಯಕನು
ಯಾಚಿಸಿದನಾ ಮುಗಿಲ ಕೃಪಣನಾಗಿ.—
ಕಾಮಾರ್ತರಾದವರು ಚೇತನಾಚೇತನದೆ
ಕೃಪಣರೆಂಬುದು ನೋಡೆ ಸಾಜಮಲ್ತೆ !

* * *

೬

ಸಂತಪ್ತರಾದರಿಗೆ ನೀನೆ ಶರಣಾಗಿರುವೆ
ಹೇ, ಪಯೋದನೆ, ಅಂತೆ ನಿನ್ನ ಸೇರೆವೆ.
ಧನಪತಿಯ ಕೋಪದಿಂದಗಲಿ ಬಂದಿರುವೆನ್ನ
ಸಂದೇಶವಿದಸೊಯ್ದು ನಲ್ಲೆಗರುಹು.

ಅಲ್ಲಿ ಬಹಿರುಪವನದಿ ನೆಲೆನಿಂದ ಪರಶಿವನ
ಶಿರದ ಶಶಿಕಳೆಯ ಬೆಳ್ದಿಂಗಳಿಂದ
ಹೊಳೆವ ಹರ್ಮ್ಯಗಳಿರುವ ಯಕ್ಷರೊಡೆಯನು ವಸಿಪ
ಹೆಸರಾದ ಅಲಕೆಯನು ಕುರಿತು ತೆರಳು.

೭

ದಿನದಿನಗಳೆಣಿಕೆಯಲೆ ನಿರತಳಾಗಿರುವವಳ
ಏಕಪತ್ನಿಯ ಸತಿಯನವಿಪನ್ನೆಯ
ಭ್ರಾತೃಜಾಯೆಯನವಳ ನೀನವಶ್ಯಂ, ಸಖನೆ
ತ್ವರಿತ ಗಮನದೊಳೈದಿ ನೋಡಲಿರುವೆ.
ಕುಸುಮ ಕೋಮಲವೆನಿಸಿ ವಿರಹದೊಳು ಬಲುಬಳಲಿ
ಕ್ಷಣಮಾತ್ರದಲಿ ಕಳಚಿ ಬೀಳಲಿರುವ
ಪ್ರಣಯಿ ಹೃದಯುವನದನು ಆಸೆಯೆಸುವಾ ಬಂಧ
ವಿಪ್ರಯೋಗದೊಳಿರದೆ ತಡೆದಿರುವುದು.

* * *

೮

ಅತಿ ಬೆಳೆದ ಕೇಸರಡೆ ಕಂದು ಹಸುರಿನ ಬಣ್ಣ-
ದಿಂದೆಸೆವ ನೀಪಗಳ ನೋಡಿ ಸವಿದು
ಜೌಗುನೆಲದಲಿ ಬೆಳೆದ ಮೊದಲ ಮುಗುಳುಗಳೊಗೆದ
ಎಳೆಯ ಕಂದಳಿಗಳನು ತಿಂದು ನಲಿದು
ವನ್ಯದೇಶಗಳಿಂದಲಧಿಕ ಸೌರಭವುಗುವ
ನೀರುಂಡ ತಿರೆಯು ಹೊಸ ಕಂಪು ಮೂಸಿ
ಸಂಚರಿಪ ಸಾರಂಗನಿವಹ ತಾಂ ಸೂಚಿಪುದು
ಹೊಸನೀರ ಹನಿಗರೆವ ನಿನ್ನ ಪಥಮಂ.

* * *

೯

ಉತ್ತರದ ದೆಸೆಗೆಂದು ಪಯಣ ಬೆಳೆಸುವ ನಿನಗೆ
ಉಜ್ಜಯಿನಿಯಾ ದಾರಿ ಬಳಸಾದರುಂ
ಅಲ್ಲಿನ ಮಹೋತ್ತುಂಗ ಸೌಧದರಮನೆಗಳಲಿ
ಸ್ನೇಹವಿರಹಿತನೆನಿಸಿ ಮೊಗದಿರುಹದೆ

ಬಳ್ಳಿ ಮಿಂಚಿನ ಬೆಳಕಿಗಿರದೆ ಭಯದಿಂ ಬೆದರಿ
ಚಲಿಸುತಿರುವಾ ನಗರದಂಗನೆಯರ
ಚಕಿತ ಲೋಲಾಪಾಂಗ ಲೋಚನಂಗಳ ನೋಡಿ
ನೀನಲ್ಲಿ ರಮಿಸದಿರೆ ವಂಚಿತನಹೆ!

* * *

೧೦

ವತ್ಸರಾಜನ ಕಥೆಯನರಿತ ಕೋವಿದರಿರುವ
ಊರ ಹಿರಿಯರ ನೆಲೆಯನಾವಂತಿಯ
ಹಿಂದಿರಿಸಿ, ಸಿರಿಯ ಹರಹಿನ ನೆಲೆಯು ತಾನೆನಿಸಿ-
ದುಜ್ಜಯಿನಿಯನು ಕುರಿತು ತೆರಳಿದಂದು
ತಮ್ಮ ಸುಚರಿತಫಲವು ಮುಗಿದು ಬರುತಿರುವಂದು
ದೇವಲೋಕದ ಜನರು ತಿರುಗಿ ಬಂದು
ಸುಕೃತ ಶೇಷಗಳಿಂದ ಧರೆಗೆ ತಂದಿಳಿಸಿರುವ
ದಿವದೊಂದು ಖಂಡಮೆನೆ ಕಂಗೊಳಿಪುದು.

೧೧

ಅಲ್ಲಿ ಶಿಪ್ರಾನದಿಯ ಮೇಲೆ ಬೀಸುವ ಗಾಳಿ
ಉದಯಕಾಲದೊಳುಲಿವ ಸಾರಸಗಳ
ಮದಕಲದ ಕೂಜಿತವ ನಿಡಿದಾಗಿ ಬೆಳೆಯಿಸುತೆ
ಬಿರಿದ ತಾವರೆಯರಳ ಕಂಪನಾಂತು
ಭೋಗದಭಿಲಾಷೆಯಲಿ ಚಾಟುವಚನವ ನುಡಿದು
ಕಾಮಿನಿಯ ಸಂತವಿಸುವಿನಿಯನಂತೆ
ಅಂಗನೆಯರೊಡಲಿಗನುಕೂಲ ಭಾವದಿ ಸುಳಿದು
ಬೇಟದಾಯಾಸವನು ನೀಗಲಿಹುದು.

೧೨

ತಾರಹಾರಗಳೆನಿತೊ ತರಳ ಘುಟಿಕಗಳೆನಿತೊ
ಶಂಖ ಶುಕ್ತಿಗಳೆನಿತೊ ಕೋಟಿ ಕೋಟಿ
ಎಳೆ ಹುಲ್ಲಿನಂತಿರುವ ಹಸುರುಬಣ್ಣದ ಕಾಂತಿ
ಕುಡಿಯೊಡೆದು ಹೊಳೆವ ಮರಕತಗಳೆನಿತೊ!

ಹವಳಗಳ ಹರಳೆನಿತೊ ಉಜ್ಜಯಿನಿಯಂಗಡಿಯ
ಬೀದಿಗಳ ನೋಡಿದರೆ ಹೊಳೆವುದಂದು
ಮುನ್ನೀರು ತನ್ನೆಲ್ಲ ರತ್ನಗಳನಿಲ್ಲಿರಿಸಿ
ತಾಂ ಬರಿಯ ನೀರನಿಧಿಯಾದುದೆಂದು.

* * *

೧೩

ಎಲೆಹಸುರುಬಣ್ಣದಲಿ ದಿನಕರನ ತೇಜಿಗಳ
ಹೋಲುತಿಹ ವಾಹಕಗಳಿರುವುವಲ್ಲಿ
ಶೈಲದಂತುತ್ತುಂಗವೆನಿಸಿದಾನೆಗಳಲ್ಲಿ
ನಿನ್ನವೊಲು ಮದಜಲದ ಮಳೆಗರೆವುವು
ಸಮರ ಸಂರಂಭದಲಿ ದಶಮುಖನಿಗೆದುರಾಗಿ
ಚಂದ್ರಹಾಸದೊಳಾದ ಕಲೆಗಳಿಂದೆ
ಆಭರಣ ಕಾಂತಿಗಳ ಮರಸಿ ಮೆರೆವಂತಿರುವ
ಯೋಧಾಗ್ರಗಣ್ಯರಿಹರಲ್ಲಿ ನೆಲಸಿ.

೧೪

ಜಾಲಮಾರ್ಗದಿನೊಗೆವ ಕೇಶಸಂಸ್ಕಾರದಿನಿ-
ಧೂಪದಿಂದೊಡಗೂಡಿ ಪುಷ್ಟನಾಗಿ
ಬಾಂಧವ ಪ್ರೇಮದಿಂ ಭವನಶಿಖಿಗಳ್ ಕುಡುವ
ನೃತ್ಯೋಪಹಾರದಿಂ ತುಷ್ಟನಾಗಿ
ಕುಸುಮ ಸೌರಭವುಗುವ ಲಲಿತವನಿತಾಪಾದ-
ರಾಗಾಂಕಿತಂಗಳಿಹ ಹರ್ಮ್ಯಗಳಲಿ
ಉಜ್ಜಯಿನಿಯೈಶ್ವರ್ಯ ಲಕ್ಷ್ಮಿಯನು ನೋಡುತ್ತೆ
ದಾರಿ ನಡೆದಾಯಸವ ನೀಗಲಿರುವೆ.

೧೫

ಭರ್ತೃವಿನ ಕಂಠದೊಲು ಛವಿಯಾಂತನಿವನೆಂದು
ನಿನ್ನ ನೋಡುತ ನಲಿಯೆ ಪ್ರಮಥಗಣವು
ಜಲಕೇಳಿಯೊಳು ಮೆರೆವ ಯುವತಿಯರ ವಿಹಾಹದಿಂ
ಮಗಮಗಿಪ ಗಂಧವತಿಯತ್ತಣಿಂದೆ

ಸೈದಿಲೆಯ ನರುಗಂಪಿನೊಡಗೂಡಿ ಸುಳಿದು ಬಹ
ತಂಗಾಳಿಯಲಿ. ತೊನೆವ ಉಪವನದೆಡೆ
ತೆರಳು ನೀಂ ತ್ರಿಭುವನಕೆ ಗುರುವಾದ ಚಂಡೀಶ
ನೆಲೆಸಿರುವ ಪುಣ್ಯಮಯಧಾಮದೆಡೆಗೆ.

೧೬

ನೀನಲ್ಲಿ ಮೆರೆಯುವ ಮಹಾಕಾಳಮಂದಿರವ
ಬೇರಾವ ವೇಳೆಯಲಿ ಸಾರಿರ್ದರುಂ
ನಯನದೇಶವಮೀರಿ ದೂರದ ದಿಗಂತದಲಿ
ಸೂರ್ಯ ಮುಳುಗುವವರೆಗೆ ಅಲ್ಲೆ ನೆಲಸಿ
ಲೋಕವಂದಿತನಾದ ಶೂಲಿಯಾರಾಧನೆಗೆ
ಮೊಳಗುಗಳ ದನಿಗೈದು ಪಟಹವಾಗು.
ಗಂಭೀರತರವಾದ ನಿನ್ನ ಗರ್ಜಿತಗಳಿಗೆ
ಮುಂದೆ ನೀಂ ಸಂಪೂರ್ಣಫಲವ ಪಡೆವೆ.

೧೭

ನೃತ್ಯಸೇವಾಭರದಿನಡಿಯನೆತ್ತಿಡುವಂದು
ಕಟಿಯ ಕಾಂಚೀದಾಮ ಝಣಝಣರೆನೆ
ರತ್ನವರ್ಣಚ್ಛವಿಯ ವಳಿಯ ಚಾಮರ ಮಿಸುಗೆ
ಲೀಲೆಯಿಂ ಪಿಡಿದದನು ಬೀಸುವಂದು
ಕ್ಲಾಂತ ವೇಶ್ಯಾಜನದ ನಖಪದಕೆ ಸುಖವೀವ
ಮೊದಲಮಳೆವನಿಗಳನು ನೀನು ಸುರಿಯೆ
ಮಧುಕರ ಶ್ರೇಣಿವೊಲು ನಿಡಿದಾದಪಾಂಗಗಳ
ನಿನ್ನ ಕಡೆಗೆಸೆಯುವರು ಪ್ರೀತಿಯಿಂದೆ.

೧೮

ಆ ಬಳಿಕ ಶಿವನ ನಿಡುತೋಳುಗಳ ತರುವನವ
ಮಂಡಲಾಕಾರದಲಿ ಬಳಸಿ ನಿಂದು
ಅಭಿನವ ಜಪಾಕುಸುಮವೆಂತಂತೆ ಕೆಂಪಾಗಿ
ಬೈಗುವೆಳಗನು ತಳೆದು ಸುಭಗನಾಗಿ

ಉದ್ವೇಗ ಶಮನಗೊಳೆ ನಿಶ್ಚಲಾಕ್ಷಿಗಳಿಂದೆ
ಶಿವೆ ನಿನ್ನ ಭಕ್ತಿಯನ್ನೀಕ್ಷಿಸುತಿರೆ
ನಾಟ್ಯದಾರಂಭದಲಿ ಪಶುಪತಿಯ ಆರ್ದ್ರಗಜ-
ಚರ್ಮಾಭಿಲಾಷೆಯನು ನೀಗಲೆಳಸು.

೧೯

ನೋಟವನು ತಡೆಗೈದು ಕವಿದ ಕಗ್ಗತ್ತಲೆಯು
ರಾಯಬೀದಿಯೊಳಲ್ಲಿ ಉಜ್ಜಯಿನಿಯ
ಯೋಷಿತೆಯರಂದಮಿಗೆ ರಮಣವಸತಿಯ ಕುರಿತು
ಸಾನುರಾಗದಿ ತೆರಳಲನುವಾಗಿರೆ
ಕನಕ ನಿಕಷದ ತೆರದಿ ಹೊಳೆವ ಸೌದಾಮಿನಿಯ
ಬೆಳಕಿನಿಂ ನೀನವರ ದಾರಿ ತೋರು.
ಮೊದಲೆ ಭಯಚಕಿತರಹ ಯೋಷಿತೆಯರವರ ನೀಂ
ಮಳೆಗರೆದು ಮೊಳಗಿರಿದು ಬೆದರಿಸದಿರು.

೨೦

ಚಿರವಿಲಸನೋದ್ವೇಗಭರದಿಂದ ಕಡುಬಳಲಿ
ಖೇದಗೊಳೆ ನಿನ್ನ ಸತಿ ಸೌದಾಮಿನಿ,
ಸುಪ್ತಪಾರಾವತಗಳಿರುವ ಸೌಧಾಗ್ರದಲಿ
ನೀನುಮಾಯಾಸವನು ನೀಗಲೆಂದು
ಇರುಳು ನೂಕಲು ತಂಗಿ ನೇಸರುದಯಿಸುವಂದು
ಉಳಿದ ದಾರಿಯ ಕುರಿತು ತೆರಳು ಮುಂದೆ.
ಕೈಕೊಂಡ ಸಖರರ್ಥ ಕೃತ್ಯಗಳನೆಸಗಲಿಕೆ
ನಾವಕಾಶಂಗೈವುದುಚಿತಮಲ್ತು.

ಎಸ್. ವಿ. ಪರಮೇಶ್ವರಭಟ್ಟ.

---

# ಸಂಬಳದ ದಿನ

ರಾಮು ತನ್ನ ಪಕ್ಕದಲ್ಲಿದ್ದವನನ್ನು ನೋಡಿದ. ಸುಕ್ಕುಗಟ್ಟಿರುವ ಕೆನ್ನೆಗಳು; ಎರಡಂಗುಲ ಉದ್ದದ ಗಡ್ಡ; ಬೆಳಕಳಿದ ಕಣ್ಣುಗಳು.— ಅವನನ್ನು ನೋಡುವುದಕ್ಕೇ ಅಸಹ್ಯವಾಗುತ್ತಿತ್ತು. ಇಂಥವನು ಹೆಡ್ ಕ್ಲಾರ್ಕು! ಅವನ ರುಮಾಲೋ, ಅವನ ಕೋಟೋ! ರಾಮು ಲೇಖಣಿಯನ್ನು ಕೆಳಗಿಟ್ಟು ಎಣಿಕೆ ಹಾಕತೊಡಗಿದ . . . "ಇವನು ಬಹುಶಃ ಸಂಸಾರದಲ್ಲಿ ನೊಂದವನಾಗಿರಬೇಕು, ಬಹು ಮಕ್ಕಳೊಂದಿಗ ನಾಗಿರಬೇಕು, ಅಲ್ಲದೆ ಸ್ವಂತ ವೆಚ್ಚಕ್ಕೆ ಅಷ್ಟು ಗಮನಕೊಡಲಾರದವನಾಗಿರಬೇಕು. . . . ಅವನ ಕೋಟು ನೋಡಿದರೆಯೆ ಹೇಳಬಹುದು. ಬೆವರು ಹೀರಿ ಹೀರಿ ಕೀಗಟ ಕಟ್ಟಿ ಒಂದು ಬಣ್ಣಕ್ಕೆ ತಿರುಗಿರುವ ಕೋಟು; ದರ್ಜಿಯ ಕೈದಾಟಿ ಬಹುಕಾಲವಾಗಿ, ಕೈಹೊಲಿಗೆಯನ್ನು ಪದೇ ಪದೇ ಹೊಂದಿ ಕುಬ್ಜವಾಗಿರುವುದು; ಮೊಳಕೈ ಮುಂತಾ ದೆಡೆ ಜೀರ್ಣವಾಗಿದೆ. . . ."

"ಹೊರಡೋಣವೆ, ರಾಮರಾವ್?"

ರಾಮೂ ಯೋಚನೆ ಅಷ್ಟಕ್ಕೇ ನಿಂತು ಅದೇ ದಿನ ವರ್ಗವಾಗಿ ಬಂದ ಹೆಡ್ ಕ್ಲಾರ್ಕಿನ ಸಂಗಡ ಹೊರಟುಹೋಗುತ್ತ ಇನ್ನೊಂದು ಸಲ ಅವನನ್ನು ನೋಡಿ "ಇವನ ಹೆಂಡತಿ ತಾಟಕಿಯಾಗಿರಬೇಕು; ಇಲ್ಲವೆ, ರೋಗಿಷ್ಠೆಯಾಗಿರಬೇಕು!" ಎಂದುಕೊಂಡ. ಮನುಷ್ಯರ ಮುಖನೋಡಿಯೇ ಅವರ ಸ್ಥಿತಿಗತಿಗಳನ್ನು ಊಹಿಸಿ ಕೊಳ್ಳುವ ಶಕ್ತಿ ತನಗುಂಟೆಂದು ರಾಮು ಹೆಮ್ಮೆ.

ಇಬ್ಬರೂ ಹೊರಟರು.

"ಇಲ್ಲೇ ಜವಳಿ ಅಂಗಡಿಗೆ ಹೋಗಿ ಬರೋಣ, ಬನ್ನಿ" ಎಂದು ರಾಮು ಶೆಟ್ಟರ ಅಂಗಡಿಗೆ ನುಗ್ಗಿದ. ಕೆಲವು ತಿಂಗಳ ಕೆಳಗೆ ಸರಸುಗೆ ಕೊಂಡುಕೊಟ್ಟ ಸೀರೆಯ ಕೊನೆಯ ಕಂತು ಕೊಡಬೇಕಾಗಿತ್ತು. ಕೊಟ್ಟ. ಸರಸೂ ಮನಸ್ತೃಪ್ತಿಗಾಗಿ ಆ ಸೀರೆ ಕೊಂಡದ್ದಾಗಿತ್ತು. ತಿಂಗಳು ತಿಂಗಳೂ ಬಹು ಕಷ್ಟಪಟ್ಟು ಐದು ರೂಪಾಯಿ ಕೊಡುತ್ತಿದ್ದ. ಅದಕ್ಕೆ ಪ್ರತಿಫಲ ಮನೆಯಲ್ಲಿ ಒಲುಮೆಯ ಉಪಚಾರ.

ಹೆಡ್ ಕ್ಲಾರ್ಕನ್ನು ಕಳುಹಿಸಿ ಮನೆಯ ಕಡೆ ಹೊರಟ. ಈ ಸಾರಿ ಇನ್ನೊಂದು ಸೀರೆ ತರಬೇಕೆಂದು ಸರಸು ಹೇಳಿದ್ದಳು. ಒಂದು ಸೀರೆ ಏನು ಭಾಗ್ಯ? ಇದ್ದರೂ ಒಂದೆ, ಇಲ್ಲದಿದ್ದರೂ ಒಂದೆ. ಎಲ್ಲಿಗೆ ಹೋಗಬೇಕಾದರೂ ಅದನ್ನೇ ಉಡಬೇಕು. ಅದೊಂದೇ ಒಳ್ಳೆಯ ಸೀರೆ. ಪದೇ ಪದೇ ಅದನ್ನೇ ಉಟ್ಟರೆ ಎಲ್ಲರೂ ನಗುತ್ತಾರೆ.

"ಒಂದು ಕಣ್ಣು ಕಣ್ಣಲ್ಲ, ಒಂದು ಸೀರೆ ಸೀರೆಯಲ್ಲ" ಎಂದು ಮುಂತಾಗಿ ಗಾದೆ ಬೇರೆ ಹೇಳಿದ್ದಳು.

ರಾಮು ಮನೆಸೇರಿ ಕೋಟುಬಿಚ್ಚಿ ತೂಗುಹಾಕಿದ. ಕೈಕಾಲು ತೊಳೆದು ಚಾಪೆಯ ಮೇಲೆ ಕುಳಿತುದಾಯಿತು. ತಿಂಡಿಯೂ ಮೊದಲಾಯಿತು.

"ಸಂಬಳ ಆಯಿತೆ?" ಎಂದಳು, ಸರಸು.

"ಹುಂ" ಎಂದ.

"ಜವಳಿ ಅಂಗಡೀದು ತೀರಿತಲ್ಲವೆ?"

"ಹುಂ"

ಸರಸಿ ಸುಮ್ಮನಿದ್ದಳು. ಮುಖದ ಮೇಲೆ ಸಂತೋಷ ನಲಿದಾಡುತ್ತಿತ್ತು.

"ಅಂತೂ ತೀರಿತು" ಅಂದಳು.

"ಅಂತೂ ತೀರಿತು!"

"ಹೇಗೆ ತೀರತ್ತೋ ಅಂತ ಮಾಡಿದ್ದೆ!" ಎಂದಳು.

"ಹೌದು, ನಾನೂ ಹಾಗೇ ಮಾಡಿದ್ದೆ!"

"ನಾನು ಆವಾಗ ಹೇಳಿದರೆ ನೀವೇನೇನೊ ಹೇಳಿದಿರಿ!"

"ಏನೇನು ಹೇಳಿದೆ, ಸರಸು?"

"ಸಾಲಮಾಡಬೇಡ, ಹಾಗೆ, ಹೀಗೇಂತ! ಹೇಗೆ ತೀರಿಸೋದೊ ಏನೊ, ಎಂತ! .... ಎಲ್ಲಾರೂ ಬಟ್ಟೆ ತೊಗೊಳ್ಳೋದೇ ಇಲ್ಲವೆ? ... ನಾನು ಆಗ ಹಟ ಮಾಡಿದ್ದಕ್ಕೆ ಒಂದು ಸೀರೆ ಆದರೂ ಆಯ್ತು; ಇಲ್ಲದಿದ್ದರೆ ನಮ್ಮ ತಾಪತ್ರಯದಲ್ಲಿ ಅದೂ ಆಗ್ತಾ ಇರಲಿಲ್ಲ."

"ಹೌದು, ಹೌದು!"

ಸರಸು ಪ್ರಸನ್ನಳಾಗಿದ್ದಳು. ಅವನ ಷರ್ಟಿನ ಗುಂಡಿಗಳನ್ನು ಬಿಚ್ಚುತ್ತಾ, ಮತ್ತೆ ಹಾಕುತ್ತಾ, ಮಧ್ಯೆ ಮಧ್ಯೆ ನಗುತ್ತಾ ನಲಿದಾಡುತ್ತಿದ್ದಳು. ತಿಂಡಿ ಆಯಿತು; ಕಾಫೀ ಆಯಿತು. ಅದು ಇದು ಚಿಲ್ಲರೆ ಸವಿಮಾತುಗಳು ಬೇಗ ಆಗಿ ಮುಗಿದುವು. ಕಡೆಗೆ,

"ಹಾಗಾದರೆ ಅದನ್ನೇನು ಮಾಡಿದಿರಿ?" ಎಂದಳು.

"ಯಾವುದನ್ನ?"

"ಇನ್ನೊಂದು ಸೀರೇನ, ಆ ಸ್ಕೈಕಲರ್‌ದು!"

"ಯೋಚಿಸುತ್ತಾ ಇದ್ದೇನೆ, ಸರಸು!"

"ಯೋಚಿಸೋದೇನು ಬಂತು? ಅದು ತೀರದ ಹಾಗೇ ಇದೂ ತೀರುತ್ತೆ!"

"ಹಾಗಲ್ಲ, ನಾನೂ ಸ್ವಲ್ಪ ಬಟ್ಟೆ ಕೊಂಡುಕೊಬೇಕಾಗಿದೆ, ಸರಸಾ!"

"ನೀವು ಕೊಳ್ಳೋದು ಇದ್ದೇ ಇದೆ! ಟ್ರಂಕಿನ ತುಂಬಾ ಬೇಕಾದಷ್ಟಿದೆಯಲ್ಲ ನಿಮಗೆ!"

" ಅಲ್ಲ. . . . "

" ನನಗ್ಗೊತ್ತು ಬಿಡಿ ನಿಮ್ಮ ವಿದ್ಯಾ . . . ನಾನು ಎಂದರೆ ನಿಮಗೆ ಹಾಗೆ ಹಾಗೇ . . . "

" ರಾಮು ಸುಮ್ಮನಾದ. ಹಾಳು ಸಂಬಳದ ದಿನ ಏತಕ್ಕೆ ಬರುತ್ತೋ, ಎಂದುಕೊಂಡ.

ಆ ದಿನ ಮನೆಯಲ್ಲಿ ಮೋಡ ಕವಿದುಕೊಂಡಿತ್ತು. ತುಟಿ ಪಿಟಕ್ಕೆನಲಿಲ್ಲ ಸರಸು.

" ಸಾರು ಏಕೆ ಹೀಗಿದೆ ? " ಎಂದ.

" ಇನ್ನು ಹೇಗಿರಬೇಕು ? "

ರಾಮು ಸುಮ್ಮನಾದ.

ಬೆಳಿಗ್ಗೆ ಎದ್ದಾಗ ಸರಸಿಯ ಮುಖ ರುಮ್ಮೆನ್ನುತ್ತಿತ್ತು. ಮತ್ತೆ ಬಿಸಿ ಬಿಸಿ ಮಾತುಕತೆ. ಟೈಮಿಗೆ ಸರಿಯಾಗಿ ಊಟ ಸಿದ್ಧವಾಗಲಿಲ್ಲ. ಉಪವಾಸ ಹೊರಟ ಆಫೀಸಿಗೆ.

ಸಾಯಂಕಾಲ ಆಫೀಸಿನಿಂದ ಹೊರಟವನು ಸಿದ್ಧಾಂತಮಾಡಿಕೊಂಡಿದ್ದ: ಜವಳಿಯ ಅಂಗಡಿಗೆ ಹೊರಟು ಬೇಕಾದ ನಾಲ್ಕೈದನ್ನು ಆರಿಸಿಕೊಂಡ ; ಒಂದನ್ನು ಚುನಾಯಿಸಿ ಉಳಿದುದನ್ನು ಹಿಂದಕ್ಕೆ ಕಳುಹಿಸುತ್ತೇನೆಂದು ಹೇಳಿ ಲೆಕ್ಕಬರೆದು ಮನೆಗೆ ಹೊರಟ.

ಸೀರೆಯ ಗಂಟನ್ನು ಕಂಡ ಕೂಡಲೆ ಸರಸಿಯ ಮುಖ ಗೆರಸಿಯಗಲವಾಯಿತು.

" ಇದೇ ಇರಲೀಂದ್ರೆ ! " ಎಂದು ಒಂದನ್ನಾರಿಸಿದಳು.

" ಹುಂ " ಎಂದ ರಾಮು.

ಉಳಿದುವನ್ನು ಅಂಗಡಿಯ ಆಳಿನ ಸಂಗಡ ಕೊಟ್ಟು ಕಳುಹಿಸಿ ಕೋಟನ್ನು ಬಿಚ್ಚಿ ತೂಗುಹಾಕಿದ. ಹಾಗೆಯೇ ಜಗುಲಿಯ ಮೇಲೆ ಬಂದುನಿಂತು ಗಾಳಿ ಹಾಕಿಕೊಳ್ಳುತ್ತಾ ಕುಳಿತ. ಹಸಿವು ಬೇರೆ. ಒಳಗಿಂದ ಏನಾದರೂ ಕರೆ ಬರುತ್ತದೇನೋ ಎಂದು ಕಾದ. ಒಳಗೆ ನೋಡಲು ಕೋಟು ತೂಗುತ್ತಾ ಇರುವುದು ಕಂಡುಬಂದಿತು. ಹತ್ತಿರ ಹೋಗಿ ನೋಡಲು ಬಲತೋಳಿನ ಮೊಳಕೈಬಳಿ ಜೀರ್ಣವಾಗಿದೆ. ಬೆನ್ನಬಳಿ ಹೊಲಿಗೆ ಬಿಟ್ಟುಹೋಗಿದೆ ! ಹಿಂದಿನ ದಿನ ಹೆಡ್ ಕ್ಲಾರ್ಕನ್ನು ನೋಡಿ ಊಹಿಸಿದ್ದುದು ಜ್ಞಾಪಕಕ್ಕೆ ಬಂತು —

" ಅವನ ಹೆಂಡತಿ ತಾಟಕಿಯಾಗಿರಬೇಕು, ಇಲ್ಲವೇ ರೋಗಿಷ್ಠೆಯಾಗಿರಬೇಕು, ಅಂಥವರನ್ನು ಕೈಹಿಡಿದ ಗಂಡಂದಿರ ಗತಿಯೇ ಹೀಗೆ ! . . . . "

ರಾಮು ನಕ್ಕ !

ಶೇಷು.

---

# ಬೋರೆಗೌಡ ಮತ್ತು ನೋಟುಗಳು

ಜೀವನ ನಡಸುವುದು ಬರುಬರುತ್ತ ಕಷ್ಟವಾಗುತ್ತಿದೆ. ಹಣದ ಕೊರತೆಯಿಲ್ಲದ ಈ ಕಾಲದಲ್ಲಿ ಹೀಗೂ ಉಂಟೆ ಎಂಬ ಕೇಳಿಕೆ ಸಹಜ. ಪ್ರಶ್ನೆಗಿಂತ ಉತ್ತರ ತೊಡಕಾದದ್ದು. ಈ ಒಗಟನ್ನು ಬಿಡಿಸದಿದ್ದರೆ ಚಿಂತೆಯಿಲ್ಲ, ಅದನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡೋಣ ಎಂಬ ಆಸೆ ಈ ಬರಹಕ್ಕೆ ನೆಪ.

ಹೆಚ್ಚಿದ ಹಣದ ಹಾವಳಿಯನ್ನು ಸಗಟುಧಾರಣೆವಾಸಿಯ ಸೂಚೀ ಸಂಖ್ಯೆಗಳು ಕಣ್ಣಮುಂದೆ ಹಿಡಿಯುತ್ತವೆ.

(1939 ನೆಯ ಆಗಸ್ಟ್ 19 ಕ್ಕೆ ಮುಗಿದ ವಾರದಲ್ಲಿದ್ದ ಬೆಲೆ = 100)

| | ಫೆಬ್ರುವರಿ '43 | ಜನವರಿ '43 | ಫೆಬ್ರುವರಿ '42 |
|---|---|---|---|
| ಆಹಾರ ಮತ್ತು ಹೊಗೆಸೊಪ್ಪು | 207.0 | 190.8 | 132.3 |
| ಇತರ ವ್ಯವಸಾಯ ವಸ್ತುಗಳು | 193.8 | 183.3 | 125.3 |
| ಮೂಲಸಾಮಗ್ರಿಗಳು | 172.0 | 171.5 | 158.0 |
| ಸಿದ್ಧವಾದ ಸಾಮಾನುಗಳು | 225.5 | 224.1 | 162.3 |
| ಪ್ರಧಾನ ವಸ್ತುಗಳು | 190.5 | 182.0 | 140.6 |
| ಎಲ್ಲಾ ಸಾಮಾನುಗಳು | 197.6 | 190.4 | 145.0 |
| ಮುಖ್ಯ ರಫ್ತುಗಳು | 187.6 | 177.2 | 142.4 |

ಒಟ್ಟಿನಲ್ಲಿ ಈ ಸೂಚೀ ಸಂಖ್ಯೆ 1939 ನೆಯ ಆಗಸ್ಟಿನಲ್ಲಿ 100 ಆಗಿದ್ದದ್ದು 1943 ನೆಯ ಮಾರ್ಚಿನಲ್ಲಿ 220.1 ಕ್ಕೆ ಏರಿದೆ. ಚಲಾವಣೆಯ ನೋಟು ಹಣ ಎಷ್ಟು ಹೆಚ್ಚಿದ್ದೀತು? ಇಲ್ಲಿ ಅದರ ಅಂಕಿಗಳಿವೆ:

(ಕೋಟಿ ರೂಪಾಯಿಗಳಲ್ಲಿ)

| | ಒಟ್ಟು ನೋಟುಗಳು | ಬಳಕೆಯಲ್ಲಿರುವ ನೋಟುಗಳು | ಪೌಂಡು[1] ಹಣಪತ್ರಗಳು |
|---|---|---|---|
| ಆಗಸ್ಟ್ '39 | 216.78 | 178.89 | 59.50 |
| ಸರಾಸರಿ '39—'40 | 227.75 | 208.86 | 78.32 |

[1] ಪೌಂಡು ಸ್ಟರ್ಲಿಂಗ್ ಇಂಗ್ಲಂಡಿನಲ್ಲಿ ಚಲಾವಣೆಯಲ್ಲಿರುವ ಹಣದ ಹೆಸರು. ರೂಪಾಯೆಂದರೆ ಹೇಗೆ ಒಂದು ಬೆಲೆಯ ಅಳತೆಯೋ ಹಾಗೇ ಅದೂ. ರೂಪಾಯೆಂದರೆ ನೋಟಾಗಬಹುದು; ಬೆಳ್ಳಿಯ

| | ಒಟ್ಟು ನೋಟುಗಳು | ಬಳಕೆಯಲ್ಲಿರುವ ನೋಟುಗಳು | ಪೌಂಡು ಹಣಪತ್ರಗಳು |
|---|---|---|---|
| ಸರಾಸರಿ '40—'41 | 258.77 | 241.62 | 126.97 |
| ,, '41—'42 | 320.63 | 308.46 | 165.44 |
| ಮಾರ್ಚ್ 26, '43 | 655.11 | 643.58 | 421.71 |
| ಜುಲೈ 9, '43 | 748.26 | 737.62 | 570.79 |
| ಹೆಚ್ಚಿದ್ದು | 531.48 | 558.73 | 511.29 |

ಇದರ ಅರ್ಥ ಇಷ್ಟೇ: ಲಂಡನಿನಲ್ಲಿ ಕೊಂಡ ಸ್ಟರ್ಲಿಂಗ್ ಪತ್ರಗಳು ಹೆಚ್ಚಿದಂತೆಲ್ಲ ನಮ್ಮ ದೇಶದ ಮುಖ್ಯ ಬ್ಯಾಂಕಾದ ರಿಸರ್ವ್ ಬ್ಯಾಂಕ್ ಹೆಚ್ಚು ಹೆಚ್ಚಾಗಿ ನೋಟುಗಳನ್ನು ಅಚ್ಚುಹಾಕಿ ಚಲಾವಣೆಗೆ ಕಳ್ಳುಹಿಸುತ್ತಿದೆ. ಸ್ಟರ್ಲಿಂಗಿನ ಬಲವಿಲ್ಲದ ನೋಟುಗಳಿಗೆ ರೂಪಾಯಿ ಠೇವಣಿಯೇ ಬಲವಾಗುವುದು. ರೂಪಾಯಿ ಠೇವಣಿ ಇಂಡಿಯಾ ಸರ್ಕಾರದ ಆಧಾರಪತ್ರ ಅಥವಾ ಖಜಾನೆಹುಂಡಿ ಈ ರೂಪದಲ್ಲಿರುತ್ತದೆ.

ಅಲ್ಲದೆ ಬ್ಯಾಂಕುಗಳ ಚಾಲ್ತಿ ಅಥವಾ ಕಿರುವಾಯಿದೆ (ಕೇಳಿದಾಗ ಹಿಂದಕ್ಕೆ ಕೊಡಬೇಕಾದ) ಡಿಪಾಸಿಟ್‌ಗಳು ರೂ. ೧೪೦ ಕೋಟಿಯಿಂದ ರೂ. ೩೭೨ ಕೋಟಿಗೆ ಏರಿವೆ. ಆದರೆ ಫಿಕ್ಸೆಡ್ ಡಿಪಾಸಿಟ್‌ಗಳಲ್ಲಿ ಹೇಳಿಕೊಳ್ಳುವಂತಹ ಯಾವ ಬದಲಾವಣೆಯೂ ಆಗಿಲ್ಲ. ದಾಳಿಯಲ್ಲಿ ದುಡ್ಡುಮಾಡುತ್ತಿರುವವರು ತಮ್ಮ ಹಣವನ್ನು ವ್ಯಾಪಾರಕ್ಕಾಗಲಿ ಆಸ್ತಿ ಠೇವಣಿಗಳನ್ನು ಕೊಳ್ಳುವುದಕ್ಕಾಗಲಿ ಕೈಗಾರಿಕೆಗಾಗಲಿ ಉಪಯೋಗಿಸದೆ ಚಾಲ್ತಿ ಡಿಪಾಸಿಟ್ಟಾಗಿಯೇ ಇಟ್ಟಿದ್ದಾರೆ. ಬ್ಯಾಂಕುಗಳಲ್ಲಿ ಒಟ್ಟು ಸಾಲದ ಸೇಕಡ ೧೦ ಭಾಗವಿರುತ್ತಿದ್ದ ನಗದು ಈಗ ಸೇಕಡ ೧೪ ಕ್ಕೇರಿದೆ— ರೂ. ೨೪ ಕೋಟಿಯಿಂದ ರೂ. ೭೭ ಕೋಟಿಗೆ.

ಅಂತೂ ಧಾರಣೆವಾಸಿಗಳು ಬಿರುಗಾಳಿಗೆ ಸಿಕ್ಕಿದಂತೆ ಹಾರಾಡುತ್ತಿವೆ. ಈ ಸ್ಥಿತಿಗೆ ಕಾರಣಗಳು ಹಲವು :—

ಸಾಮಾನುಗಳು ಹೆಚ್ಚುಹೆಚ್ಚಾಗಿ ತಯಾರಾಗುತ್ತಿದ್ದರೂ ಅಪರೂಪವಾಗುತ್ತಿವೆ. ಪದಾರ್ಥದ ಪೇಟೆ ಕೊರೆಬೀಳದ ಗಣಿಯಲ್ಲ. ವ್ಯವಸಾಯ ಮತ್ತು ಕೈಗಾರಿಕೆಗಳು ನೋಟು ಅಚ್ಚುಹಾಕುವ ಯಂತ್ರದಷ್ಟು ಬೇಗ ಕೆಲಸಮಾಡಲಾರವು. ಸೈನ್ಯದ ಉಪಯೋಗಕ್ಕಾಗಿ ಸರ್ಕಾರವೇ ಎಷ್ಟೋ ಸಾಮಾನುಗಳನ್ನು ಕೊಂಡಿಡುತ್ತಿದೆ.

---

ನಾಣ್ಯವಾಗಬಹುದು. ಹಾಗೆಯೇ ಪೌಂಡು. ಪೌಂಡು ನೋಟಾಗಬಹುದು ಅಥವಾ ಸವರನ್ ರೂಪದಲ್ಲಿರಬಹುದು. ಪೌಂಡ್ ಪತ್ರಗಳೆಂದರೆ ಆ ಲೆಕ್ಕದಲ್ಲಿ ಮಾರಾಟಕ್ಕಿರುವ (ಸಾಲದ) ಹಣದ ಪತ್ರಗಳು. ಆ ಮಟ್ಟಿಗೆ ಈ ಪತ್ರಗಳನ್ನು ಕೊಂಡವರಿಗೆ ಬ್ರಿಟಿಷರು ಸಾಲಗಾರರಾಗುವರು.

ಬ್ರಿಟಿಷ್ ಸರ್ಕಾರದ ಪರವಾಗಿ ದೇಶದಲ್ಲಿ ಸರ್ಕಾರವು ರೂಪಾಯಿಕೊಟ್ಟು ಅನೇಕ ಸಾಮಾನುಗಳನ್ನು ಕೊಂಡುಕೊಳ್ಳುವುದು. ಇದಕ್ಕೆ ಬದಲಾಗಿ ಬ್ರಿಟಿಷ್ ಸರ್ಕಾರದ ಸ್ಟರ್ಲಿಂಗ್ ಆಧಾರಪತ್ರಗಳು ಇಲ್ಲಿನ ಸರ್ಕಾರದ ಕೈಸೇರುತ್ತವೆ. ಈ ಸ್ಟರ್ಲಿಂಗ್ ಪತ್ರಗಳ ಆಧಾರದ ಮೇಲೆ ನೋಟುಗಳನ್ನು ಅಚ್ಚು ಹಾಕುವ ಹಕ್ಕು ರಿಸರ್ವ್ ಬ್ಯಾಂಕಿಗಿದೆ. ಅಲ್ಲದೆ ಇದೇ ಕಾಲದಲ್ಲಿ ದೇಶದ ಆಮದಿಗಿಂತ ರಫ್ತು ಹೆಚ್ಚಿದೆ. 1939 ನೆಯ ಸೆಪ್ಟೆಂಬರಿನಿಂದ 1943 ನೆಯ ಮಾರ್ಚ್‌ವರೆಗೆ ದೇಶದ ಹೊರಕ್ಕೆ ಸಾಮಾನು ಕಳಿಸಿರುವ ವರಿಗಾಗಿ ಈ ಬಗ್ಗೆ ರಿಸರ್ವ್ ಬ್ಯಾಂಕ್ ರೂ. 382 ಕೋಟಿ ಬೆಲೆಯ ಸ್ಟರ್ಲಿಂಗನ್ನು ಸಂಗ್ರಹಿಸಿಕೊಂಡಿತು. ಈ ಎರಡು ಕಾರಣಗಳಿಂದ ಭರತಖಂಡದ ಲೆಕ್ಕಕ್ಕೆ ರೂ. 555 ಕೋಟಿ ಬೆಲೆಯ ಸ್ಟರ್ಲಿಂಗ್ ಲಂಡನಿನಸಲ್ಲಿ ಕೂಡಿದೆ. ಸರ್ಕಾರದ ವಿನಿಮಯ ದರದ ಪ್ರಕಾರ ಇದರ ಬೆಲೆ 740 ಕೋಟಿ ರೂಪಾಯಿಗಳು (ಪೌಂ. 1 = ರೂ. 13-5-4).

ಈ ಸ್ಟರ್ಲಿಂಗನ್ನು ಉಪಯೋಗಿಸಿ ರಿಸರ್ವ್ ಬ್ಯಾಂಕು ಇಂಡಿಯಾ ದೇಶದ ಸ್ಟರ್ಲಿಂಗ್ ಸಾಲಗಳನ್ನು ತೀರಿಸಿದೆ. ಸ್ಟರ್ಲಿಂಗ್ ಸಾಲ 1938-39 ರಲ್ಲಿ ರೂ. 469 ಕೋಟಿ ಇದ್ದದ್ದು. 1942-43 ರಲ್ಲಿ ರೂ. 93 ಕೋಟಿಗೆ ಇಳಿಯಿತು. ಈಗ ಪ್ರಾಯಶಃ ಏನೂ ಇರಲಾರದು. ಬ್ರಿಟಿಷರಿಗೆ ತೆರಬೇಕಾದ ಅದನ್ನು ತೀರಿಸಿಯಾದಮೇಲೂ ಈ ಸಾಲ ರೂಪಾಯಿ ಸಾಲದ ರೂಪದಲ್ಲಿ ಅವತರಿಸುತ್ತದೆ:[1] ಆಗಾಗ ಸರ್ಕಾರವು ರಿಸರ್ವ್ ಬ್ಯಾಂಕಿಗೆ ಸ್ಟರ್ಲಿಂಗ್ ಠೇವಣಿಗಳನ್ನು ಕೊಡುತ್ತದೆ. ಈ ರೂಪಾಯಿ ಮತ್ತು ಸ್ಟರ್ಲಿಂಗ್ ಠೇವಣಿಗಳ ಆಧಾರದ ಮೇಲೆ ರಿಸರ್ವ್ ಬ್ಯಾಂಕು ನೋಟುಗಳನ್ನು ಅಚ್ಚು ಮಾಡಿ ಪ್ರಚಾರಕ್ಕೆ ತರುತ್ತದೆ. ಹೊಸ ನೋಟಿನ ಮೊದಲ ಉಪಯೋಗ ಸರ್ಕಾರಕ್ಕೆ ಸೇರಿದ್ದರಿಂದ ಪೇಟೆಯಲ್ಲಿ ಸರ್ಕಾರವು ತನ್ನ ಮತ್ತು ಬ್ರಿಟಿಷ್ ಸರ್ಕಾರದ ಪರವಾಗಿ ಹೆಚ್ಚು ಹೆಚ್ಚಾಗಿ ಸಾಮಾನು ಕೊಳ್ಳಲು ಸಾಧ್ಯವಾಗುವುದು. ಹೀಗೆ ನಡೆದಿದೆ ಸ್ಟರ್ಲಿಂಗ್-ರೂಪಾಯಿ ನೋಟುಗಳ ಪ್ರದಕ್ಷಿಣೆ. ಎಂದರೆ ಬ್ರಿಟಿಷರಿಗೆ ಇಂಡಿಯಾದ ಸಾಮಾನು ಬೇಕು. ಕೆಲಸ ಬೇಕು. ಅದಕ್ಕಾಗಿ ತಮ್ಮ ಹಣ ಕೊಡುತ್ತಾರೆ. ಅದನ್ನು ಆಧಾರವಾಗಿಟ್ಟುಕೊಂಡು ಇಂಡಿಯಾ ಸರ್ಕಾರ ಅದಕ್ಕೆ ತಕ್ಕಷ್ಟು ಹೊಸ ರೂಪಾಯಿಗಳನ್ನು ಚಲಾವಣೆಗೆ ತರುತ್ತದೆ. ಆ ಹಣ ನಮ್ಮ ವರ್ತಕರ ಕೈ ಸೇರಿ ದೇಶದ ಒಳಗೆ ಸಂಚರಿಸುವ ಹಣದ ಮೊತ್ತವನ್ನು ಹೆಚ್ಚು ಮಾಡುತ್ತದೆ.

ಯುದ್ಧ ಮುನ್ನಡೆದ ಹಾಗೆಲ್ಲ ಸರ್ಕಾರದ ಆದಾಯಕ್ಕಿಂತ ವೆಚ್ಚ ಏರುತ್ತದೆ. ಈ ಅರೆಯನ್ನು ತುಂಬಲು ಸರ್ಕಾರ ಜನರಿಂದಲೂ ಹಣದ ಪೇಟೆಯಿಂದಲೂ ಆಗಾಗ

[1] ಎಂದರೆ, ಸ್ಟರ್ಲಿಂಗ್ ಸಾಲ ತೀರಿದ ಕೂಡಲೆ ಅಷ್ಟು ನೋಟು ಇಲ್ಲಿ ಕಡಮೆಯಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ರೂಪಾಯಿ ಲೆಕ್ಕದ ಸಾಲ ಹುಟ್ಟಿಕೊಳ್ಳುತ್ತದೆ.

ಹಣವನ್ನು ಕಿರುವಾಯಿದೆ ಸಾಲ ತೆಗೆದುಕೊಳ್ಳುತ್ತದೆ. ತಕ್ಷಣಕ್ಕೆ ಆ ಮೊಬಲಗಿನಷ್ಟು ಹಣವನ್ನು ಸರಕಾರ ವೆಚ್ಚಮಾಡುವುದರಿಂದ ಚಲಾವಣೆಯ ಮೊತ್ತ ಹೆಚ್ಚುತ್ತದೆ. ಹೀಗೆ ಹೆಚ್ಚಿದ ಹಣದ ಹಾವಳಿ ಕೆಲಕಾಲ ಮುಚ್ಚಿಕೊಂಡು ಬಂದರೂ ಸ್ಟರ್ಲಿಂಗ್ ಠೇವಣಿಗಳ ಆಧಾರದಮೇಲೆ ಹೊರಟ ನೋಟುಗಳ ಪರಂಪರೆ ವಿಪರೀತವಾದ್ದರಿಂದ ಇದು ಹೆಚ್ಚು ದಿವಸ ನಡೆಯಲಿಲ್ಲ. ಅದರ ಫಲವಾಗಿ ಈಗ ಯಾವ ಸಾಮಾನೂ ಜನಸಾಮಾನ್ಯದ ಕೈಗೆ ಸಿಗದಂತಾಗಿದೆ.[1]

ಈ ದೇಶದ ಸ್ಟರ್ಲಿಂಗ್ ಸಾಲವೇನೊ ಕಡಮೆಯಾಯಿತು; ಆದರೆ ಸ್ಟರ್ಲಿಂಗ್ ಠೇವಣಿಗಳ ಕಂತೆ ಹೆಚ್ಚುತ್ತಿದೆ.

(ಕೋಟಿ ರೂಪಾಯಿಗಳಲ್ಲಿ)

| | ಕಮ್ಮಿಯಾದ ಸ್ಟರ್ಲಿಂಗ್ ಸಾಲ | ಹೆಚ್ಚಾದ ಸ್ಟರ್ಲಿಂಗ್ ಠೇವಣಿ |
|---|---|---|
| 1939-40 | 26.61 | 18.82 |
| 1940-41 | 97.56 | 51.65 |
| 1941-42 | 164.93 | 35.47 |
| 1942-43 (ನಿರೀಕ್ಷೆ) | 117.33 | 256.27 |

ಈ ಕಂತೆಗೆ ತಕ್ಕ ಜೊಂತೆ ಕೊನೆಮೊದಲಿಲ್ಲದ ನೋಟ್ ನಿರ್ಮಾಣ. ಹೆಚ್ಚು ನೋಟು ಕೈಗೆ ಬಂದರೆ ಅಷ್ಟು ಹೆಚ್ಚು ಪದಾರ್ಥ ಸಿಕ್ಕಿದಂತಾಯಿತೇನು? ಪದಾರ್ಥಗಳ ಬೆಲೆ ಹೆಚ್ಚುತ್ತದೆ. ನೋಟ್ ಹೆಚ್ಚಿದ ಹಾಗೆಲ್ಲ ಧಾರಣೆವಾಸಿಗಳ ಪರದಾಟ ಬಲವಾಗುತ್ತದೆ. ಇನ್ನೊಂದು ಕಡೆ ಜನಗಳಿಗೆ ನೋಟಿನಲ್ಲಿ ನಂಬಿಕೆ ಇಳಿದು ಅವರಲ್ಲಿ ಸಾಮಾನುಗಳನ್ನು ಕೂಡಿಹಾಕುವ ಬುದ್ಧಿ ಹುಟ್ಟುತ್ತದೆ. ಅದನ್ನೂ ಕಾನೂನಂತೆ

[1] ಜನದ ಕೈಗೆ ಸಾಮಾನು ಸಿಕ್ಕದಿರುವುದು ಧಾರಣೆವಾಸಿ ಏರುವುದಕ್ಕೆ ಒಂದು ಕಾರಣ. ಸರಕಾರದವರು ಬೇಕಾದಷ್ಟು ಹೆಚ್ಚಿನ ಬೆಲೆ ಕೊಡುವುದಕ್ಕೆ ಸಿದ್ಧರಾಗಿ ಅದನ್ನು ಏರಿಸುತ್ತಿರುವುದು ಇನ್ನೊಂದು ಕಾರಣ. ಸರಕಾರದ ಈ ಕೆಲಸಗಳಿಂದ ಲಾಭ ಪ್ರತಿಫಲ ದೊರೆತವರೂ, ಹೆಚ್ಚಿನ ಸಂಬಳ ಪಡೆದ ಮಂದಿಯೂ, ಸೈನ್ಯಗಳವರೂ ತಮ್ಮ ಕೈಯಲ್ಲಿ ಕುಣಿಯುವ ಪುಷ್ಕಲ ಹಣವನ್ನು ಎಷ್ಟು ಬೇಕೆಂದರಷ್ಟು ವೆಚ್ಚಮಾಡುತ್ತಿರುವುದು ಮತ್ತೊಂದು. ಈ ಸಂಬಂಧದಲ್ಲಿ ಸೈನ್ಯಕ್ಕೆ ಸಂಬಂಧಿಸದ ಸಾಮಾನ್ಯರ ಬಳಕೆಗೆ ಬೇಕಾಗುವ ಪದಾರ್ಥಗಳ ಮತ್ತು ಸೇವೆ ಸೌಕರ್ಯಗಳ ಧಾರಣೆ ಎದೆ ಒಡೆಯುವಷ್ಟು ಏರಿರುವುದನ್ನು ಹೆಚ್ಚಾಗಿ ಗಮನಿಸಬೇಕು. ಜನ ಇಂತಹ ಸಮಯಗಳಲ್ಲಿ ಕಂಗಾಲಾಗಿ ನಿಸ್ಸಹಾಯರಾಗುತ್ತಾರೆ. ಬ್ರಿಟಿಷರ ವೆಚ್ಚವೆಂದರೆ ಅಮೇರಿಕಾ ಸೈನ್ಯಗಳವರಿಗಾಗಿ ಮಾಡುವ ವೆಚ್ಚವೂ ಸೇರುತ್ತದೆ. ಅದಕ್ಕೂ ರೂಪಾಯಿ ಒದಗಿಸಬೇಕು. ಪದಾರ್ಥಗಳನ್ನು ಕೊಳ್ಳಬೇಕು. ಇವೆಲ್ಲದರ ಪರಿಣಾಮ ನಾಡಿನ ಸಮಾನ್ಯರಿಗೆ ದುಗುಣೀ ಕಷ್ಟ.

ಕೊಟ್ಟುಬಿಡಬೇಕಾಗಿ ಬಂದರೆ ಕೊನೆಗೆ ಬೋರೆಗೌಡನು ಹೊಟ್ಟೆಯ ಮೇಲೆ ಒದ್ದೆಬಟ್ಟೆ ಕೂಡ ಹಾಕಿಕೊಳ್ಳುವ ಹಾಗಿಲ್ಲ. ಸುಲಭವಾಗಿ ಬಟ್ಟೆಯೂ ಸಿಕ್ಕದು.

ಇದನ್ನು ಸರಿಮಾಡುವುದು ಹೇಗೆ ಎಂಬುದು ಮುಖ್ಯ. ಮೊದಲು ಹಣದ ಮೊತ್ತವನ್ನು ಕಡಮೆಮಾಡಬೇಕು. ಅಂದರೆ ಹಾಳುಭಾವಿಯನ್ನೋ ಬೆಂಕಿಕಡ್ಡಿಯನ್ನೋ ಹುಡುಕಬೇಕೆಂದಲ್ಲ. ಸರ್ಕಾರವು ಜನರಿಂದ ಸಾಧ್ಯವಾದ ಮಟ್ಟಿಗೆ ಸಯವಾಗಿ ನ್ಯಾಯವಾಗಿ ಹಣವನ್ನು ಹಿಂದಕ್ಕೆಳೆಯಬೇಕು.

(೧) ಜನರಿಂದ ಹಣವನ್ನು ಕಡವಾಗಿ ಪಡೆದು ಆ ಮೊತ್ತವನ್ನು ಕಡಮೆಮಾಡಬಹುದು. ಆ ಪ್ರಕಾರ ಸರ್ಕಾರ ಬಡ್ಡಿತೆರುವ ಸಾಲವನ್ನೇನೊ ಹೆಚ್ಚು ಮಾಡಿಕೊಂಡಿದೆ. 1943 ನೆಯ ಜೂನ್ ವರೆಗೆ ಈ ಸಾಲ ರೂ. 1,206 ಕೋಟಿಯಿಂದ ರೂ. 1,405 ಕೋಟಿಗೇರಿತು. ಎಂದರೆ ಸುಮಾರು ರೂ. 200 ಕೋಟಿಯಷ್ಟು. ಆದರೆ ಇದು ಪ್ರತಿಯಾಗಿ ಯಾವ ಫಲಪ್ರಯೋಜನವನ್ನೂ ತರತಕ್ಕದ್ದಲ್ಲ. ಅಲ್ಲದೆ, ಎಷ್ಟು ಮೊತ್ತ ಸಾಲ ಹುಟ್ಟಿದರೆ ಪ್ರಯೋಜನವಾಗಬಹುದಾಗಿತ್ತೊ ಅಷ್ಟು ಮೊತ್ತದಲ್ಲಿ — ರಾಜಕೀಯ ಕಾರಣಗಳಿಂದಾಗಿ — ಸರ್ಕಾರಕ್ಕೆ ಸಾಲ ದೊರೆಯುತ್ತಿಲ್ಲ.

(೨) ಹಳೆಯ ತೆರಿಗೆಗಳ ದರವನ್ನು ಹೆಚ್ಚಿಸುವುದೂ ಹೊಸ ತೆರಿಗೆಗಳನ್ನು ಹಾಕುವುದೂ ಇನ್ನೊಂದು ದಾರಿ. ಅಧಿಕಲಾಭದ ತೆರಿಗೆ ಎಂಬುದು ಹೊಸದಾಗಿ ಜಾರಿಗೆ ಬಂದಿತು. ರೂ. 36,000 ಕ್ಕಿಂತ ಹೆಚ್ಚಾದ ವಾರ್ಷಿಕ ವರಮಾನವಿರುವ ಸಂಸ್ಥೆಗಳು ಇದನ್ನು ತೆರುವುವು. ಇದು ಸೇಕಡ 66⅔ ರ ತೆರಿಗೆ. ಅಲ್ಲದೆ ತೆರಿಗೆಯ ಸೇಕಡ 20 ರಷ್ಟನ್ನು ಸಂಸ್ಥೆಗಳು ಸರ್ಕಾರದಲ್ಲಿ ಡಿಪಾಸಿಟ್ ಮಾಡಬೇಕು. ಇದರಿಂದ ಅಧಿಕ ಲಾಭದ ಸೇಕಡ 80 ಸರ್ಕಾರದ ವಶವಾದಂತಾಯಿತು. ವರಮಾನದ ತೆರಿಗೆಯ ದರವನ್ನು ಹೆಚ್ಚಿಸಿದ್ದಾರೆ; ಮತ್ತು ತೆರಿಗೆ ಕೊಡಬೇಕಾದ ಮಿತಿಯನ್ನು ತಗ್ಗಿಸಿ ಹಿಂದೆ ತೆರಬೇಕಾಗಿರಲಿಲ್ಲದವರೂ ಕೊಡುವಂತೆ ಮಾಡಿದ್ದಾರೆ. ರೂ. 15,000 ಮೇಲಿರುವ ವರಮಾನಗಳ ತೆರಿಗೆಯ ಮೇಲೆ ಸೇಕಡ 50 ತೆರಿಗೆ ಹೊರಿಸುವ ಏರ್ಪಾಡು ನಡೆದಿದೆ. ಈ ಸರ್‌ಛಾರ್ಜಿನಿಂದಲೇ 1943-44 ರಲ್ಲಿ ರೂ. 16 ಕೋಟಿ ಆದಾಯ ಬರುವ ನಿರೀಕ್ಷೆಯಿದೆ. ಬೇರೆ ಎಲ್ಲಾ ತೆರಿಗೆಗಳನ್ನೂ ಹೆಚ್ಚಿಸಿಯೂ ಆಗಿದೆ.[1]

[1] ತೆರಿಗೆಗಳನ್ನು ಪದಾರ್ಥರೂಪವಾಗಿ ತೆಗೆದುಕೊಳ್ಳುವ ಸಲಹೆಯಿದೆ. ಮದರಾಸ್ ಸರ್ಕಾರವು ಭೂಕಂದಾಯದ ಕಿಸ್ತನ್ನು ಹಣಕ್ಕೆ ಬದಲು ಬತ್ತದರೂಪವಾಗಿ ವಸೂಲುಮಾಡುವ ಆಲೋಚನೆ ಮಾಡುತ್ತಿದೆ. ಇದರಿಂದ ತೆರಿಗೆ ಕೊಡಬೇಕಾಗಿಲ್ಲದ ಮಿತಿಯನ್ನು ಕಡಮೆ ಮಾಡಬೇಕಾಗುವುದು: ಇಲ್ಲದಿದ್ದರೆ ಬಡವರ ಬಾಯಿಂದ ಅನ್ನವನ್ನು ಕಿತ್ತುಕೊಂಡ ಹಾಗಾಗುತ್ತದೆ. ಆಹಾರ ಪದಾರ್ಥಗಳ ವ್ಯವಸ್ಥೆ ಇದರಿಂದ ಉತ್ತಮಗೊಳ್ಳುವುದೇನೋ ನಿಜ. ಆದರೆ ಹಣ ತುಂಬ ಕಡಮೆಯಾದಾಗ ಈ ಸಲಹೆ ಫಲಕಾರಿ. ಹೆಚ್ಚಾಗಿರುವಾಗಲಲ್ಲ.

ಈ ಬಗೆಗಳಲ್ಲಿ ಹಣ ಕಡಮೆ ಆದರೂ ಸಾಕಾದಷ್ಟು ಕಮ್ಮಿಯಾಗಿಲ್ಲ.

(೩) ಪದಾರ್ಥಗಳನ್ನು ಹೆಚ್ಚು ಹೆಚ್ಚಾಗಿ ತಯಾರಿಸಿ ಅಥವಾ ಬೇರೆ ದೇಶಗಳಿಂದ ಆಮದುತಂದು ಅವುಗಳನ್ನು ಸರಿಯಾಗಿ ಜನರಲ್ಲಿ ಹಂಚುವುದು ಹಣದ ಬೆಲೆಯನ್ನು ಹೆಚ್ಚಿಸುವುದಕ್ಕೂ ಪದಾರ್ಥಗಳ ಧಾರಣೆ ಇಳಿಸುವುದಕ್ಕೂ ಇನ್ನೊಂದು ದಾರಿ. ಯುದ್ಧಕಾರಣದಿಂದ ಜಲಪ್ರಯಾಣಕ್ಕೆ ತೊಂದರೆಯಾದ್ದರಿಂದ ಎಷ್ಟೋ ಸಾಮಾನುಗಳು ಹೊರದೇಶಗಳಿಂದ ಬರುವುದು ನಿಂತಿದೆ. ಅವುಗಳಲ್ಲಿ ಹಲವು ಈಗ ನಮ್ಮಲ್ಲೇ ತಯಾರಾಗುತ್ತವೆ. ಹಿಂದೆ ತೊಂದರೆಯಲ್ಲಿದ್ದ ಕಾಗದ, ಬಟ್ಟೆ ಮುಂತಾದ ಕೈಗಾರಿಕೆಗಳು ಈಗ ಚೆನ್ನಾಗಿ ಕೆಲಸಮಾಡತೊಡಗಿವೆ. ಒಟ್ಟಿನಲ್ಲಿ ಪದಾರ್ಥಗಳ ತಯಾರಿಕೆ ಹೆಚ್ಚಿದೆ. ಇನ್ನೂ ಹೆಚ್ಚಾಗುವ ನಿರೀಕ್ಷೆಯೂ ಇದೆ. ಆದರೂ ಬೋರೆಗೌಡನ ಮಾತಿನಂತೆ 'ಲೋಟಿ'ನಷ್ಟು ಬೇಗ ಯಾವ ಸಾಮಾನೂ ತಯಾರಾಗಲಾರದು.

ಹೋಗಲಿ: ಇರುವ ಪದಾರ್ಥಗಳನ್ನೇ ಸರಿಯಾಗಿ ಹಂಚಬಹುದಲ್ಲ? — ಎನ್ನಬಹುದು. ಪಡಿಕೊಡುವ ಪದ್ಧತಿಯನ್ನು ಅಕ್ಕಿ ಬೇಳೆ ಇವುಗಳಿಗೆ ಹೊಂದಿಸಿದ್ದು ಸರಿ. ಅದನ್ನು ಎಲ್ಲಾ ಪದಾರ್ಥಗಳಿಗೂ ಪ್ರಯೋಗಿಸುವುದು ಕಷ್ಟ. ಅದರಿಂದ ನಷ್ಟವೂ ಕೂಡ.

(೪) ಹಣದ ಹಾವಳಿಯನ್ನು ತಪ್ಪಿಸಲು ಇನ್ನೊಂದು ಸಲಹೆ ಇದೆ, ಧಾರಣೆವಾಸಿ ಪಾತಾಳಕ್ಕಿಳಿಯದ ಹಾಗೆ ಆಕಾಶಕ್ಕೆ ಹತ್ತದಹಾಗೆ ಕಟ್ಟುಮಾಡಬಹುದು. ಖಾಸಗಿ ಬಂಡವಾಳಗಾರರ ಪ್ರಭಾವ ಇರುವ ರಾಜ್ಯಗಳಲ್ಲಿ ಬೆಲೆಗಟ್ಟು ಸುಲಭವಲ್ಲ. ಲಾಭದ ಅಟ್ಟಹಾಸದಲ್ಲಿ ಗಾಳಿಗೆ ಹಾರಿಹೋಗುತ್ತದೆ. ದೇಶದ ಯಾನವಾಹನಗಳ ಆಡಳಿತವೆಲ್ಲ ಹೆಚ್ಚುಕಡಮೆ ಸೈನ್ಯಶಾಖೆಯವರ ಕೈಯಲ್ಲಿರುವುದರಿಂದ ಊರಿಂದ ಊರಿಗೆ ಪದಾರ್ಥಗಳ ಓಡಾಟಕ್ಕೆ ತಡೆಯಿದೆ. ಇದು ಜನಕ್ಕೆ ಪಡಿ ಕೊಟ್ಟೋ ಪದಾರ್ಥಗಳ ಬೆಲೆ ಕಟ್ಟಿಯೊ ವಾಸಿಯಾಗುವ ಕಾಹಿಲೆಯಿಲ್ಲ. ಇದರ ಬೇರು ಬ್ರಿಟನ್-ಇಂಡಿಯಾ, ಸ್ಟರ್ಲಿಂಗ್-ರೂಪಾಯಿ ಇವುಗಳ ಸಂಬಂಧದಲ್ಲಿ ಬೆಸೆದಿದೆ.

ಸ್ಟರ್ಲಿಂಗ್ ಲೆಕ್ಕದ ಸಾಲ[1] ಅಥವಾ ಠೇವಣಿ ಈಗ ಚಲಾವಣೆಯಲ್ಲಿರುವ ನೋಟುಗಳ ತಳಹದಿ ಎಂದೆವು. ಇದು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಆಕ್ಟ್, 1934 ರ 33 ನೆಯ ಕಲಮಿನ ಪ್ರಕಾರ ನಡೆಯುತ್ತಿದೆ. ಈ ಕಾನೂನು 1941 ನೆಯ

[1] ಒಳ್ಳೆಯ ಕಾಲದಲ್ಲಿ ಇದು ನಮ್ಮ ಸಾಹುಕಾರಿಕೆ ಹೆಚ್ಚಿರುವ ಲಕ್ಷಣವಾಗುತ್ತಿತ್ತು. ಏಕೆಂದರೆ ನಮ್ಮ ದೇಶಕ್ಕೆ ಬ್ರಿಟಿಷರು ಆ ಮಟ್ಟಿಗೆ ಸಾಲಗಾರರಾಗುತ್ತಿದ್ದರು. ನಾವು ಅವರ ಸಾಹುಕಾರರಾಗುತ್ತಿದ್ದೆವು. ಈಗಲೂ ಹೆಸರಿಗೆ — ಲೆಕ್ಕಕ್ಕೆ, ಹಾಗೆಯೇ ಸರಿ.

ಫೆಬ್ರುವರಿಯಲ್ಲಿ ತಿದ್ದುಪಡಿಯಾಯಿತು. ಈ ತಿದ್ದುಪಡಿ ನೋಟುಗಳಿಗೆ ಆಧಾರವಾದ ರೂಪಾಯಿ ಠೇವಣಿಗಳಿಗಿದ್ದ ಮಿತಿಯನ್ನು ಕಿತ್ತುಹಾಕಿತು. ನಾವು ತೆರಬೇಕಾಗಿದ್ದ ಸ್ಟರ್ಲಿಂಗ್ ಸಾಲ ಕಡಮೆಯಾಗಿ ನಮ್ಮ ನಿಧಿಗಳಲ್ಲಿ ಕೂಡಿಸಿಟ್ಟಿರುವ ಸ್ಟರ್ಲಿಂಗ್ ಠೇವಣಿ ಹೆಚ್ಚಿದ ಹಾಗೆಲ್ಲ ದೇಶದಲ್ಲಿ ರೂಪಾಯಿ ಠೇವಣಿ ಮಿತಿಮೀರಿ ಬೆಳೆಯುತ್ತಿದೆ. ರೂಪಾಯಿ ಠೇವಣಿಯ ಆಶ್ರಯದಲ್ಲಿ ಹುಟ್ಟಿಕೊಂಡ ನೋಟುಗಳ ಪರಿಮಾಣ ಅತಿಯಾದ್ದು ಈ ತಿದ್ದುಪಡಿಯಿಂದ ನಮ್ಮ ದೇಶಕ್ಕೆ ಬಂದ ಉಡುಗೊರೆ.

ಸ್ಟರ್ಲಿಂಗ್-ರೂಪಾಯಿ ಬಾಂಧವ್ಯವನ್ನು ಬಿಡಿಸುವುದು ಈಗ ಅಸಾಧ್ಯ. ಒಂದು ವೇಳೆ ಈ ವಿವಾಹ ವಿಚ್ಛೇದ ನಡೆದು, ನಮ್ಮ ಹಣ ನಮ್ಮಲ್ಲೇ ಹುಟ್ಟಿಕೊಂಡು ರೂಪಾಯಿ 'ಸ್ವದೇಶಿ'ಯಾದರೂ ಈಗಿರುವ ಸ್ಟರ್ಲಿಂಗ್ ಠೇವಣಿಯನ್ನು ನೀರಿನಲ್ಲಿ ಕದಡಲಾಗುವುದಿಲ್ಲ. ದೇಶದಲ್ಲಿ ನೂರಾರು ವಿದೇಶೀಯ ಸಂಸ್ಥೆಗಳಿವೆ: ರೈಲ್ವೆ, ಟೀ, ರಬ್ಬರ್, ಕಬ್ಬಿಣ ಮುಂತಾದ ಅನೇಕ ಕೈಗಾರಿಕೆಗಳು 'ಅವರ' ಕೈಲಿವೆ. ಈಗ ಬೆಟ್ಟದಂತೆ ಬೆಳೆಯುತ್ತಿರುವ ಸ್ಟರ್ಲಿಂಗ್ ಠೇವಣಿ ಅವನ್ನೆಲ್ಲ ಕೊಂಡು ನಮ್ಮವನ್ನಾಗಿ ಮಾಡಬಲ್ಲುದು. ಸರ್ಕಾರವು ಜನರಿಂದ ಇನ್ನೂ ಹೆಚ್ಚಾಗಿ ಸಾಲಪಡೆಯಬಹುದು. ತುಂಬಾ ಕಷ್ಟಪಟ್ಟರೆ, ಅಮೆರಿಕ ಸಂಯುಕ್ತ ಸಂಸ್ಥಾನ ದಯವಿಟ್ಟರೆ ಈ ಸ್ಟರ್ಲಿಂಗ್ ಠೇವಣಿಯ ಕಾಗದದ ರಾಶಿ, ಚಿನ್ನ ಬೆಳ್ಳಿ ಆಗಬಹುದು. ಹೀಗೆಲ್ಲ ಹಣದ ಮೊತ್ತವನ್ನು ಕಡಮೆಮಾಡಬಹುದು. ಆದರೆ, ಯಾರು, ಎಂದು, ಎಷ್ಟು, ಹೇಗೆ? ಎಂಬವೆಲ್ಲ ಪರ್ಯಾಲೋಚ್ಯಗಳೇ.

ಈಗೊಂದು ಪ್ರಶ್ನೆ: ಹಣ ಹೆಚ್ಚಿದೆ, ಹೌದು. ಅದನ್ನು ಕಡಮೆಮಾಡಬೇಕು: ಅದೂ ಸರಿಯೆ. ಆದರೆ ನಮ್ಮ ದೇಶ ಹಳ್ಳಿಗರದು; ಬೋರೆಗೌಡನದು. ಹೊಸಹಣ ಅವನನ್ನೂ ಮುಟ್ಟಿದೆ. ಪಟ್ಟಣಿಗರು ರುಚಿನೋಡಿದ ಅನೇಕ ಅನುಕೂಲಗಳ ಕಡೆಗೆ ಅವನೀಗ ಕಣ್ಣುಬಿಡುತ್ತಿದ್ದಾನೆ. ಇದರ ಕಾರಣ, ಅವನ ಜೇಬಿಗೆ ಸೇರಿರುವ ಹೊಸ ನೋಟು. ಎಲ್ಲರೂ ನಮವೆನ್ನುವ ಈ ಕಾಲದಲ್ಲಿ ಅಪರೂಪಕ್ಕೆ ಈಗ ಅವನ ಜೇಬಿಗೆ ಬಂದು ಸೇರಿರುವ ನಾಲ್ಕು ನೋಟುಗಳನ್ನು ಕಿತ್ತುಕೊಳ್ಳುವುದು ಸರಿಯೆ? ಎಂಬುದು ಪರ್ಯಾಲೋಚಿಸಬೇಕಾದ ಅಂಶವೆಂಬುದನ್ನು ಮರೆಯಬಾರದು.

ಈ ಲೇಖನದಲ್ಲಿ ಬರುವ ಪರಿಭಾಷೆಯ ಇಂಗ್ಲಿಷ್ ಮೂಲ:

| | | |
|---|---|---|
| ಸಗಟುಧಾರಣೆಗಳ ಸೂಚೀಸಂಖ್ಯೆ | .... | Index Number of Wholesale Prices. |
| ಮೂಲಸಾಮಗ್ರಿಗಳು | .... | Raw Materials. |
| ಸಿದ್ಧವಾದ ಸಾಮಾನುಗಳು | .... | Manufactured articles. |

| | | |
|---|---|---|
| ಪ್ರಧಾನ ವಸ್ತುಗಳು | .... | Primary Commodities. |
| ಸ್ಟರ್ಲಿಂಗ್ ಠೇವಣಿ (ಹಣದ ಪತ್ರಗಳು) | .... | Sterling Security. |
| ರೂಪಾಯಿ ,, ,, | .... | Rupee ,, |
| ಖಜಾನೆ ಹುಂಡಿ | .... | Treasury Bill. |
| ಅಧಿಕಲಾಭದ ತೆರಿಗೆ | .... | Excess Profits Tax. |
| ವರಮಾನದ ತೆರಿಗೆ | .... | Income-Tax. |
| ಪಡಿಪದ್ಧತಿ | .... | Rationing. |
| ಬೆಲೆಗಟ್ಟು | .... | Price-Control. |
| ಮಾರುವೆ ಹುಂಡಿ | .... | Bill of Exchange. |

ಎ. ಎನ್. ಸುಬ್ರಹ್ಮಣ್ಯಂ.

---

ಈ ಲೇಖನ ಬರೆಯಲು ಪ್ರೊಫೇಸರ್ ವಿ. ಎಲ್. ಡಿಸೌಜಾ ಅವರಿಂದ ತುಂಬಾ ಸಹಾಯ ವಾಗಿದೆ.

# ಹುಸಿಮುನಿಸು

ಉಪ್ಪು ಕಾರ ತಿನ್ನುವ ಮೈಗೆ ಕಾಮ ಕ್ರೋಧಗಳು ತಪ್ಪಿದ್ದಲ್ಲ ಎನ್ನುವುದು ವಾಡಿಕೆಯ ಮಾತು. ಆದರೆ ಉಪ್ಪು ಕಾರ ಎರಡನ್ನೂ ಕಾಣದೆ ಕೇವಲ ಮೊಲೆ ಹಾಲನ್ನೇ ಕುಡಿಯುವ ಕಂದಮ್ಮನಿಗೂ ಕ್ರೋಧದ ಬಂಧುವಾದ ಕೋಪ ತಪ್ಪಿದ್ದಲ್ಲ. ಕಾಮ ತಪ್ಪಿದರೂ ತಪ್ಪಬಹುದು; ಕೋಪತಾಪಗಳು ತಪ್ಪುವುದು ಕಷ್ಟ. ಈ ಭೂಮಿಯ ಮೇಲೆ ಹುಟ್ಟುವುದೇ ತಡ,—ಇಲ್ಲಿನ ಸುಖದುಃಖಗಳೂ, ಕಷ್ಟನಷ್ಟಗಳೂ, ಕೋಪಕ್ರೋಧಗಳೂ, ವ್ಯಸನವ್ಯಾಕುಲಗಳೂ, ಚಿಂತೆಚಟಗಳೂ ಒಂದೆರಡು ದಿನ ಹಿಂಚೊ ಮುಂಚೊ ಹೊಂಚುಹಾಕಿ ತಮ್ಮ ಬಲೆಗೆ ಹಾಕಿಕೊಳ್ಳುತ್ತವೆ. ಆದರೆ ಇವೆಲ್ಲ ಬೇಡಬೇಡವೆಂದರೂ ತಂಡೋಪತಂಡವಾಗಿ ತಾವೇ ಬಂದು ಆವರಿಸಿಕೊಳ್ಳುವ ಸ್ವಭಾವವುಳ್ಳ ಕಷ್ಟಕಾರ್ಪಣ್ಯಗಳು.

ಹುಸಿಮುನಿಸು ಇಂಥಾದ್ದಲ್ಲ. ಅದರ ರಂಗೇ ಬೇರೆ, ರೀತಿಯೇ ಬೇರೆ. ಅದು ಹೆಸರಿಗೆ ಮಾತ್ರ ಮುನಿಸು; ಕೋಪದ ಕೊಸರು. ಅದನ್ನು ಅಗೆದು ನೋಡಿದರೆ ಅಥವಾ ಅದರ ಸತ್ವವೆಷ್ಟು ಸಾಮರ್ಥ್ಯವೆಷ್ಟು ಎನ್ನುವುದನ್ನು ಅಳೆದು ನೋಡಿದರೆ ಅಲ್ಲಿ ಕಾಣುವುದು ಮುನಿಸೂ ಅಲ್ಲ, ಮಂಕೂ ಅಲ್ಲ; ಕೋಪವೂ ಅಲ್ಲ, ತಾಪವೂ ಅಲ್ಲ; ಎಲ್ಲ ಬರಿ ಪೊಳ್ಳು, ಟೊಳ್ಳು. ಒಂದು ಮಾತಿನಲ್ಲಿ ಹೇಳುವುದಾದರೆ ಅದು ಆವಿಯಷ್ಟು ಹಗುರ; ಆವಿಯ ಕಣದಷ್ಟೇ ಅದರ ಬದುಕು ಕ್ಷಣಕಾಲ ಮಾತ್ರ. ಅದನ್ನು ನೋಡಿ ನಲಿಯುವುದಕ್ಕಿಂತ ಅನುಭವಿಸಿ ಆನಂದಪಡುವುದು ಮೇಲು. ಓದಿ ಆಮೋದಪಡುವುದೂ ಅಸಾಧ್ಯ; ಕೇಳಿ ಕೃತಾರ್ಥರಾಗುವುದಂತೂ ಸಲ್ಲದ ಮಾತು. ಎಲ್ಲರಲ್ಲೂ ಈ ಹುಸಿಮುನಿಸು ಉಂಟೆ? ಎಂಬ ಸಂಶಯ ಬರಬಹುದು. "ಉಂಟು. ಲವಲೇಶವೂ ಸಂಶಯ ಬೇಡ" ಎಂದೇ ನನ್ನ ನಿರ್ಧರವಾದ ಉತ್ತರ.

ಇನ್ನು ಹುಸಿಮುನಿಸಿನ ರೂಪರೇಖೆಗಳ ಬಗ್ಗೆ ನಾಲ್ಕು ಮಾತುಗಳು. ಅದು ಎಲ್ಲೆಡೆಯಲ್ಲೂ ದೊರಕುವ ಅಗ್ಗದ ಮಾಲಲ್ಲ. ಅದಕ್ಕೂ ಒಂದು ಎಡೆಯುಂಟು. ಸ್ವಾನುಭವದಿಂದ ಸವಿದು ಸಂತೋಷಪಡಬೇಕಾದರೆ ಎಲ್ಲರಿಗೂ ಒಂದು ನಿಯತವಾದ ವಯಸ್ಸುಂಟು. ಸಮಯ ಸಂದರ್ಭಗಳಂತೂ ಅತ್ಯಗತ್ಯ ಎಂದು ಬಿಚ್ಚಿ ಹೇಳಬೇಕಾಗಿಲ್ಲ. ವಯಸ್ಸಾದ ಗಂಡಹೆಂಡಿರ ನಡುವೆ ಅದರ ಸದ್ದು ಗದ್ದಲವೆಲ್ಲ—ಇದ್ದ ಪಕ್ಷದಲ್ಲಿ—ಅಡಗಿಹೋಗಿರುತ್ತದೆ. ತಂದೆತಾಯಿಗಳೊಂದಿಗೆ ಮಕ್ಕಳು

ಅಸಮಾಧಾನಗೊಂಡ ಸಮಯದಲ್ಲೂ ಅದು ಕಂಡುಬರುವುದು ದುರ್ಲಭ. ಅಣ್ಣ ತಮ್ಮಂದಿರ ಅಥವಾ ಅಕ್ಕತಂಗಿಯರ ಕದನಗಳ ಮಸೆದಾಟದಲ್ಲೂ ಅದನ್ನು ನೋಡ ಲಾರೆವು. ಸ್ನೇಹಿತರ ವಿರಸವಂತೂ ಅದನ್ನು ಹತ್ತಿರ ಸೇರಿಸದು. ಆದರೆ ಅದಕ್ಕೆ ಪ್ರತಿಯೊಬ್ಬರ ಜೀವಮಾನದಲ್ಲೂ ಒಂದು ಸಂದರ್ಭ ವಿಾಸಲು. ಅದೇ ಮಾವ-ಅಳಿಯರ ಸಂಟತಸ. ಮದುವೆಗೆ ಮೊದಲೆ ಹೆಣ್ಣು ಕೊಡುವ ಮಾವ ಬೇರೆ ಯಾವ ರೀತಿಯಿಂದ ಎಷ್ಟು ಆಪ್ತ ಬಂಧುವಾಗಿದ್ದರು ಕೂಡ ಮದುವೆಯಾದ ಮರುಕ್ಷಣ ದಲ್ಲಿ, ಇಲ್ಲವೇ ಮದುವೆಯು ಪೂತೆತ್ತಿದ ಮರುಕ್ಷಣದಿಂದ ಬಾಂಧವ್ಯದ ಬಣ್ಣ ಬದಲಾಗುತ್ತದೆ. ಮಾವನವರು ತೀರ ಹೊಸಬರಾದರಂತೂ ಹೇಳಲೇಬೇಕಾಗಿಲ್ಲ. ಮಾವನ ಮಗಳ ಕತ್ತಿಗೆ ತಾಳಿ ಕಟ್ಟಿದ ಮೇಲೆ ಮತ್ತೂ ಒಂದು ಕೈ ಮೇಲು.

ಮದುವೆಯ ಮಂಟಪದಲ್ಲಿಯೇ ಅಳಿಯ ತನ್ನ ಅಧಿಕಾರವನ್ನು ಚಲಾಯಿಸು ವುದಕ್ಕೆ ಹವಣಿಸುತ್ತಾನೆ. ಅದರಲ್ಲೂ ಮಾವ ಮೆತ್ತಗಿದ್ದರೆ ಸಾಕು, ಮೊಳಕೈಯಲ್ಲಿ ಗುದ್ದುವುದಕ್ಕೂ ಹೇಸುವುದಿಲ್ಲ. ಈ ಮಧ್ಯೆ ಅವನ ಪರವಾಗಿ ವಕಾಲತ್ತು ನಡೆಸುವ ಅವನ ಹಿತೈಷಿಗಳು ಎಂದು ಹೆಜ್ಜೆ ಹೆಜ್ಜೆಗೂ ಘಳಿಗೆ ಘಳಿಗೆಗೂ ಸಾರುವ ಬಂಧು ಬಳಗದವರ ಉಪದೇಶವೇನಾದರೂ ಆಗಿಬಿಟ್ಟರೆ, ಎಲ್ಲ ಉತ್ಕಟ ಸ್ಥಿತಿಯೇ, ಎಲ್ಲ ಉಲ್ಬಣ ಪರಿಣಾಮವೇ. ಕ್ಷಣಕ್ಷಣಕ್ಕೂ ಕುಂದುಕೊರತೆಗಳು ಕಣ್ಣು ಕುಕ್ಕುತ್ತವೆ. ನಿಮಿಷ ನಿಮಿಷಕ್ಕೂ ನಿರಾಶೆಯ ಪರಮಾವಧಿಯ ಚಿಹ್ನೆಗಳೇ. ಎದ್ದಲ್ಲಿ, ಕೂತಲ್ಲಿ, ನಿಂತಲ್ಲಿ, ನಡೆದಲ್ಲಿ ಎಲ್ಲ ಆಕ್ಷೇಪಣೆಗಳೇ. ವರದಕ್ಷಿಣೆಯ ಪ್ರಸ್ತಾಪ ಬಂದಾಗ ಇಡಿಯ ಪ್ರಪಂಚವೇ ಬದಲಾಗುವುದೇನೊ ಎಂಬ ಭಯಾನಕ ಸೂಚನೆಗಳಾಗುವು ದುಂಟು. ವಸ್ತ್ರೋಪಚಾರದ ವೇಳೆ ಬಂದಾಗ ಬಟ್ಟೆಬರೆಗಳ ರಂಗಿನ ಸೌಂದರ್ಯದಿಂದ ಮೊದಲಾಗಿ ಅವುಗಳ ಒಟ್ಟು ವೆಚ್ಚವೆಷ್ಟು ಎನ್ನುವ ತನಕ ವಾದವಿವಾದಗಳೆದ್ದು ರಗಳೆ ರಾದ್ಧಾಂತವಾಗುವುದುಂಟು. ಊಟ ಉಪಚಾರಗಳ ಗೊಡವೆ ಹೇಳಲೇ ಬೇಕಾಗಿಲ್ಲ. 'ಇತ್ತ ದರಿ, ಅತ್ತ ಪುಲಿ.' ಉಪ್ಪು ಮರೆತರೂ ಸಾಕು, ಒಂದು ಊರು ಹೋದಷ್ಟು ಹೊಡೆದಾಟವಾಗುತ್ತದೆ. ತುಪ್ಪ ತಪ್ಪಿದರಂತೂ ಊಹಿಸಿ ಹೇಳುವುದು ಅಶಕ್ಯ.

ಇಷ್ಟು ಅಳಿಯ ಮತ್ತು ಅವನ ಪರಿವಾರದವರ ಮಾತಾಯಿತು. ಇನ್ನು ಕುಲ ವಧುವಾಗುವವಳ ವಿಷಯ. ಆಕೆ ತಮ್ಮವಳಾಗುವ ಮೊದಲೆ, ಗಂಡಿನವರಿಗೆ ಆಕೆಯ ಎಲ್ಲ ವಿಷಯದಲ್ಲೂ ತಮಗೆ ಸಂಪೂರ್ಣವಾದ ಹಕ್ಕುಂಟು ಎಂಬ ಭ್ರಾಂತಿ ಬಲವಾಗಿ ಬೇರೂರುತ್ತದೆ. ಹುಡುಗನಿಗೆ ಹೊಳೆಯದ ಎಷ್ಟೋ ವಿಷಯಗಳು ಅವರಿಗೆ ಹೊಳೆದು ಆ ಬಗ್ಗೆ ದೀರ್ಘವಾದ ಚರ್ಚೆ ಆಗುತ್ತದೆ. ಮುಖ್ಯವಾಗಿ ಅವಳ ಮೇಲಿಟ್ಟಿರುವ

ಒಡವೆ ವಸ್ತುಗಳ ತನಿಖೆ. ಆ ಹೊತ್ತಿನಲ್ಲಿ, ಅದುವರೆಗೂ ಕಾಣದಿದ್ದ ಕಣ್ಣಿಗೆ ನೋಡುವ ಶಕ್ತಿ ಬರುತ್ತದೆ; ಕೇಳದ ಕಿವಿಗೆ ಕೇಳುವ ಶಕ್ತಿ ಬರುತ್ತದೆ; ಕುಂಟ ನಂಟನೂ ಬಂದು ತಂಟೆ ಮಾಡದೆ ಹೋಗುವುದಿಲ್ಲ. ಎಲ್ಲಾ ಸರಿಯೆ. ಹೆಣ್ಣಿನವರೇನಾದರೂ ಹುಡುಗಿಯ ಪರವಾಗಿ — ತಾವು ಸಾಕಿ ಸಲಹಿದ ಮಗಳ ಪರವಾಗಿ — ಮಾತೆತ್ತಿದರೆ ಪ್ರತಿ ಪಕ್ಷದವರ 'ಅನಿರ್ವಚನೀಯವಾದ' ಮೂಗಿನ ಮೇಲಿನ ಬೆರಳೇ ಸದುತ್ತರ. ತೊಂಡು ತೊಳಸಿಲ್ಲದೆ, ಸದ್ದು ಗದ್ದಲವಿಲ್ಲದೆ ಮದುವೆಯಾದರೆ ಅದು ಮದುವೆಯೇ ಅಲ್ಲ. ಕಲ್ಯಾಣವೆಂದರೆ ಕೂಗಿರಬೇಕು; ವಿವಾಹವೆಂದರೆ ವಾದ ವಿವಾದಗಳಿರಬೇಕು. ಈ ಗಜಿಬಿಜಿ, ಈ ಸೆಣಸಾಟದಲ್ಲಿ, ಈ ಮಾತು ಮಾತಿನ ಮಂಥನದಲ್ಲಿ ಹುಸಿಮುನಿಸು ಉದ್ಭವವಾಗುತ್ತದೆ ಎನ್ನಬಹುದು. ಅದರ ಪ್ರಭಾವ ಆಗ ಕೇವಲ ಮಿಂಚು ಹುಳುವಿನ ಬೆಳಕಂತೆ ಮಿಣುಕಿ ಮಿಣುಕಿ ಮಾಯವಾಗುವಂಥಾದ್ದು. ಅದರ ವಿಶ್ವರೂಪವನ್ನು ಕಾಣಬೇಕಾದರೆ ಮದುವೆ ಮುಗಿಯಬೇಕು; ಹಬ್ಬ ಹಾಡಿ ಮೊದಲಾಗಬೇಕು. ದಿನ ಕ್ರಮೇಣ 'ಜಾಮಾತಾ ದಶಮೋ ಗ್ರಹಃ" ಎಂಬ ಮಾತು ಮಾವನವರಿಗೆ ಮಂದಟ್ಟಾಗುತ್ತದೆ.

ಮದುವೆ ಮುಗಿಯಬಹುದು. ಅತ್ತೆ ಮಾವಂದಿರ ಮೇಲೆ ಬಂದ ಬೀಗರ ಮುನಿಸೂ ಆರಬಹುದು. ಅಳಿಯನ ಅಸಮಾಧಾನವೂ ಕೊನೆಗಾಣಬಹುದು. ಆದರೆ ಹೆಣ್ಣು ಕೊಟ್ಟವರಿಂದ ಪುನಃ ಪುನಃ ಪಡೆಯುವ ವಸೂಲಿ ಮಾತ್ರ ಮುಗಿಯುವುದಿಲ್ಲ. "ಕಳ್ಳನಿಗೊಬ್ಬ ಕುಳ್ಳ ಸಾಕ್ಷಿ' ಎಂಬಂತೆ ಈ ಉಪಾಯದ ಅಪಹಾರಕ್ಕೆ ಶಾಸ್ತ್ರ ಬೇರೆ ತಾಳ ಹಾಕುತ್ತದೆ. ಉಪಾಕರ್ಮ ಬಂದರೆ ಅದಕ್ಕೆ ಮೊಟ್ಟಮೊದಲಿನ ಪಟ್ಟಕಟ್ಟಿ ತಕ್ಕಮಟ್ಟಿನ ವಸೂಲಿ ಆಗುತ್ತದೆ. ಗಣಪತಿ ಹಬ್ಬ ಬಂತು. ಆಗೊಂದಿಷ್ಟು ರೊಕ್ಕ ಸಮೇತವಾಗಿ ಚೊಕ್ಕ ಬೆಳ್ಳಿ ಕೈಸೇರುತ್ತದೆ. ದೀಪಾವಳಿಗೆ ಮತ್ತೊಂದಿಷ್ಟು ಸುಲಿಗೆ. ಇದೆಲ್ಲ ಆಗುವ ವೇಳೆಗೆ ಶೋಭನ. ಮದುವೆ ಒಂದು ದೊಡ್ಡ ಹಬ್ಬವಾದರೆ ಇದು "ವರ್ಷದ ತೊಡಕು." ಅಂತೂ ಇಂತೂ ದಾನಧರ್ಮದ ಹೆಸರಿನಲ್ಲಿ, ಮಾನ ಮರ್ಯಾದೆಗಳ ಹೆಸರಿನಲ್ಲಿ ಸಾಧ್ಯವಾದಷ್ಟು ಸುಲಿಗೆ, ಕೈಯಲ್ಲಾದಷ್ಟು ಕೊಳ್ಳೆ ಆಗಬೇಕು. ಈ ಆಚಾರ ವಿಚಾರಗಳಲ್ಲಿ ತುಸು ತಪ್ಪಿದರೂ ಸಾಕು, ಅಳಿಯನ ಮುಖ ವಾದರೂ ಗಂಟಿಕ್ಕಬಹುದು; ಅವನ ಕಡೆಯವರ ಮೋರೆಯಾದರೂ ಮಾಸಲು ಮಾಸಲಾಗಬಹುದು. ಇಂಥ ಸಮಯಗಳಲ್ಲಿಯೇ ನಸುಮುನಿಸೂ ಹುಸಿಮುನಿಸೂ ಹುಟ್ಟಿಬಂದು ಆಕ್ಷೇಪಣೆಯ ಆಕಾರ ತಾಳಿ ಅದೃಶ್ಯವಾಗುತ್ತವೆ. ಇಲ್ಲಿನ ಹುಸಿಮುನಿಸು ಇನ್ನೂ ಹಸುಗೂಸು. ಅದರ ಪ್ರಾಬಲ್ಯವನ್ನು ಅದರ ಯೌವನದಲ್ಲಿ, ಅದರಲ್ಲೂ ಅಳಿಯನ ಹೃದಯದಲ್ಲಿಯೇ ಕಾಣಬೇಕು.

ಅಳಿಯಂದಿರಲ್ಲಿ ಮೂರು ಪಂಗಡ. ಅಳಿಯನು ಒಂದೇ ಊರಿನವನಾಗಬಹುದು. ಇಲ್ಲವೇ ಬೇರೆ ಊರಿನವನಾಗಬಹುದು. ಇವೆರಡಕ್ಕೂ ಹೊರತಾಗಿ ಅವನು ಮಾವನ ಮನೆಯಲ್ಲಿಯೇ ಬಿಡಾರಮಾಡುವ ಗೆಣೆಯನಾದರೂ ಆಗಬಹುದು. ಇದೇನೂ ನಿನ್ನೆ ಮೊನ್ನೆಯ ಪದ್ಧತಿಯೆಂದು ಭಾವಿಸಬಾರದು. ಪುರಂದರ ದಾಸರ ಕಾಲಕ್ಕೇ ಇದು ಹಳೆಯದಾಗಿತ್ತೆಂದು ತೋರುತ್ತದೆ. 'ಮಡದಿ ಹುಟ್ಟಿದ ಮನೆಯಲಿರುವಾತ ಮೂರ್ಖ' ಎಂದು ಅವರ ಬಾಯಿಂದ ಬರಬೇಕಾದರೆ ಅದು ಕವಿತೆಯ ಕಲ್ಪನೆಯಲ್ಲ; ಸೈಜವಾದ ಅನುಭವವೇ ಸರಿ. ಸೊಸೆ ಮಾವನ ಮನೆ ಸೇರುವುದರ ಮೊದಲೇ ಅಳಿಯ ಮಾವನ ಮನೆ ಸೇರುವ ವ್ಯತಿರಿಕ್ತ ಪರಿಸ್ಥಿತಿ ಒಂದಲ್ಲ ಒಂದು ಬಗೆಯಾಗಿ ಅಗತ್ಯ ಬಿದ್ದೊ, ಮೇಲು ಬಿದ್ದೊ ಬರುತ್ತದೆ. ಇಷ್ಟೆಲ್ಲವನ್ನು ಹಿನ್ನಲೆಯಾಗಿಟ್ಟು ಕೊಂಡು, ಈಗ ಹುಸಿಮುನಿಸು ಹೇಗೆ ಅಳಿಯನನ್ನು ಕಾಡಿಸಿ, ತನ್ನ ಸರದಿಯ ಮೇಲೆ ಅವನ ಅತ್ತೆ ಮಾವಂದಿರನ್ನು ಗೋಳು ಹೊಯ್ದುಕೊಳ್ಳುತ್ತದೆ ಎನ್ನುವುದನ್ನು ಕಾಣಬಹುದು. ಇದೊಂದು ಬಿಡಿಸಲಾರದ ಸಮಸ್ಯೆ; ಸಿಕ್ಕು ಸಿಕ್ಕಾದ ಗಂಟು. ಆದ್ದರಿಂದ ಮೇಲೆ ಸೂಚಿಸಿರುವ ಅಳಿಯಂದಿರ ಪರಿಸ್ಥಿತಿಯ ಒಂದೊಂದರಲ್ಲಿಯೂ ಕಂಡುಬರುವ ಇದರ ಚಿಹ್ನೆಯನ್ನು ಒಂದೋ ಎರಡೋ ಘಟನೆಗಳ ಆಧಾರದ ಮೇಲೆ ವಿಚಾರಮಾಡಬಹುದು.

ಒಂದೇ ಊರಿನ ಅಳಿಯನಾದರೆ ಅವನು ಪ್ರತ್ಯೇಕವಾಗಿ ಒಂದು ಕೊಟಡಿ ಯಲ್ಲಿರಬಹುದು; ಇಲ್ಲವೆ, ತಂದೆತಾಯಂದಿರ ಮನೆಯಲ್ಲಿಯೆ ಇರಬಹುದು. ಕೊಟಡಿ ಯಲ್ಲಿ ಇದ್ದದ್ದಾದರೆ ಬಲು ಸೊಗಸು. ಮದುವೆಯಾಗಿ ಒಂದು ವಾರವೊ, ಎರಡು ವಾರವೊ ಆಗಿರಬಹುದು: ಆಗಲೆ ಅಳಿಯದೇವರು ಮೊದಲುಬಾರಿ ಸಂಜೆಯಲ್ಲಿಯೊ, ತಪ್ಪಿದರೆ ಹವ ತಂಪಾಗಿದ್ದರೆ ಹಗಲಿನಲ್ಲಿಯೊ ಮಾವನ ಮನೆಗೆ ಬಿಜಯಮಾಡುವು ದುಂಟು. ಅವನು ಬರುವುದೇ ತಡ ಮನೆಮಂದಿಯೆಲ್ಲಾ ನಾಚಿ ಅಡಗುವರು. ಭಾವಮೈದುನದಿರೊ, ಮಾವನವರೊ ಮುತುವರ್ಜಿ ವಹಿಸಿ ಉಪಚಾರ ಮಾಡು ತ್ತಾರೆ. ಹಾಗೂ ಹೀಗೂ ದಾಕ್ಷಿಣ್ಯದ ಸೆರೆಯಲ್ಲಿ ಸಿಕ್ಕಿ ಅವರ ಉಪಚಾರವನ್ನೆಲ್ಲ ಸಹಿಸಿಕೊಂಡು ಆ ಬಾರಿ ಹಿಂದಿರುಗಬೇಕಾಗುತ್ತದೆ. ಹೊರಟುಹೋಗುವ ಆತುರದಲ್ಲಿ ಹೆಂಡತಿಯ ಮುಖ — ಮುಖವೇಕೆ ಕಣ್ಣಾದರೂ, ಓರೆಬಾಗಿಲಿನ ಕಡೆಯಿಂದಲೊ ಕಿಟಕಿಯ ಕಿಂಡಿಯಿಂದಲೊ ಕಂಡುಬಂದರೆ ಅಷ್ಟೇ ಅವನ ಪಾಲಿನ ಪುಣ್ಯ. ಎಷ್ಟೇ ತೃಪ್ತಿಯನ್ನು ನಟಿಸಿದರೂ ಅವನಲ್ಲಿ ಅತೃಪ್ತಿ ಇನ್ನೂ ಮಬ್ಬು ಮಬ್ಬಾಗಿರುತ್ತದೆ. ಹುಸಿ ಮುನಿಸು ಕೆರಳಿರುವುದಿಲ್ಲ; ಇನ್ನೂ ಅರಳಿರುವುದಿಲ್ಲ. ಮೊಗ್ಗು ಮೊಗ್ಗಾಗಿರು ತ್ತದೆ. ಅದಕ್ಕೆ ಇನ್ನೂ ತೀವ್ರತೆ ತೀಕ್ಷ್ಣತೆಗಳು ಬಂದಿರುವುದಿಲ್ಲ. ಆದ್ದರಿಂದ ಅದು

ಅವರಿವರ ಗಮನವನ್ನು ಎಳೆಯಲು ಅಶಕ್ತವಾಗಿರುತ್ತದೆ. ಕಡೆ ಕಡೆಗೆ ಅಳಿಯನಿಗೂ ಅದು ಮುನಿಸೆಂದು ಎನ್ನಿಸುವುದಿಲ್ಲ. ಅವನು ಕೊಟಡಿಯನ್ನು ತಲಪಿ ಸ್ವಲ್ಪ ಆಲೋಚನೆ ಮಾಡಲು ತೊಡಗಿದರೆ, ತನ್ನ ನಿರಾಶೆಗೆ ತಾನೇ ಸಮಾಧಾನ ಮಾಡಿಕೊಳ್ಳುತ್ತಾನೆ. 'ಪಾಪ. ಮಾವನವರಿಗೆ ಅಭಿಮಾನವಿಲ್ಲದೆ ಇಲ್ಲ. ನಾನಿನ್ನೂ ಹೊಸದು. ಹುಡುಗಿಗೆ ಬಹಳ ನಾಚಿಕೆ. ಅವಳಲ್ಲಿ ಏನೂ ತಪ್ಪಿಲ್ಲ' ಎಂದು ಅವನ ಮನಸ್ಸು ಅವನಿಗೇ ಬುದ್ಧಿ ಹೇಳುತ್ತದೆ. ಈ ತಾಳ್ಮೆ ಸಹನೆಗಳು ಎರಡನೆಯ ಬಾರಿ ದಯಮಾಡಿಸುವ ಹೊತ್ತಿಗೆ ಬಲುಮಟ್ಟಿಗೆ ಕಡಿಮೆಯಾಗಿರುತ್ತವೆ. ಮೂರು ನಾಲ್ಕನೆಯ ಬಾರಿಗಂತೂ ಹೇಳಲೇ ಬೇಕಾಗಿಲ್ಲ. ಈ ವೇಳೆಗಾಗಲೆ ಹಿರಿಯರು ಎನ್ನಿಸಿಕೊಂಡವರು ಅಳಿಯನ ಹೃದಯ ವನ್ನು ಅರಿತು ವರ್ತಿಸಿದರೆ ಮೇಲು. ಇಲ್ಲದಿದ್ದರೆ ಅಳಿಯನ ಮುಖ ಸಪ್ಪೆಯಾಗುವುದು ಹಾಗಿರಲಿ; ನೋಡಲು ಹೆದರಿಕೆಯೇ ಆಗುತ್ತದೆ. ಬಹಿರಂಗದಲ್ಲಿ ಬಣ್ಣ ಕಾಣದೆ ಹೋಗಬಹುದು. ಅಂತರಂಗವೆಲ್ಲ ತಕತಕನೆ ಕುದಿಯುವ ಮಲ್ಲಶಾಲೆಯಾಗಿರುತ್ತದೆ. ಜ್ವಾಲಾಮುಖಿ ಎಂದರೂ ಸಲ್ಲುತ್ತದೆ. ಹಾಗೂ, ಅರಿಯದೆಯೊ, ಅರಿತೂ ಅರತೂ ಶಾಸ್ತ್ರ ಶಾಸ್ತ್ರವೆಂದು ಬಾಯಿಬಿಡುತ್ತಲೊ ಹಿರಿಯರು ಅಳಿಯನಿಗೂ ಮಗಳಿಗೂ ಭೇಟಿಯಾಗುವುದಕ್ಕೆ ಅವಕಾಶಕೊಡದೆ ಹೋದರೆ ಪ್ರಮಾದವೇ ಆದೀತು. ಅಳಿ ಯನ ಅಸಹನೆ ಸಲಸಲಕ್ಕೂ ಹೆಚ್ಚು ಹೆಚ್ಚಾಗುತ್ತ ಹೋಗುತ್ತದೆ. ಅವನ ಮಾತು ಕತೆ ಹುಚ್ಚುಹುಚ್ಚಾಗುತ್ತದೆ. ನಗುಮುಖ ಗಂಟುಮುಖವಾಗುತ್ತದೆ. ಮಾವನ ಮನೆಯ ದಾರಿ ಮರೆಯದಿದ್ದರೂ ಅತ್ತ ಮುಖ ತಿರುಗಿಸಿ ನೋಡಲೂ ಮನಸ್ಸು ಬರುವುದಿಲ್ಲ. ಇಷ್ಟೇ ಅಲ್ಲ. ಅವನ ಮನಸ್ಸಿನಲ್ಲಿ 'ಥೀ! ಇವರೆಂಥಾ ಜನಗಳು. ನನ್ನ ಕೈ ಹಿಡಿದವಳೂ ಒಂದು ಮೃಗವೇ ಸರಿ. ಯಾರಿಗಾದರೂ ನನ್ನ ಸಂಕಟ ಗೊತ್ತಾಗ ಬಾರದೆ? ಎಲ್ಲ ಬಾಯಿಬಿಟ್ಟು ಹೇಳುವುದಕ್ಕಾದೀತೆ? ಏನಪ್ಪ, ಇವರು, ಇಪ್ಪತ್ತನೆಯ ಶತಮಾನದ ಜನಗಳೆ?' ಎಂದು ಚಿಂತಿಸಿ ಚಿಂತಿಸಿ ಕಡೆಗೆ ಆಕ್ರೋಶ ಬಂದಂತಾ ಗುವುದು. ಆದರೆ, ಇದು ನಿಜವಾಗಿ ಆಕ್ರೋಶವೂ ಅಲ್ಲ. ಆಟೋಪವೂ ಅಲ್ಲ. ದೈವ ವಶಾತ್, ಪುನಃ ಮಾವನ ಮನೆಯ ಕಡೆ ಹೋದಾಗ ಹೆಂಡತಿಯಾದವಳು ಬಾಗಿಲಿ ನಲ್ಲಿಯೇ ನಿಂತಿದ್ದು, ಯಜಮಾನರನ್ನು ಕಂಡಕೂಡಲೆ ಒಳಗೆ ಹೋದರೆ ಸಾಕು, ಅವನ ಆಕ್ರೋಶವೆಲ್ಲ ಅಲ್ಲಿಯೇ ಬಯಲಾಗುತ್ತದೆ. "ನಾನು ಅಂದು ಅಂದು ಕೊಂಡದ್ದು ಶುದ್ಧ ತಪ್ಪು. ಅವಳಿಗೆ ನಿಜವಾಗಿಯೂ ನನ್ನಲ್ಲಿ ಪ್ರೇಮವುಂಟು. ಇನ್ನೂ ನಾಚಿಕೆ. ಅಷ್ಟೆ. ಇಲ್ಲದೆ ಹೋದರೆ ನನ್ನನ್ನೇ ಎದುರುನೋಡುತ್ತಿದ್ದಳೆ?" ಎಂದು ಸಮಾಧಾನಮಾಡಿಕೊಳ್ಳುತ್ತಾನೆ. ಅಥವಾ ಅಂದೇ ಅವಳು ಅವನ ಊಟವಾದ ಮೇಲೆ, ಯಾರೂ ಇಲ್ಲದುದನ್ನು ನೋಡಿಕೊಂಡು, ಅಡಿಕೆ ಎಲೆಯನ್ನು ತಂದುಕೊಟ್ಟರೆ

ಅವನ ಬೆಟ್ಟದಷ್ಟು ಸಿಟ್ಟೆಲ್ಲಾ ಹಾರಿಹೋಗುತ್ತದೆ. ಅವಳು ಮಾತಾಡದೆ ಹೋದರೂ ಚಿಂತೆಯಿಲ್ಲ. ನನ್ನ ಹೆಂಡತಿಗೆ ನನ್ನ ಮೇಲೆ ದೇವರಾಣೆಗೂ ಅಭಿಮಾನವಿದೆ ಎಂದು ಮನಸ್ಸಿಗೆ ಸಮಾಧಾನ ಬರುತ್ತದೆ. ಇದಕ್ಕೇ ಹುಸಿಮುನಿಸು ಎನ್ನುವುದು. ಇದಾದ ಬಳಿಕ ಅಳಿಯನಿಗೆ ಪ್ರಿಯೆಯೊಂದಿಗೆ ಮಾತನಾಡಬೇಕೆಂಬ ಹುಚ್ಚು. ಅನಂತರ ಏಕಾಂತದ ಹುಚ್ಚು. ಹೀಗೆಯೇ ಕಾಲ ಕಳೆದಂತೆ ಹಿರಿಯರು ಒಂದೊಂದು ವ್ಯತ್ಯಾಸ ವನ್ನೂ ಗಮನಿಸಿ ಸೂಕ್ಷ್ಮ ತಿಳಿದು ಸುಮ್ಮನಾದರೆ ತೀರಿತು. ಇಲ್ಲವೇ, ಈ ಮುನಿಸು ಬೇಗ ಬರುತ್ತದೆ. ಅದಕ್ಕೆ ಬೇರಾವ ಮದ್ದೂ ಇಲ್ಲ: ಮನದನ್ನೆ ಮುಂದೆ ಬಂದರೆ ಮುಗಿಯಿತು ; ಮುಬ್ಬೆಲ್ಲ ಮಾಯವಾಗುತ್ತದೆ.

ಇನ್ನು, ಬೇರೆ ಊರಿನಲ್ಲಿರುವ ಅಳಿಯನ ವರ್ತನೆಯನ್ನು ಗಮನಿಸೋಣ. ಇಲ್ಲಿ ಪತ್ರ ಬರೆಯುವುದು ಮುಖ್ಯ ಸಾಧನ. ಮೊದಮೊದಲು ಪತ್ರವ್ಯವಹಾರ ಮಾವನಿಗೂ ಅಳಿಯನಿಗೂ ಆಗುವುದುಂಟು. ಅನಂತರ ಕಂಡೂ ಕಾಣದಂತೆ ಅಳಿಯನ ಲೇಖನಿ ಚಿತ್ತದ ಚಾಂಚಲ್ಯಕ್ಕೆ ಮಾರುಹೋಗಿ, ಪ್ರಿಯೆಯ ಕಡೆ ತಿರುಗುತ್ತದೆ. ಆ ಓಲೆಗಳಿಗೆ ಸಕಾಲದಲ್ಲಿ ಪ್ರತ್ಯುತ್ತರ ಬಂದರೆ ಅವನ ಮನಸ್ಸು ಸಮಾಧಾನವಾದೀತು. ಅನಂತರ ಪ್ರತ್ಯುತ್ತರ ಬಂದರೆ ಸಾಲದು ; ಸದುತ್ತರ ಬರಬೇಕು. ಇಲ್ಲಿ ಬರುವ ಟಪ್ಪಾಲು ಬರಿಯ ಪತ್ರವಲ್ಲ. ಪ್ರೇಮಿಗಳಿಬ್ಬರ ಹೃದಯಾಂತರಾಳದ ವಿವಿಧ ಭಾವನೆಗಳ ಪ್ರತಿಕೃತಿ. ಒಂದೊಂದು ಅಕ್ಷರಕ್ಕೂ ಜೀವವುಂಟು. ಒಂದೊಂದು ಮಾತಿಗೂ ಬೆಲೆಯುಂಟು. ಈ ಸಂದರ್ಭದಲ್ಲಿ ಯಾರೊಬ್ಬರು ಸ್ವಲ್ಪ ತಡಮಾಡಿದರೂ ಸರಿಯೆ, ಮೈಲುಗಳಾಚೆ ಇರುವ ಹೃದಯದ ತಳಮಳವನ್ನು ಭಗವಂತನೊಬ್ಬನೇ ಬಲ್ಲ. ಅಳಿಯನಿಗೂ ಮಾವ ನಿಗೂ ನೆಪಮಾತ್ರಕ್ಕೆ ತಿಂಗಳಿಗೊಮ್ಮೆಯೊ, ಎರಡು ತಿಂಗಳಿಗೆ ಒಮ್ಮೆಯೊ ಪತ್ರ ಬರುತ್ತದೆ. ಎಷ್ಟೋ ಸಾರಿ ಅದಕ್ಕೂ ಅಭಾವ ಬಂದು ಹೆಂಡತಿಯ ಕಾಗದದೊಂದಿಗೇ ಮಾವನವರಿಗೂ ಒಂದು ಚೀಟಿ ಬರುವುದುಂಟು. ಪ್ರೇಯಸಿಗಾದರೋ ಪ್ರತಿವಾರವೂ ಲಕ್ಕೋಟೆ ಬರುತ್ತದೆ. ಅದರ ಮೇಲೆ 'Strictly Confidential' (ಜೋಕೆ! ಗುಟ್ಟು!) ಎಂಬ ಹುಷಾರ್ ಬೇರೆ. ಈ ಅಳಿಯ ಊರಿಂದ ಊರಿಗೆ ದಯಮಾಡಿಸಿದಾಗ ಅವನ ಪಾಡು ಅಷ್ಟಿಷ್ಟಲ್ಲ. ಕಾಗದದಲ್ಲಿ ಪ್ರಿಯೆಯಾದವಳು ಎಷ್ಟೇ ನಿಸ್ಸಂಕೋಚದ ಪ್ರಕೃತಿ ಯವಳಾಗಿದ್ದರೂ, ತಂದೆತಾಯಿಯರು, ಒಡಹುಟ್ಟಿದವರ ಸಮ್ಮುಖದಲ್ಲಿ ಅಷ್ಟು ಸದರ ವಹಿಸಲು ಸಾಧ್ಯವಿಲ್ಲ. ಆಗ ಅಳಿಯನಿಗೆ ಕೋಪವೂ ಇಲ್ಲ; ಸಮಾಧಾನವೂ ಇಲ್ಲ. ಇಂಥ ಸಂದರ್ಭದಲ್ಲಿ ಅಳಿಯನಿಗೆ ಹೊಳೆಯುವ ಉಪಾಯ ಒಂದೇ ಒಂದು. ಪ್ರಿಯೆ ಯನ್ನು ಯಾವುದಾದರೂ ನೋಟಕ್ಕೆ ಕರೆಯುವುದು. ಇಲ್ಲವೆ ಸಂಜೆ ತಿರುಗಾಡಿಕೊಂಡು ಬರಲು ಕರೆಯುವುದು. ಈ ಅಭೀಷ್ಟಕ್ಕೆ ತಕ್ಷಣ ಸಮ್ಮತಿ ಬಂದರೆ ಅಳಿಯನಿಗೆ ಸ್ವರ್ಗ

ವೆನ್ನುವುದು ಬೇರೆ ಇಲ್ಲ ಎನ್ನಿಸಿ ಆನಂದವಾಗುತ್ತದೆ. ಹಿಂದು ಮುಂದೆ ಆಲೋಚನೆ ಮಾಡುತ್ತ ಕಾಲವಿಳಂಬವಾದರೆ ತಕ್ಷಣವೇ ಮುನಿಸು ಕಾದಿರುತ್ತದೆ. 'ನನ್ನ ಮೇಲಿಷ್ಟು ಗುಮಾನಿಯೆ? ನಾನೇನು ಅಧಮನೆ? ಅಯೋಗ್ಯನೆ? ಇಂಥ ಅವಮಾನ ನನ್ನ ಶತ್ರುಗಳಿಗೂ ಬೇಡ. ನಾಳೆಯೇ ನಾನು ಹೊರಡಬೇಕು. ಇಲ್ಲಿ ಇರುವುದೂ ಒಂದೆ, ಎಲ್ಲಿಯಾದರೂ ಕಾಡಿನಲ್ಲಿ ಇರುವುದೂ ಒಂದೆ' ಎನ್ನಿಸುತ್ತದೆ. ದೇವರ ದಯದಿಂದ ಹೆಂಡತಿಯೇನಾದರೂ ನಗುನಗುತ್ತ ತನ್ನ ಮುಂದೆ ಸುಳಿದು, ಸಮ್ಮತಿ ಸೂಚಿಸಿ, ಬಯಕೆ ನೆರವೇರಿಸಿದರೆ ಮುನಿಸು ಮಟ್ಟಮಾಯವಾಗುತ್ತದೆ. ಕಟ್ಟಿಟ್ಟಿದ್ದ ಹಾಸಿಗೆ ಗಂಟನ್ನು ಬಿಚ್ಚಿ, ಇನ್ನೂ ಒಂದೆರಡು ವಾರಗಳು ಅಲ್ಲಿಯೇ ಇದ್ದು ಹೋಗಬೇಕು ಎನ್ನಿಸುತ್ತದೆ. ಈ ಹೊತ್ತಿಗೆ ಅತ್ತೆ ಮಾವಂದಿರ ಸಲಹೆ ಬಂದರಂತೂ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆ.

ಇನ್ನು ಮಾವನ ಮನೆಯಲ್ಲಿಯೇ ಇರುವ ಅಳಿಯನ ಪಾಡು: ಇವನ ಸಂಕಟವೇ 'ಒಂದು ರೀತಿ. ಮೂಗು ನೋವೆಂದರೂ ಸಲ್ಲುವುದು. ಇವನಿಗೆ ಹಿಂದೆ ಹೇಳಿದ ಅಳಿಯಂದಿರ ಹಾಗೆ ಸಂಪೂರ್ಣ ಸ್ವಾತಂತ್ರ್ಯವಿರುವುದಿಲ್ಲ. ಅವರುಗಳಂತೆ ಇವನು ದಿನ ನೋಡಿಕೊಂಡು ಬರಬೇಕಾದ ಅಗತ್ಯವಿಲ್ಲ. ಅಂತೆಯೇ ಊರಿಂದ ಊರಿಗೆ ಪತ್ರ ಬರೆಯಬೇಕಾದ ಪ್ರಸಂಗವೂ ಇಲ್ಲ. ಅಳಿಯಂದಿರಿಗೆ ಈ ಪತ್ರ ಬರೆಯುವ ಆವಶ್ಯಕತೆ ತಪ್ಪಿದರೆ ಅರ್ಧ ಹೊರೆ ತಪ್ಪಿದಂತೆ. ಅಂಚೆವೆಚ್ಚದ ಮಾತು ಹೆಚ್ಚಲ್ಲ. ಆದರೆ ಪ್ರಣಯ ಪತ್ರವನ್ನು ಬರೆಯುವುದು ಸುಲಭಸಾಧ್ಯವಲ್ಲ. ಅದರಲ್ಲಿಯೂ ಮದುವೆಯಾದ ಅನಂತರದಲ್ಲಿ, ಸಂಸಾರದ ಕಾರ ಕ್ಷಾರಗಳೊಂದನ್ನೂ ಕಾಣದೆ ಇರುವಲ್ಲಿ, ಸಂಪೂರ್ಣವಾಗಿ ಪ್ರೇಮದ ಪ್ರಸಂಗವನ್ನೇ ಕುರಿತು ಸಂಪುಟಗಳಷ್ಟು ಬರೆಯಬೇಕಾದರೆ ಬಲು ಕಷ್ಟ. ಅದೊಂದು ಪ್ರಣಯ ಪರೀಕ್ಷೆ! ಮಾವನ ಮನೆಯ ಅಳಿಯನಿಗೆ ಇಂಥ ತಿಂಡಾಟವಿಲ್ಲ. ದಿನ ಬೆಳಗಾದರೆ ಒಂದಲ್ಲ ಒಂದು ರೀತಿಯಲ್ಲಿ ಹೆಂಡತಿಯ ಮುಖ ನೋಡಬಹುದು. ನಾಚಿಕೆ ಹೆಚ್ಚಾದ ಹೆಣ್ಣಾದರೆ ಹೊಂಚು ಹಾಕಿಯಾದರೂ ಕಂಡು ಕೃತಾರ್ಥನಾಗಬಹುದು. ಆದರೆ ಅವನಿಗೆ ಬರುವ ಕಷ್ಟವೆಂದರೆ ತಾನು ಹೆಂಡತಿಯನ್ನು ಕಂಡು ಹೇಗೆ ಮಾತನಾಡಿಸುವುದು ಎನ್ನುವ ಪ್ರಶ್ನೆ. ಚಪಲ ಚಿಟಿಕೆಹಾಕುತ್ತಿರುತ್ತದೆ. ಚಾಂಚಲ್ಯ ಚಟವಾಗಿ ಪರಿಣಮಿಸಿರುತ್ತದೆ. ಹೆಚ್ಚು ದುಡುಕುವ ಹಾಗಿಲ್ಲ. ಏನು ಮಾತು ಬರುತ್ತದೊ ಎಂಬ ಭಯ. ಇಲ್ಲದೆಹೋದರೆ ಹೃದಯಕ್ಕೆ ಹಿತವಿಲ್ಲ. ಅಂತು ಇಂತೂ, ಊಹಿಸಲಾರದ ಉಭಯಸಂಕಟ. ಆದರೆ ಈ ಅಳಿಯನಿಗೆ ಮತ್ತೊಂದು ಸುಕೃತವುಂಟು. ಎಂಥವನಿಗಾದರೂ ಮದುವೆಯಾದ ಹೊಸತರಲ್ಲಿ ಅಡಿಕೆ ಎಲೆಯ ರುಚಿ ಹೆಚ್ಚು, ಸ್ವಾರಸ್ಯ ಹೆಚ್ಚು. ಅವನು ಎಷ್ಟೇ ಮಂಕ

ನಾದರೂ ಆಗ ರಸಿಕಚಕ್ರಿಯಾಗುತ್ತಾನೆ. ಮಾವನ ಮನೆಯ ಅಳಿಯನಿಗೆ ಹೆಂಡತಿಯ ಕೈಯಿಂದ ಮಡಿಸಲ್ಪಟ್ಟ ಅಡಿಕೆ ಎಲೆ ನಿತ್ಯವೂ ಬರುತ್ತದೆ. ಒಮ್ಮೊಮ್ಮೆ ಬಂದ ಹೊಸತರಲ್ಲಿ ಅದನ್ನೇ ನೋಡುತ್ತ ಬಗೆದೂರ ಸಾಗಿ ತಿನ್ನುವುದನ್ನೇ ಮರೆಯುವ ಪ್ರಸಂಗ ಬಂದರೂ ಬರಬಹುದು. ಆಮೇಲೆ ಅವರಿವರು ತಂದ ಅಡಿಕೆ ಎಲೆ ಅಷ್ಟು ರುಚಿಸುವುದಿಲ್ಲ. ಅವಳೇ ತಂದು ಕೊಡಬಾರದೆ ಎನ್ನಿಸುತ್ತದೆ. ಹುಡುಗಿ ನಾಚಿಕೆಯಿಂದ ಹಿಂದೆಗೆಯಬಹುದು. ಆದರೆ ಅದು ಅಳಿಯನಿಗೆ ಸರಿಬೀಳುವುದಿಲ್ಲ. ಆಶಾಭಂಗವಾದರೆ ಸಹಿಸಲಸದಳವಾದ ಸಂಕಟವಾಗುತ್ತದೆ. ಏನೇನೊ ನಿರ್ಧರಮಾಡಿಕೊಳ್ಳುತ್ತಾನೆ. ತನ್ನಲ್ಲಿಯೇ ಉರಿದು ಉರಿದು ಬೀಳುತ್ತಾನೆ. ಕಡೆಗೆ ತನ್ನ ಆಕಾಂಕ್ಷೆಯನ್ನು ಹೇಳಿ ಬಿಡೋಣವೆ ಎನ್ನಿಸುತ್ತದೆ. ನಾಲಿಗೆಯ ತುದಿಯವರೆಗೂ ಮಾತು ಬರುತ್ತದೆ. ಮರು ಕ್ಷಣದಲ್ಲಿಯೇ ನಾಚಿಕೆಯುಂಟಾಗಿ ಮರೆಮಾಚುವನು. 'ಹಾಳು ನಾಚಿಕೆ ಯಾಕೆ ಹುಟ್ಟಿಬಂತೋ ನನ್ನ ಗೋಳು ಹೊಯ್ದುಕೊಳ್ಳುವುದಕ್ಕೆ' ಎಂದು ಪೇಚಾಡಿಕೊಳ್ಳು ವನು. ಇಷ್ಟಾದರೂ ಬಯಕೆ ಫಲಿಸದಿದ್ದರೆ ಅಡಿಕೆ ಎಲೆಯ ತಟ್ಟೆಯ ಕಡೆ ದೃಷ್ಟಿಬೀಳದೆ ಹೋಗಬಹುದು. ದೈವವಶಾತ್ ಮಾರನೆಯ ದಿನ ಹೆಂಡತಿಯೇ ನೇರವಾಗಿ ಬಂದು ಅಡಿಕೆ ಎಲೆಯನ್ನು ತಂದುಕೊಟ್ಟರೆ ಹಿಂದಿನ ದಿನದ ಮುನಿಸೆಲ್ಲ ಗುರುತಿಲ್ಲದ ಹಾಗೆ ಹೊರಟುಹೋಗುವುದು. ಅಂದು ಎಲ್ಲೂ ಇಲ್ಲದ ವಿನಯ, ವಿಶ್ವಾಸ ಕೂಡಿಬರುತ್ತವೆ. ಅವರಿವರೊಡನೆ ಮಾತು ಕತೆಯೇನು! ತುಂಬಿದ ಹೊಳೆಯಂತೆ ಹರಟೆಯೇನು! ಮಿತಿಯಿಲ್ಲ; ಮೇರೆಯಿಲ್ಲ. ಮನಸ್ಸು ಮಕರಂದವಾಗುತ್ತದೆ. ಬಾಳು ಬೆಲ್ಲವಾಗುತ್ತದೆ. ಈ ಆಶೆ ಪೂರೈಸುವ ವೇಳೆಗೆ ಬೇರೊಂದು ಬಯಕೆ ಬಲಿಯುತ್ತದೆ. ಗಂಟೆಗಳ ಕಾಲ ವಲ್ಲದಿದ್ದರೂ ಹಲವು ನಿಮಿಷಗಳಾದರೂ ತಾನೂ ನಲ್ಲೆಯೂ ಕೂತುಕೊಂಡು ಹರಟಬೇಕೆಂಬ ಚಪಲ. ಊರಿಂದ ಊರಿಗೆ ಬಂದ ಅಳಿಯನಿಗೆ ಇದರ ಸೌಲಭ್ಯ ವುಂಟು. ಒಂದೇ ಊರಿನಲ್ಲಿದ್ದು ದಿನಬಿಟ್ಟು ದಿನ ಬರುವ ಅಳಿಯನಿಗೂ ಇದಕ್ಕೆ ಅವಕಾಶವುಂಟು. ದಿನವೆಲ್ಲಾ, ವರ್ಷವೆಲ್ಲಾ ಮಾವನ ಮನೆಯಲ್ಲಿಯೇ ಇರು ವವನಿಗೆ ಈ ಬಗೆಯಾದ ಏಕಾಂತಕ್ಕೆ ಹಕ್ಕುಂಟೆ ಇಲ್ಲವೆ ಎಂಬ ಪ್ರಶ್ನೆ ದೊಡ್ಡದು. ಅಳಿಯನಿಗೂ ಆತಂಕ; ಮಗಳಿಗೂ ಆತಂಕ. ಸಮಯಕಾಯಬೇಕು; ಗ್ರಹಬಲ ಕೂಡಿಬರಬೇಕು. ಬಯಕೆ ನೆರವೇರಿಯೂ ನೆರವೇರದಂತಿರಬೇಕು. ಇನ್ನೂ ಒಂದು ಸ್ವಾರಸ್ಯವಾದ ಸಂಗತಿ — ಮಾವನ ಮನೆಯ ಅಳಿಯನ ಹುಸಿಮುನಿಸು ಬರುವುದು ಬೇಗ; ಹೋಗುವುದೂ ಬೇಗ. ಯಾವುದಾದರೂ ಒಂದು ಕಾರಣಕ್ಕಾಗಿ ಮುನಿಸು ಬಂತೆಂದು ಇಟ್ಟುಕೊಳ್ಳೋಣ. ಕೂಡಲೆ ಅವನ ಮನಸ್ಸೆಲ್ಲ ಬಟ್ಟಬಯಲಾಗುವುದು. ಮಾತೂ ಬೇಕಿಲ್ಲ; ಕತೆಯೂ ಬೇಕಿಲ್ಲ. ತುಂಬಿದ ಮನೆ ಶೂನ್ಯ; ನಂಬಿದ ನಂಟರೂ

ಕೋಟಲೆ. ಕಡೆ ಕಡೆಗೆ ಆ ಮುನಿಸೆಲ್ಲಾ ಊಟದ ಮೇಲೆ ಹೋಗುತ್ತದೆ. ತಿಂಡಿ ಬೇಡ; ತೀರ್ಥಬೇಡ. ಊಟಬೇಡ; ಉಪಚಾರಬೇಡ. ಎಲ್ಲವನ್ನೂ ನಿರಾಕರಿಸಿ ನಿರಾಶೆಯ ನೋವನ್ನು ಸಹಿಸಲಾರದೆ ಸಂಕಟಪಡುತ್ತಾನೆ. ಅಳಿಯ ಜಾಣನಾದರೆ ತನ್ನ ನಿರಾಕರಣೆಗೆ ದೇಹಾಲಸ್ಯದ ಸೋಗನ್ನು ಗಂಟು 'ಹಾಕುವುದುಂಟು. ಈ ಅನಂತ ಶೂನ್ಯತೆ ಮಾಯವಾಗಬೇಕಾದರೆ ಹೆಂಡತಿಯಿಂದಲ್ಲದೆ ಬೇರೆ ಯಾರಿಂದಲೂ ಸಾಧ್ಯವಿಲ್ಲ. ಹೆಂಡತಿಯ ಉಪಚಾರವಾಗುವುದೇ ತಡ, ಅದರ ಸೋಂಕೂ ಇರುವುದಿಲ್ಲ. 'ತಾನು ಸರ್ವಾಪರಾಧಿ. ಎಂಥ ತಪ್ಪುಮಾಡಿದೆ' ಎಂಬ ಪಶ್ಚಾತ್ತಾಪದ ಬುದ್ಧಿ ಬರುತ್ತದೆ. ಬೇರೆಯವರ ಮುಂದೆ ಹೇಳುವುದಕ್ಕೆ ಹಿಂದೆಗೆದರೂ ಹೆಂಡತಿಯೊಡನೆ ತನ್ನ ದುಃಖವನ್ನೆಲ್ಲ ತೋಡಿಕೊಂಡು ಸಮಾಧಾನ ಮಾಡಿಕೊಳ್ಳುತ್ತಾನೆ. ನಲ್ಲೆಯ ಪ್ರಫುಲ್ಲವದನದ ಎದುರು ಮುನಿಸು ಹುಸಿಯಾಗುತ್ತದೆ.

ಹೀಗೆ ಹುಸಿಮುನಿಸು ಅಳಿಯನ ಹೃದಯದಲ್ಲಿ ಒಂದಲ್ಲ ಒಂದು ಬಗೆಯಾಗಿ ತನ್ನ ಅಧಿಕಾರವನ್ನು ಚಲಾಯಿಸುತ್ತದೆ. ಇದು ಜೀವಾವಧಿ ಇರತಕ್ಕದ್ದಲ್ಲ. ಮದುವೆ ಮುಗಿದಿರಬೇಕು; ಒಸಗೆ ಇನ್ನೂ ಆಗದಿರಬೇಕು. ಈ ಅಂತರದಲ್ಲಿ ಇದರ ಪ್ರಭಾವವೇ ಪ್ರಭಾವ; ಬಿರುಸೇ ಬಿರುಸು. ಇದು ಸರ್ವಥಾ ಹಾನಿಕಾರಿಯಲ್ಲ; ಅನರ್ಥಸಾಧನವೂ ಅಲ್ಲ. ಕೇವಲ ಅಹಿತಕಾರಿ. ಅಷ್ಟೇ. ಇದಕ್ಕೆ ಬೆಲೆಯಿಲ್ಲ; ನೆಲೆಯಿಲ್ಲ. ನೋವಿಲ್ಲ; ಕಾವಿಲ್ಲ.

ಲೋಕದ ರೀತಿ ನೀತಿಗಳಾಗಲಿ, ಹಿರಿಯರ ನೇಮ ನಿಯಮಗಳಾಗಲಿ, ನೂತನ ವಧೂವರರ ಸುಖಸಂತೋಷಗಳ ನಡುವೆ ತಲೆಹಾಕಿಕೊಂಡು ಬಂದರೆ ಹುಸಿಮುನಿಸು ಬಲುಬೇಗ ಕೆರಳುತ್ತದೆ. ಕೈ ಹಿಡಿದ ತರಳೆಯ ಸುಳಿವಾಗಲಿ, ಆಕೆಯ ನಾಲ್ಕು ಲಲ್ಲೆವಾತುಗಳಾಗಲಿ, ಲಭಿಸಿದ ಕೂಡಲೆ ಹಿಮಾಲಯದಷ್ಟು ಬೃಹತ್ತರವಾಗಿದ್ದರೂ ಸೂರ್ಯನ ಎದುರಲ್ಲಿ ಕರಗಿ ನೀರಾಗುವ ಮಂಜಿನಂತೆ ತಕ್ಷಣವೇ ಉಪಶಮನವಾಗುತ್ತದೆ.

ಹುಸಿಮುನಿಸಿಲ್ಲದ ಅಳಿಯನಿಲ್ಲ. ನಸುನಾಚಿಕೆಯಿಲ್ಲದ ಹೆಣ್ಣಿಲ್ಲ. ಚಪಲವಿಲ್ಲದ ಹರೆಯವಿಲ್ಲ.

ಜಿ. ವರದರಾಜರಾವ್.

---

## ಒಲಿದಿಹೆನಾ ಬೆಳುದಿಂಗಳಿಗೆ

ಒಲಿದಿಹೆನಾ ಬೆಳುದಿಂಗಳಿಗೆ
ಮಂಗಳವಾಯ್ತಿಹ ಕಂಗಳಿಗೆ.

ಮಲಗಿಹ ಸೂರ್ಯನ ಸವಿಗನಸು,
ಇದು ಕಾರಿರುಳಿನ ಸಲ್‌ಮನಸು,
ಬಿಸಿಯೇ ಇಲ್ಲದ ಈ ಬೆಳಕು
ಗರಳಕೊರಳನಾವನ ತಳಕು ?

ಜಗವನು ತೋರುವ ಸೋಗಿದಕೆ
ಏನನೆಂಬೆನೀ ಸೋಜಿಗಕೆ !
ಎಳೆಯರ ಮಾತೊಳು ತಿಳಿವೆನಿತು
ಇದಕೂ ತೋರುವ ಗುಣವನಿತು.

ಚೆಂದಕ್ಕಿ ಮಾಮನ ತನಿಬೆಳಕೆ,
ಬಾ ಬೆಳುದಿಂಗಳೆ ಅಂಗಳಕೆ.
ನೀ ಬೆಳಗುವುದೇ ಬಲುಚೆಂದ
ನೀನಿಹುದೇ ನಮಗಾನಂದ.

ಪಿಸುಮಾತೊಳು ತಿರೆಗೇನೊರೆವೆ !
"ಅಮ್ಮಯ್ಯ, ನೀ ಬಲು ಚೆಲುವೆ."
"ಕೇಳುವರೇನೆಂಬರು, ಸದ್ದು !"
ನಿಮ್ಮಾ ಮಾತಿದು ಬಲುಮುದ್ದು.

ಬೆಳುದಿಂಗಳೆ ನೀ ಕಲೆಗಾರ,
ನೀ ತರುವೀ ಭ್ರಮೆ ಸುಕುಮಾರ,
ಬೆಣ್ಣೆಗಿಂತ ಮೆದುವಿದಿರ ಮಲೆ
ನಾಗಲೋಕದಂತಾಯಿತಿಳೆ.

ಮಿಂಚುವುದೆಂತಹ ಈ ಬಳ್ಳಿ
ಕಲ್ಪಲತೆಯನೇ ಹಿಂತಳ್ಳಿ !

ನಿತ್ಯದರೂಢಿಯ ಮನೆಯ ಸತಿ
ಎಂತು ಕಾಂಬಳಿಂದೆಮಗೆ ರತಿ !

ಬೆಳುದಿಂಗಳೆ, ದೇವರ ವರವೆ,
ನೀ ತರುವೀ ಸೊಗಕೇನೊರೆವೆ ?
ನೀ ಮದ್ದೆಲ್ಲರ ಬೇಸರಕೆ
ಕೊಳ್ಳಣ್ಣಾ ಈ ಸುಡಿಹರಕೆ.

ಪು.ತಿ.ನ.

## ನಾಕ - ನರಕ

ಅವಳು ನಾಕ; ಅವಳು ನರಕ;
ನಾಕ
ಜತೆಯೊಳಿದ್ದರೆ !
ನರಕ
ದೂರಹೋದರೆ !

ಕುವೆಂಪು.

# ಈಶ್ವರ ವಚನಗಳು

೧. ತಾಯ ತೋಳಸಗಲಿದ ಕೂಸು ಹರಿದು ಬಂದ ಹಾವ ಹಿಡಿಯುವಂತೆ ನಿನ್ನ ಸ್ಮರಣೆಯಿಂದ ದೂರನಾದ ನಾನು ಪರಾರ್ಥಕ್ಕೆ ಮನಸ್ಸು ಮಾಡಿದೆನಯ್ಯ. ಧನದ ಮದದಿಂದ ಕೊಬ್ಬಿ ಮಲೆತ ಸಿರಿವಂತನೊಬ್ಬ ಹೊಟ್ಟೆಗಿಲ್ಲದೆ ಗೋಳಿಡುವ ದೀನರನ್ನು ಕಡೆಗಣಿಸಿ ನೋಡುವಂತೆ ಭೋಗಸಂಕುಲಕ್ಕೆ ಮಾರುಹೋದ ನಾನು ನಿನ್ನ ಮರೆತುಬಿಟ್ಟೆನಯ್ಯ. ತನ್ನ ಸೆರೆಜೌವನದ ರೂಪಿಂಗೆ ತಾನೆ ಸಂತಸಗೊಂಡು ಅಖಿಲಬ್ರಹ್ಮಾಂಡವನ್ನೆ ತಬ್ಬಿ ನಲಿಯುವ ಹೆಣ್ಣಿನಂತೆ ಧರೆಯ ಸುಖಕ್ಕೆ ತಲೆಗೊಟ್ಟ ನಾನು ಮಾಡಬಾರದ ಕಾರ್ಯವನ್ನ ಮಾಡಿ ಪಾಪಕ್ಕೆ ಎರವಾದೆನಯ್ಯ. ಮಗು ಕುರುಡೆಂದು ತಾಯಿ ದೂರುವಳೆ? ಹುಟ್ಟಿದುದು ಹೆಣ್ಣೆಂದು ತಂದೆ ನೋಯುವನೆ? ಎನ್ನೊಡೆಯ, ನೀನೆ ಹೇಳು. ತಾಯಾಗಿ ಬೆಳಸಿ ತಂದೆಯಾಗಿ ಕಾಪಾಡಿ ಮಾನವ ನನ್ನಾಗಿ ಮಾಡಿದೆಯಯ್ಯ ನೀನು. ನೀನಲ್ಲದಿನ್ನಾರು ಎನಗೆ! ಲೋಕದಾಟಕ್ಕೆ ಬೆದರಿ ಪಶ್ಚಾತ್ತಾಪಗೊಂಡು ನಿನ್ನ ಮರೆಬಂದಿಹೆನಯ್ಯ. ಒಲಿದು ಕಾಪಾಡು ಎನ್ನೊಡೆಯ, ಕಪ್ಪಡಿ ಸಂಗಮದೇವ!

೨. ತವರೂರಿನಿಂದ ಓಡಿ ಬರುವ ತಾಯಮೊಗವ ನೋಡಿ ಸಾಯ್ವೆನೆಂದು ಕಣ್ಣಿನಲ್ಲಿ ಜೀವಹಿಡಿದು ನಿಂತಮಗಳು, ತಾಯಿ ಊರ ಅಗಸೆಯನ್ನು ಬಂದು ಸೇರುವ ಮುನ್ನವೆ ಜಡದೇಹವನ್ನು ತ್ಯಜಿಸುವಂತೆ ನಿನ್ನ ಬರವಿಗಾಗಿ ನೆತ್ತಿಯಲ್ಲಿ ಉಸಿರು ಹಿಡಿದು ನಿಂತಿದ್ದೇನೆ. ಊರ ಅಗಸೆಯಲ್ಲಿದ್ದರೆ ಓಡಿಬರಬಾರದೆ? ಮನೆಯ ಬಾಗಿಲ ಬಳಿ ಬಂದಿದ್ದರೆ ಓ ಎನ್ನಬಾರದೆ ಅಯ್ಯ? ಎನ್ನೊಡೆಯ, ಕಪ್ಪಡಿ ಸಂಗಮ ದೇವ, ನೀನು ಬಾರದೆ ಇದ್ದರೆ ಎನ್ನಗತಿ ಅಗ್ನಿಗೆ ಆಹುತಿಯಾದ ಕರ್ಪೂರದಂತೆ.

೩. ಹರಿವ ನೀರಿನಂತೆ, ಬೀಸುವ ಮಂದಾನಿಲದಂತೆ ಅಯ್ಯ, ಎನ್ನ ಚಂಚಲ ಮನವು ನಿಂದಲ್ಲಿ ನಿಲ್ಲದು. ನಿನ್ನ ನಾಮದಲ್ಲಿ ಮನವನಿಟ್ಟು ಧ್ಯಾನಗೈಯುತಿರಲು ಸಮಯ ಸಾಧಿಸಿ ಪಂಚೇಂದ್ರಿಯಗಳೆನ್ನ ಸಿಕ್ಕಕಡೆಗೆ ಜಗ್ಗಿ ಗಾಸಿಗೊಳಿಸುತ್ತಿವೆ. ಬಂದು ಕಾಪಾಡಬಾರದೆ ಅಯ್ಯ ನಿನ್ನ ಮರೆಹೊಕ್ಕಿದೇನೆ. ಒಡೆಯ ಎಂದು ಕೂಗುತ್ತಿದೇನೆ; ಓಡಿ ಬಂದು ಎತ್ತಿಕೊಳ್ಳಬಾರದೆ, ಕಪ್ಪಡಿ ಸಂಗಮದೇವ.

೪. ಎನ್ನ ಜರೆದು ನುಡಿಯುವವರು ನುಡಿಯಲಿ ಅಯ್ಯ! ನಾನು ಮಾತ್ರ ಬಾಯಿ ಬಿಚ್ಚಲಾರೆ. ವಿಷವ ನುಂಗಿದ ನೀನೆ ಮಂದಹಾಸಂಗೈಯುತಿರಲು ಅನ್ಯರ

ದೂಷಿತಕ್ಕೆ ನಾನು ಬೆದರಲೇಕೆ ಅಯ್ಯ! ಗಾಣಕ್ಕೆ ತುತ್ತಾದ ಕಬ್ಬು ಸವಿರಸವ ಸುರಿಸುವಂತೆ ಹೆರವರ ಕೀಳ್ನುಡಿಗೆ ಎರವಾದ ನಾನು ಪರಿಶುದ್ಧಗೊಳ್ಳುವೆನಯ್ಯ. ಚಿತ್ತಶುದ್ಧಿಯಾಗಿ ಬಂದ ಎನ್ನ ಅಪ್ಪಿಕೊಳ್ಳಲಾರೆಯಾ, ಎನ್ನೊಡೆಯ ಕಪ್ಪಡಿ ಸಂಗಮದೇವ!

೫. ಮನೆಯ ಮಕ್ಕಳಿಗೆ ತೊಡಲು ಬಟ್ಟೆಯಿಲ್ಲ; ಉಣಲು ಅನ್ನವಿಲ್ಲ. ಇಂತಿದನು ನೋಡಿ ಮನೆಯ ಒಡೆಯ ನೀನೆ ಮೌನಗೊಂಡಿರುವಾಗ ನಾನೇಕೆ ಕಳವಳಗೊಳ್ಳಲಯ್ಯ? ಬಡತನದ ಹೊಯ್ಲಿನಿಂದ ಹತವಾದ ಮಕ್ಕಳ ಅಸ್ತಿಪಂಜರಗಳನ್ನು ನೋಡುವಲ್ಲಿ ತಂದೆಗೆ ಆನಂದಾಭಿವೃದ್ಧಿಯಾಗುತಿದ್ದರೆ ಮಕ್ಕಳೇನು ಮಾಡಬಲ್ಲುವು! ಬಾಸು ಹರಿದು ಬಿದ್ದರೆ, ಸುಂಗಲೆಂದು ಜಗವು ಬಾಯಿ ತೆರೆದರೆ ಯಾರು ಏನು ಮಾಡಬಲ್ಲರು! ಜಗದೊಡೆಯ ಕಪ್ಪಡಿ ಸಂಗಮದೇವ, ನಿನ್ನ ಸಂಕಲ್ಪಗಳಿಗೆ ತಲೆಕೊಟ್ಟು ನಿಲ್ಲುವುದೊಂದೆ ಎಮ್ಮ ಕರ್ತವ್ಯವಯ್ಯ!

೬. ಮೂಡಲ ದಿಗಂತದಲ್ಲಿ ಉದಯವಾಗುವ ಕಿತ್ತಿಳೆವರ್ಣದ ಚಂದ್ರ ಕತ್ತಲೆಯ ಮೊತ್ತವನ್ನು ಹೊಡೆದೋಡಿಸಿ ಬಾನಿಗೇರಿಬಂದು ತನ್ನ ಜೊನ್ನನಗೆಯ ಬೀರಿ ಜಗದ ಮಕ್ಕಳನ್ನು ನಲಿಸುವಂತೆ ಎನ್ನ ಹುಟ್ಟಿನೊಡನೆ ಬಂದ ಕ್ರೋಧಗುಣವನ್ನು ತೊಡೆದು ಹಾಕಿ ಮನವ ನಿರ್ಮಲಗೊಳಿಸಯ್ಯ ತಂದೆ! ಎನ್ನ ಕೂಗ ನೀನು ಮನ್ನಿಸದಿದ್ದ ಪಕ್ಷದಲ್ಲಿ ಲೋಕವ್ಯವಹಾರದಿಂದ ಬೇರೆಯಾದರೂ ಮಾಡು ಎನ್ನೊಡೆಯ ಕಪ್ಪಡಿ ಸಂಗಮದೇವ! ಹುಳುಹತ್ತಿದ ಹೂವಿನಂತೆ ಇಲ್ಲಿ ಕೊರಗಿ ನಶಿಸುವುದಕ್ಕಿಂತ ನಿನ್ನ ಪಾದಕಮಲದಲ್ಲಿ ಎನ್ನ ಮನವು ಮುಡಿಪಾದರೆ ಬಾಳು ಪಾವನವೆಂಬೆನಯ್ಯ ಕಪ್ಪಡಿ ಸಂಗಮದೇವ!

೭. ಕಾಸಾರದೊಳಗಿನ ಸರೋಜದಂತೆ, ವನದೊಳಗಿನ ಕುಸುಮದಂತೆ, ನೀರಿನೊಳಗಿನ ಹಾವಸೆಯಂತೆ ಈ ಪ್ರಪಂಚದಲ್ಲಿ ಎನ್ನ ನಿರಿಸಯ್ಯ ತಂದೆ! ಮನೆ ನನ್ನದೆಂಬ ಆಸೆಬೇಡ. ಮಕ್ಕಳು ನನಗೆ ಎಂಬ ಬಯಕೆಬೇಡ. ಹೊನ್ನು ನನಗಾಗಿ ಎಂಬ ಆತುರತೆಬೇಡ. ಸಕಲ ಪ್ರಪಂಚಕ್ಕೆ ಆದಿಭೂತನಾದ ನೀನೆ ಎನ್ನವನಾಗಿರುವಾಗ ಈ ಲೋಕದ ಹಂಗು ಎನಗೇಕೆ ಎನ್ನೊಡೆಯ ಕಪ್ಪಡಿ ಸಂಗಮದೇವ!

ಕೆ. ಈಶ್ವರ.

---

# ಶೈಲಿ ಮತ್ತು ವಾಕ್ಯಪ್ರಮಾಣ

[*Biometrica*, Vol. 30, 1938. P. 364 ರಲ್ಲಿರುವ Yule ರವರ ಲೇಖನದ ಆಧಾರದ ಮೇಲೆ ಇದನ್ನು ಬರೆಯಲಾಗಿದೆ. ಲೆಕ್ಕಗಳಲ್ಲಿ ಅದಕ್ಕೂ ಇದಕ್ಕೂ ವ್ಯತ್ಯಾಸವಿದೆ.]

ಕನ್ನಡ ಗದ್ಯವನ್ನು ಓದುವಾಗ, ಅದರಲ್ಲೂ ಗಟ್ಟಿಯಾಗಿ ಓದುವಾಗ, ಪದಗಳಲ್ಲಿಯೂ ಸಂಧಿಸಮಾಸಪ್ರಯೋಗಗಳಲ್ಲಿಯೂ ವ್ಯತ್ಯಾಸವು ಗೋಚರವಾಗುವುದಲ್ಲದೆ ವಾಕ್ಯಪ್ರಮಾಣದಲ್ಲಿ ಸಹ ಅನೇಕ ವೇಳೆ ವ್ಯತ್ಯಾಸವು ಮನಸ್ಸಿಗೆ ತಟ್ಟುತ್ತದೆ. ಒಂದೇ ವಿಚಾರವನ್ನು ಅನೇಕ ವಿಧವಾದ ವಾಕ್ಯಗಳಲ್ಲಿ ಬರೆಯಬಹುದು.

ಉದಾ :—1. ಇದರಿಂದೇನು ಪ್ರಯೋಜನವೆಂದು ಯಾರಾದರೂ ಕೇಳಬಹುದು (3 ಪದಗಳು)
2. ಪ್ರಯೋಜನವೇನಿವರಿಂದ ಎಂದು ಯಾರಾದರೂ ಕೇಳಬಹುದು (4 ,, )
3. ಏನು ಪ್ರಯೋಜನ ಇದರಿಂದ ಎಂದು ಯಾರಾದರೂ ಕೇಳಬಹುದು (6 ,, )
4. ಏನು ಪ್ರಯೋಜನ ಇದರಿಂದ ಇದೆ ಎಂದು ಯಾರಾದರೂ ಕೇಳಬಹುದು (7 ,, )

ಹೀಗೆ ಪದಪ್ರಮಾಣದ ವ್ಯತ್ಯಾಸದಿಂದ ಶೈಲಿಯ ವ್ಯತ್ಯಾಸಗಳನ್ನು ಗುರುತಿಸಬಹುದೆ ಎನ್ನುವುದೇ ಈ ಲೇಖನದ ಉದ್ದೇಶ.

**ಪ್ರಯೋಗ.**—ಗ್ರಂಥಕರ್ತೃವಿನ ಬರಹದಲ್ಲಿ ಒಂದೊಂದು ವಾಕ್ಯವನ್ನು ಬೇರೆ ಬೇರೆಯಾಗಿ ವಿಂಗಡಿಸಿ ಪ್ರತಿವಾಕ್ಯದಲ್ಲಿಯೂ ಪದಗಳನ್ನು ಎಣಿಸುವುದು. ಒಂದು ಪದವಿರುವ ವಾಕ್ಯ, ಎರಡು ಪದಗಳ ವಾಕ್ಯ, ಮೂರು ಪದಗಳ ವಾಕ್ಯ, ಈ ರೀತಿಯಾಗಿ ವಿಂಗಡಿಸಿ ಪರಂಪರೆಗಳನ್ನು (Series) ಏರ್ಪಡಿಸುವುದು. ಹೀಗೆ ಬಂದ ಪರಂಪರೆಗಳಲ್ಲಿ ವ್ಯತ್ಯಾಸವಿದೆಯೆ ಎಂಬುದನ್ನು ಕಂಡುಹಿಡಿಯುವುದು.

ಒಂದೇ ಕವಿ ಬರೆದ ಗ್ರಂಥದಲ್ಲಿ ಒಂದು ಭಾಗದ ಪರಂಪರೆಗಳಿಗೂ ಮತ್ತೊಂದು ಭಾಗದ ಪರಂಪರೆಗಳಿಗೂ ಹೆಚ್ಚು ವ್ಯತ್ಯಾಸವಿರುವುದಿಲ್ಲ. ಇದನ್ನು ತೋರಿಸಲು ಗಳಗನಾಥರ ಕುರುಕ್ಷೇತ್ರ ಪುಸ್ತಕವನ್ನು ಕೆಳಗೆ ಕಂಡಂತೆ ವಿಂಗಡಿಸಲಾಗಿದೆ.

(ಕ) ಪು. ೧-೨೮

| ಪದಗಳು | ವಾಕ್ಯಗಳು |
|---|---|
| 1 – 5 | 168 |
| 6 –10 | 258 |
| 11–15 | 108 |
| 16–20 | 45 |
| 21–25 | 9 |
| 26 | 14 |
| | 602 |

(ಖ) ಪು. ೨೯-೫೬

| ಪದಗಳು | ವಾಕ್ಯಗಳು |
|---|---|
| 1 – 5 | 144 |
| 6 –10 | 273 |
| 11–15 | 108 |
| 16–20 | 46 |
| 21–25 | 19 |
| 26 | 10 |
| | 600 |

(ಕ) ಪರಂಪರೆಗಳು ಪುಟ ೧ ರಿಂದ ೨೮ ರ ವರೆಗೆ ಇರುವ ವಾಕ್ಯಗಳು, ಎಂದರೆ, 1 ರಿಂದ 5 ಪದಗಳಿರುವ ವಾಕ್ಯಗಳು 168; 6 ಪದಗಳಿಂದ 10 ಪದಗಳಿರುವ ವಾಕ್ಯಗಳು 258; 11 ರಿಂದ 15 ಪದಗಳಿರುವ ವಾಕ್ಯಗಳು 108 ಇದರಂತೆ.

| | ← ಇರುವವು (Actual) → | | | ← ಇರಬೇಕಾದವು (Expected) → | |
|---|---|---|---|---|---|
| | (ಕ) | (ಖ) | ಮೊತ್ತ | (ಕ′) | (ಖ′) |
| 1 - 5 | 168 | 144 | 312 | 156 | 156 |
| 6 -10 | 258 | 273 | 531 | 265·5 | 265·5 |
| 11–15 | 108 | 108 | 216 | 108 | 108 |
| 16–20 | 45 | 46 | 91 | 45·5 | 45·5 |
| 21–25 | 9 | 19 | 28 | 14 | 14 |
| 26 | 14 | 10 | 24 | 12 | 12 |
| ಒಟ್ಟು | 602 | 600 | 1202 | 602 | 600 |

Degree of Freedom = 10
Chisquared.($x^2$) = 5·610
P = more than 0·80

ಈ ಲೆಕ್ಕದಿಂದ ಈ ಪರಂಪರೆಗಳಿಗೆ ವ್ಯತ್ಯಾಸವಿಲ್ಲವೆಂದು ಸಿದ್ಧಾಂತವಾಗುವುದು.

**ಬೇರೆ ಬೇರೆ ಕವಿಗಳಲ್ಲಿ.**—ಮೇಲಿನದು ಒಬ್ಬರ ಬರವಣಿಗೆಯನ್ನು ಕುರಿತ ಸಂಗತಿ. ಬರಹಗಳು ಬೇರೆಯವರವು ಎಂಬುದನ್ನು ಹೀಗೆ ತಿಳಿಯುವುದು ಶಕ್ಯವೆ ಎಂಬುದನ್ನು ಪರೀಕ್ಷಿಸುವುದಕ್ಕಾಗಿ **ಸಂಭಾವನೆ** (೧೯೪೧) ಗ್ರಂಥದಿಂದ ಈ ಲೇಖನಗಳನ್ನು ತೆಗೆದುಕೊಳ್ಳಲಾಗಿದೆ:— ಶ್ರೀ ಮಾಸ್ತಿ ನರಸಿಂಗರಾಯರ ಶ್ರೀಕಂಠಯ್ಯನವರ ವಕ್ತೃತ್ವ (ಮಾ), ಶ್ರೀ ಗರಳಪುರಿ ಶಾಸ್ತ್ರಿಗಳವರ ಕರ್ಣಾಟಕ ಭಾಷೋಜ್ಜೀವನ (ಶಾ), ಶ್ರೀ ಬುರ್ಲಿ ಬಿಂದುಮಾಧವರವರ ಕನ್ನಡಕ್ಕಿರುವ ಕಾಲ್ತೊಡಕುಗಳು (ಕಾ), ಮತ್ತು ಶ್ರೀ ಕಂದಾಡೆ ಕೃಷ್ಣಯ್ಯಂಗಾರರವರ ಚರಿತ್ರೆಯ ರೀತಿ (ರೀ).

← ವಾಕ್ಯ →

| | ಪದ | ಮಾ | ಶಾ | ಕಾ | ರೀ |
|---|---|---|---|---|---|
| 1 | 1–5 | 44 | 28 | 28 | 37 |
| 2 | 6–10 | 55 | 67 | 47 | 45 |
| 3 | 11–15 | 31 | 38 | 16 | 18 |
| 4 | 16 ... | 6 | 27 | 12 | 7 |
| | ಒಟ್ಟು | 136 | 160 | 103 | 107 |

| | ← ಇರುವದು | → | | | | ← ಇರಬೇಕಾದ್ದು | → | | |
|---|---|---|---|---|---|---|---|---|---|
| | ಮೂ | ಶಾ | ಕಾ | ರೀ | ಮೊತ್ತ | ಮೂ | ಶಾ | ಕಾ | ರೀ |
| 1 | 44 | 28 | 28 | 37 | 137 | 36·8 | 43·3 | 27·9 | 29·0 |
| 2 | 55 | 67 | 47 | 45 | 214 | 57·5 | 67·6 | 43·6 | 45·3 |
| 3 | 31 | 38 | 16 | 18 | 103 | 27·7 | 32·6 | 20·9 | 21·8 |
| 4 | 6 | 27 | 12 | 7 | 52 | 14·0 | 16·5 | 10·6 | 10·9 |
| | 136 | 160 | 103 | 107 | 506 | 136 | 160 | 103 | 106 |

Degree of Freedom = 9.

$X^2 = 26{\cdot}60$. P is less than ·01. (ಸಂಭವ ಕಡಮೆ)

ಈ ಲೆಕ್ಕದಿಂದ ಮೂ, ಶಾ, ಕಾ, ರೀ ಗಳಿಗೆ ಒಂದಕ್ಕೊಂದಕ್ಕೆ ವ್ಯತ್ಯಾಸವಿದೆ ಎಂದು ತೋರಿಸಲಾಯಿತು.

| | ಮೂ | ಶಾ | | | |
|---|---|---|---|---|---|
| 1 ... | 44 | 28 | 72 | 33 | 39 |
| 2 ... | 55 | 67 | 122 | 56 | 66 |
| 3 ... | 31 | 38 | 69 | 31·7 | 37·3 |
| 4 ... | 6 | 27 | 33 | 15·3 | 17·7 |
| | 136 | 160 | 296 | 136·0 | 160·0 |

Degree of Freedom = 3.

$X^2 = 18{\cdot}60$.

P is less than ·01. (ಸಂಭವ ಕಡಮೆ)

ಇದರಿಂದ ಮೂ, ಮತ್ತು ಶಾ, ಪರಂಪರೆಗಳಿಗೆ ವ್ಯತ್ಯಾಸವು ಕಾಣುತ್ತದೆ.

**ಎಣಿಕೆಯ ಅಂಶವಿಚಾರ.**—(1) ಹೆಣ್ಣುಮಕ್ಕಳ, (2) ಕಾರಣವಾಗಿದೆಯೆನ್ನಬೇಕು, (3) ಶಾಖೆಗಳನ್ನೊಳಗೊಂಡ, (4) ಸಾಂಪ್ರದಾಯಿಕವಾಗಿರುತ್ತ, (5) ಹರಿದಾಸಪಂಥವು, (6) ೧೨೦ ಲಕ್ಷ, (7) 7 ನೆಯ ತಾರೀಖು—ಇವುಗಳಲ್ಲಿ (1) (2) (3) (4) (5) ಒಂದೊಂದು ಪದವಾಗಿಯೂ, (6) ರಲ್ಲಿ ೧೨೦ ಎಂಬುದನ್ನು ಒಂದು ಪದ, ಲಕ್ಷ ಎಂಬುದನ್ನು ಮತ್ತೊಂದು ಪದವಾಗಿಯೂ, (7) ರಲ್ಲಿ 7 ನೆಯ ಎಂಬುದನ್ನು ಒಂದು ಪದವಾಗಿಯೂ, ತಾರೀಖು ಎಂಬುದನ್ನು ಮತ್ತೊಂದು ಪದವಾಗಿಯೂ ಗಣಿಸಲಾಗಿದೆ.

**ಒಟ್ಟಿನಲ್ಲಿ.**—ಇಲ್ಲಿ ಕಾವ್ಯದ ವಿಚಾರವಾಗಿ ಏನೂ ಹೇಳಿಲ್ಲ. ಕವಿಯ ವೈಯಕ್ತಿಕ ವಿಚಾರವೇನೂ ಹೇಳಿದಂತಾಗಲಿಲ್ಲ. ಮಾಧುರ್ಯಾದಿ ಗುಣಗಳ ಗೋಜಿಗೆ ಹೋಗಿಲ್ಲ. ಸ್ಥೂಲವಾಗಿ ಹೇಳಬೇಕಾದರೆ : ಸ್ನೇಹಿತನನ್ನು ನಿರೀಕ್ಷಿಸುತ್ತ ನಾವು ಕಾದಿದ್ದಾಗ ದೂರದಲ್ಲಿ ಯಾರು ಬಂದಾಗ್ಯೂ ಆ ಸ್ನೇಹಿತನೇ ಬಂದ ಹಾಗೆ ಕಾಣುತ್ತೆ. ಆದರೆ

ಹತ್ತಿರಕ್ಕೆ ಬರುತ್ತ ಆ ವ್ಯಕ್ತಿಯ ಉದ್ದ, ಅಡ್ಡ, ದಪ್ಪ ವ್ಯತ್ಯಾಸವಾಗಿ 'ಅವನಲ್ಲ' ಎನ್ನುತ್ತೇವೆ. ಉದ್ದ ಅಗಲ ತಿಳಿದ ಕೂಡಲೆ ಮನುಷ್ಯನ ಯೋಗ್ಯತೆ ತಿಳಿದ ಹಾಗಾಯಿತೆ? ಇಲ್ಲ.—ಆದರೆ, ಒಂದು ಬಗೆಯ ಅಳತೆಯ ಮೂಲಕ ಒಂದು ಶೈಲಿಗೂ ಮತ್ತೊಂದಕ್ಕೂ ಇರುವ ವ್ಯತ್ಯಾಸವನ್ನು ಮಾತ್ರ ತೋರಿಸುವುದಕ್ಕೆ ಇದು ಸಹಕಾರಿಯಾಗಿದೆ. ಎರಡು ಗ್ರಂಥಗಳ ಶೈಲಿಗಳನ್ನು ಪರೀಕ್ಷಿಸಿ, ವಾಕ್ಯರಚನೆಗಳಲ್ಲಿನ ಕೆಲವು ಬಗೆಯ ವಿಶೇಷ ಪ್ರಮಾಣದ ಮೇಲೆ, ಇವೆರಡನ್ನೂ ಬರೆದವರು ಒಬ್ಬರೇಯೆ? ಅಥವಾ ಬೇರೆ ಬೇರೆಯವರಾಗಿರಬಹುದೆ? ಎಂಬುದನ್ನು ಊಹಿಸಲು ಈ ರೀತಿಯೂ ಸಹಾಯಕವಾದೀತು ಎಂಬುದನ್ನು ಸೂಚಿಸುತ್ತಿದ್ದೇನೆ. ಸಂಖ್ಯಾಶಾಸ್ತ್ರವನ್ನು (Statistics) ಈ ಬಗೆಯ ಕಾರ್ಯಕ್ಕೆ ಅಮೇರಿಕಾ ದೇಶದಲ್ಲಿ ಬಳಸುವುದಕ್ಕಾರಂಭಿಸಿದ್ದಾರೆ. ಅದರ ಸ್ವರೂಪವನ್ನು ಸ್ಥೂಲವಾಗಿ ತಿಳಿಸಲು ಈ ಲೇಖನ ಪ್ರಯತ್ನಿಸಿದೆ.

ಎಂ. ಜಿ. ವೆಂಕಟೇಶಯ್ಯ.

---

# ನಯನ ಭೀಕರ ಕರ್ಬಲ

[ಹಿನ್ನೆಲೆ : — "ಪ್ರಜೆಗಳ ದೃಷ್ಟಿಯಲ್ಲಿ ಶ್ರೇಷ್ಠನಾದವನು ಪ್ರಜಾಭಿಮತವನ್ನು ಪಡೆದು ಖಲೀಫನಾಗಬೇಕು" ಎಂಬ ಮೊಹಮ್ಮದ್ ಪೈಗಂಬರ್ ಅವರ ಧಾರ್ಮಿಕ ನಿಬಂಧನೆಯನ್ನು ಉಲ್ಲಂಘಿಸಿ, ಕೇವಲ ಬಲಪ್ರದರ್ಶನದಿಂದ ಎಜೀದನು ಖಲೀಫತನದ ಗದ್ದುಗೆಯನ್ನೇರಲು, ಮೊಹಮ್ಮದ್ ಪೈಗಂಬರ್ ಅವರ ದೌಹಿತ್ರರಾದ ಹಜರತ್ ಇಮಾಂ ಹುಸೇನರವರು ಇದನ್ನು ತೀವ್ರವಾಗಿ ಪ್ರತಿಭಟಿಸಿದರು. ವೈರಿಗಳು ವಂಚನೆಯಿಂದ ಕರ್ಬಲಾದ ಘೋರ ಮರುಭೂಮಿಯಲ್ಲಿ ಹುಸೇನರನ್ನು ಮುತ್ತಿಕೊಂಡು, ಅವರ್ಗಿಗೆ ವಿವಿಧರೀತಿಯ ದುಃಖಸಂಕಟಗಳನ್ನಿತ್ತು "ಎಜೀದನ ಪ್ರಭುನಿಷ್ಠೆಯನ್ನಂಗೀಕರಿಸಿರಿ" ಎಂದು ನಿರ್ಬಂಧಗೊಳಿಸಲು, "ಅಲ್ಪಕಾಲದ ಬಾಳ್ವೆಗಾಗಿ ಎಜೀದನಂಥ ಅಧರ್ಮ ಪ್ರಭುವಿನ ಸ್ವಾಮಿತ್ವವನ್ನಂಗೀಕರಿಸಲೆ? ಸ್ವಾತಂತ್ರ್ಯದ ಸಾವನ್ನೆದುರ್ಗೊಳ್ಳಲು ಸಿದ್ಧನಿರುವೆನು; ಪಾರತಂತ್ರ್ಯದ ಬಾಳ್ವೆಯನ್ನಾಶಿಸೆನು" ಎಂದು ಮೂರು ದಿನಗಳಿಂದಲೂ ಹಸಿವು ಬಾಯಾರಿಕೆಗಳಿಂದ ಬಳಲಿದ್ದ ಕೇವಲ ತಮ್ಮ ಎಪ್ಪತ್ತೆರಡು ಮಂದಿ ಅನುಯಾಯಿಗಳೊಡನೆ ವೈರಿಯ ಇಪ್ಪತ್ತೆರಡು ಸಾವಿರ ಮಂದಿ ಸೈನಿಕರನ್ನಿದಿರಿಸಿ ಹೋರಾಡಿ ಬಲಿದಾನವಾದರು. ಯುದ್ಧಾಂತ್ಯದಲ್ಲಿ ಜರುಗಿದ ವಿಷಾದ ಘಟನೆಯೊಂದನ್ನು ಇಲ್ಲಿ ನಿರೂಪಿಸಿದೆ.]

ಸಕಲ ಬಂಧುಗಳೂ ಪ್ರಳಯಪ್ರವಾಹಿನಿಯಲ್ಲಿ ತೇಲಿ ಕಣ್ಮರೆಯಾದ ಬಳಿಕ ರಣರಂಗಕ್ಕೆ ಹೋಗುವ ಸರದಿ ಇಮಾಂ ಹುಸೇನರ ಪಾಲಿನದಾಯಿತು. ಇಮಾಮರ ಏಕಾಂಗತೆಯನ್ನೂ, ನಿಸ್ಸಹಾಯತೆಯನ್ನೂ ಕಂಡು ಅವರ ಪತ್ನಿಯವರು, ಸೋದರಿ, ಮಗಳು ಮತ್ತು ಇತರ ಸ್ತ್ರೀಯರು ಎಲ್ಲರೂ ಎದೆಯನ್ನು ಬಡಿದುಕೊಂಡು ಅಳುತ್ತಿದ್ದರು. ಇಮಾಮರು ಗೂಡಾರವನ್ನು ಪ್ರವೇಶಿಸಿದರು. ದುಃಖಿತರನ್ನು ಸಂತೈಸುತ್ತ, "ನೀವು ಹೀಗೆಯೇ ರೋದಿಸುತ್ತ ದುಃಖವ್ರಣಗಳಿಂದ ಕದಡಿಹೋಗಿರುವ ನನ್ನ ಹೃದಯದ ಮೇಲೇಕೆ ಕ್ಷಾರಜಲಸೇಚನೆಗೆಯ್ಯುತ್ತಿರುವಿರಿ? ಖಾಸಿಂ ಮತ್ತು ಅಲೀ ಅಕ್ಬರರ ನಾಮಗಳನ್ನುಚ್ಚರಿಸುತ್ತ, ನನ್ನ ದುಃಖಜ್ವಾಲೆಯ ಮೇಲೇಕೆ ತೈಲವನ್ನೆರಚುತ್ತಿರುವಿರಿ? ಆ ಚಂದ್ರವದನಗಳನ್ನೂ ಆ ತೇಜಃಪುಂಜಗಳನ್ನೂ ಸ್ಮರಿಸಿಕೊಳ್ಳುತ್ತ ದುಃಖಕ್ಲೇಶವಾರಿಯಿಂದ ನಾದಿದ ನನ್ನ ಚಿತ್ರಭಿತ್ತಿಯ ಮೇಲೇಕೆ ನಿಮ್ಮ ಹರಿತವಾದ ನಖಗಳಿಂದ ಪರಚುತ್ತಿರುವಿರಿ? ಶಾಂತಚಿತ್ತರಾಗಿ ಭಗವಂತನಿಗೆ ನಿಮ್ಮ ಕೃತಜ್ಞತೆಯನ್ನು ಸಲ್ಲಿಸಿ ಎದೆಯ ಮೇಲೆ ಸಹನಾಶ್ಮವನ್ನು ಧರಿಸಿ. ಕಷ್ಟದಲ್ಲಿ, ವಿಪ್ಲವದಲ್ಲಿ ತಾಳ್ಮೆ ಪುಣ್ಯಪ್ರದವಾದ್ದು. ಅಸಹನೆ ಪಾಪಹೇತು. ನನ್ನ ಮರಣಾನಂತರ ನೀವುಗಳು ಇನ್ನೂ ಹೆಚ್ಚಿನ ಕಷ್ಟನಷ್ಟಗಳಿಗೆ ಗುರಿಯಾಗಬಹುದು. ಎಚ್ಚರಿಕೆ. ನನ್ನನ್ನಗಲಿದ ದುಃಖದಲ್ಲಿ ಅವಗುಂಠನವನ್ನು ಕಿತ್ತೊಗೆಯದಿರಿ. ವಸ್ತ್ರಗಳನ್ನು ಹರಿಯದಿರಿ. ಕೇಶರಾಶಿಯನ್ನು ಕೆದರಿಕೊಳ್ಳದಿರಿ. ಗಟ್ಟಿಯಾಗಿ ರೋದಿಸದಿರಿ. ನೆಲದ ಮೇಲೆ

ಬಿದ್ದು ಹೊರಳಾಡುವುದು, ಮುಖದ ಮೇಲೆ ಪ್ರಹರಿಸಿಕೊಳ್ಳುವುದು, ನಖಗಳಿಂದ ಮುಖವನ್ನು ಪರಚಿಕೊಳ್ಳುವುದು; ಎದೆಯನ್ನು ಬಡಿದುಕೊಳ್ಳುವುದು; ಹಣೆಯನ್ನು ಚಚ್ಚಿಕೊಳ್ಳುವುದು—ಇವೆಲ್ಲಾ ಧರ್ಮಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟಿವೆ. ದುಃಖ ಅತಿರೇಕವಾದಾಗ ಧ್ವನಿಗೈಯದೆ ಕಂಬನಿಗರೆಯುವುದು ಹಿಂಸಾಪೀಡಿತರ ಕರ್ತವ್ಯ.

ಪ್ರಕೃತದಲ್ಲಿ ನಿಮ್ಮಂತೆ ಹಿಂಸಾಪೀಡಿತರೂ ದುಃಖಿತರೂ ನಿರಾಶ್ರಿತರೂ ನಿರಾಧಾರಿಗಳೂ ಆದವರು ಯಾರೊಬ್ಬರೂ ಇರುವುದಿಲ್ಲ. ಆಹ! ದೇಶವಗಲಿತು. ಮನೆಮಠಗಳನ್ನು ವೈರಿಗಳು ಸೂರೆಗೈದರು. ಸಂಪತ್ತನ್ನು ದೋಚಿದರು. ಕೊನೆಗೆ ಕರ್ಬಲಾದ ಈ ಘೋರ ವಧ್ಯಭೂಮಿಯಲ್ಲಿ ಅನುಯಾಯಿಗಳೂ ಆಪ್ತಬಂಧುಗಳೂ ತನುಜರೂ ಅಗ್ರಜರಾತ್ಮಜರೂ ಸೋದರಿಯ ಸಂಜಾತರೂ ಅಸ್ಖಲಿತ ಹಿತಚಿಂತನೆಯುಳ್ಳ ಸಹೋದರರೂ ಎಲ್ಲರೂ ಯುದ್ಧಲಹರಿಯಲ್ಲಿ ಹರಿದು ಬೊಬ್ಬುಳಿಕೆಗಳಂತೆ ತೇಲಿ ಕಣ್ಮರೆಯಾದರು. ಈಗ ಏಕಮಾತ್ರನಾಗಿ ಉಳಿದಿರುವ ನನ್ನಿದಿರಿನಲ್ಲಿಯೂ ಮೃತ್ಯು ಖಡ್ಗಪಾಣಿಯಾಗಿ ನಿಂತಿದೆ. ತ್ವರಿತದಲ್ಲಿಯೇ ನಾನೂ ಅವರನ್ನೆಲ್ಲ ಹಿಂಬಾಲಿಸುವವನಿದ್ದೇನೆ. ಆಹಾ, ಎಂಥೆಂಥಾ ಅನುಪಮ ವೀರರು ಒಂದೊಂದು ತುತ್ತು ಕೂಳಿಗಾಗಿ, ಒಂದೊಂದು ಗುಟುಕು ನೀರಿಗಾಗಿ, ಹಾತೊರೆದು, ಕಾದ ಮಳಲ ರಾಶಿಯ ಮೇಲೆ ಹೊರಳಾಡಿ, ಬೆಂದು, ಶತ್ರುಗಳ ಕೂರಂಬುಗಳಿಗೆ ಬಲಿಯಾಗಿ, ತಮ್ಮ ತನುವಿನ ರಕ್ತಾಂಬುಧಿಯಲ್ಲಿ ಮುಳುಗಿ ಕಣ್ಮರೆಯಾದರು? ಎಂಥಾ ಜಗನ್ಮೋಹಕ ಸುಂದರ ಪುಷ್ಪಮುಕುಳಗಳು ಪ್ರಸ್ಫುಟಿತವಾಗಿ ಜಗತ್ತಿಗೆಲ್ಲ ತಮ್ಮ ಸೌಂದರ್ಯವನ್ನೂ ಸೌರಭ್ಯವನ್ನೂ ಬೀರುವುದರೊಳಗಾಗಿಯೇ ಯುದ್ಧಾರುಣನ ತೀಕ್ಷ್ಣಝಳದಿಂದ ಬಾಡಿ, ಉದುರಿ ಭಸ್ಮೀಭೂತವಾಗಿ ಹೋದುವು!" ಎನ್ನುತ್ತ ವಿವಶರಾಗಿ ರೋದಿಸಲಾರಂಭಿಸಿದರು. ಹುಸೇನರ ಈ ವಾಕ್ಯಗಳನ್ನು ಕೇಳಿ ಶಹರ್‌ಬಾನೊ, ಜೈನಬ್, ಕುಲ್ಸುಂ ಅವರುಗಳು ದುಃಖವನ್ನು ತಡೆಯಲಾರದೆ ಬಿಕ್ಕಿಬಿಕ್ಕಿ ಅಳುತ್ತಿದ್ದರು.

ಹುಸೇನರು ಎಲ್ಲರನ್ನೂ ಸಂತೈಸಿ ಹಸುಳೆಯಾದ ಸಕೀನಳನ್ನೆತ್ತಿಕೊಂಡು ಮನವಾರೆ ಮುತ್ತಿಕ್ಕಿ, ಮಗುವನ್ನು ಜೈನಬ್‌ರವರ ಮಡಿಲಲ್ಲಿ ಹಾಕಿ "ಸೋದರಿ, ಇಂದು ನನ್ನ ಸಕೀನಳ ನಾವೆ ಜಲಾವರ್ತದಲ್ಲಿ ಸಿಲುಕಿ ಮುಳುಗುತ್ತಿದೆ. ಕ್ಷಿಪ್ರದಲ್ಲಿಯೇ ನನ್ನ ಮುದ್ದು ಮಗು ಪಿತೃವಿಹೀನಳೂ ಅನಾಥಳೂ ಆಗುವಳು. ಸ್ವಾಭಾವಿಕವಾಗಿ ಅನಾಥರು ಸೂಕ್ಷ್ಮಹೃದಯಿಗಳಾದ್ದರಿಂದ ಅಲ್ಪಕಾರಣಗಳಿಗಾಗಿಯೂ ನೊಂದುಕೊಳ್ಳುತ್ತಾರೆ. ಸದಾ ಪರಾಜಿತಚಿತ್ತವುಳ್ಳವರಾಗಿರುವುದರಿಂದ ನಿರಂತರವೂ ಧೈರ್ಯಗುಂದಿರುತ್ತಾರೆ. ನನ್ನ ಮುದ್ದುಮಗು ನನ್ನ ಮೇಲೆ ಹೆಚ್ಚಿನ ಅನುನಯವನ್ನಿಟ್ಟಿದ್ದಳು. ಈಗ ಇದರ ಪೋಷಣಾಭಾರ ನಿಮ್ಮ ಮೇಲಿದೆ. ಈಕೆಗೆ ಯಾವ ವಿಧವಾದ ಕೊರತೆ

ಯನ್ನೂ ಉಂಟುಮಾಡದಿರಿ. ಈಕೆಯ ಕಣ್ಣುಗಳಿಂದ ಅಶ್ರುಬಿಂದುಗಳು ತುಳುಕದಂತೆ ನೋಡಿಕೊಳ್ಳಿ" ಎಂದರು. ಅದಕ್ಕೆ ಜೈನಬ್‌ರವರು "ಅಣ್ಣಾ, ಒಮ್ಮೆ ಸಕೀನಳು ನನ್ನ ಸುವನ್ನ ಪೇಕ್ಷಿಸಿದರೂ ನಾನು ತಕ್ಷಣವೇ ಅದನ್ನೆರೆಯಲು ಸಿದ್ಧಳಿರುವೆನು. ಆದರೆ ತಮ್ಮನ್ನು ಸ್ಮರಿಸಿಕೊಂಡು 'ಅಪ್ಪಾ, ಅಪ್ಪಾ' ಎಂದು ಕಲ್ಲುಬಂಡೆಗಳು ಕರಗಿಹೋಗು ವಂತೆ ಆರ್ತನಾದಗೆಯ್ಯುತ್ತ, ಸಿಕ್ಕಿದೆಡೆಯಲ್ಲೆಲ್ಲ ತಲೆಯನ್ನು ಬಡಿದುಕೊಂಡು ರೋದಿಸುವಾಗ ನಾನು ಹೇಗೆ ತಾನೆ ಸಂತೈಸಲಿ? ನಿಮ್ಮ ಮಂಗಳಮೂರ್ತಿಯನ್ನು ಈಕೆಗೆ ಎಲ್ಲಿಂದ ತಂದು ತೋರಿಸಲಿ?" ಎಂದರು. ಇಮಾಮರಿಗೆ ಎಲ್ಲೆಲ್ಲೂ ನೈರಾಶ್ಯ ತಲೆದೋರಲಾರಂಭಿಸಿತು. ಕೊನೆಗೆ ದೀರ್ಘವಾದ ನಿಟ್ಟುಸಿರನ್ನು ಬಿಟ್ಟು "ವಿಧಿವಿಲಾಸ ವಿದ್ದಂತಾಗಲಿ. ಈಗ ಹೃದಯದ ಮೇಲೆ ಉಪಲವನ್ನು ಧರಿಸುತ್ತೇನೆ. ನಿಮ್ಮೆಲ್ಲರನ್ನೂ ಆ ದೀನಶರಣ್ಯನಾದ ಪರಮಾತ್ಮನ ಅಧೀನಕ್ಕೊಪ್ಪಿಸುತ್ತೇನೆ. ಭಗವಂತನು ನಿಮಗೆಲ್ಲ ರಿಗೂ ಬಂಧುವಿಯೋಗದುಃಖ ಸಹಿಷ್ಣುತೆಯನ್ನೀಯಲಿ. ನಿಮ್ಮೆಲ್ಲರನ್ನೂ ಗೌರವದಿಂದ ಸುರಕ್ಷಿತವಾಗಿ ಮದೀನಾಪಟ್ಟಣಕ್ಕೆ ತಲಪಿಸಲಿ" ಎನ್ನುತ್ತ ಗೂಡಾರದಿಂದ ಹೊರ ಬಿದ್ದರು. ಕುದುರೆಯನ್ನು ಸಿದ್ಧಗೊಳಿಸಿ, ಇನ್ನೇನು ಅದನ್ನೇರಿ ರಣರಂಗಕ್ಕೆ ಹೊರಡ ಬೇಕು, ಒಮ್ಮಿಂದೊಮ್ಮೆಯೇ ಗೂಡಾರದಿಂದ ಹಾಹಾಕಾರ ಕೇಳಿಬರಲಾರಂಭಿಸಿತು. ತಕ್ಷಣವೇ ಇಮಾಮರು ಗೂಡಾರವನ್ನು ಪ್ರವೇಶಿಸಿ ಕಾರಣವನ್ನು ವಿಚಾರಿಸಿದರು. ಶಹರ್‌ಬಾನೋರವರು ಅಲೀ ಅಸ್ಗರನನ್ನು ತೋರಿಸುತ್ತ "ಇಲ್ಲಿ ನೋಡಿ, ಮಗು ಬಿಸಿಲ ಧಗೆಯನ್ನು ಸೈರಿಸದೆ ಮೇಲುಸಿರನ್ನೆಳೆಯುತ್ತಿದೆ. ತುಟಿಗಳು ಒಣಗಿಹೋಗಿವೆ. ಬಾಯಾರಿಕೆಯಿಂದ ನಾಲಿಗೆಯನ್ನು ಹೊರಚಾಚಿದೆ. ಅಗ್ನಿಸ್ಪರ್ಶವಿಲ್ಲದೆಯೇ ಇದರ ಕೋಮಲ ತನುವಿನ ಮೇಲೆ ಬೊಕ್ಕೆಗಳೆದ್ದಿವೆ. ಇದರ ರೋದನಶಕ್ತಿಯೂ ಕುಂಠಿತ ವಾಗಿದೆ. ಹಸುಳೆ ಮೂರು ದಿನಗಳಿಂದಲೂ ನಮ್ಮಂತೆಯೇ ತೃಷಾಪೀಡಿತವಾಗಿದೆ. ನಾವು ನಿರ್ಗತಿಕರಾಗಿದ್ದೇವೆ. ಏನುಮಾಡಲಿ? ಸ್ತನಕ್ಷೀರ ಕೂಡ ಬತ್ತಿಹೋಗಿದೆ. ಈಗ ಈ ಮುದ್ದುಕಂದನ ಮೇಲೆ ಕೃಪೆದೋರಿ ವೈರಿಗಳು ಒಂದು ಗುಟುಕು ಜಲವ ನ್ನಿತ್ತರೂ ಮಗು ಬದುಕಿಕೊಳ್ಳುವುದು. ಇಲ್ಲದಿದ್ದರೆ ಕ್ಷಿಪ್ರದಲ್ಲಿಯೇ ಇದು ತನ್ನ ಅಂತ್ಯೋಚ್ಛ್ವಾಸವನ್ನು ನಿಶ್ವಾಸಿಸಿ ಬಿಡುವುದು" ಎಂದು ರೋದಿಸತೊಡಗಿದರು.

ಇಮಾಮರು ಮಗುವನ್ನು ಮಡಿಲಲ್ಲೆತ್ತಿಕೊಂಡರು. ಅದನ್ನು ತಮ್ಮ ಹೃದಯಕ್ಕೆ ಒತ್ತಿಕೊಂಡರು. ಮಗುವಿನೊಂದಿಗೆ ವೈರಿಗಳೆದಿರಿನಲ್ಲಿ ನಿಂತು "ಎಲೈ ಕೂಫಾದ ಕೃತಘ್ನರಿರಾ! ನೀವು ವಂಚನೆಯಿಂದ ನಮ್ಮನ್ನು ಇಲ್ಲಿಗೆ ಕರಸಿದಿರಿ. ಈ ಕರ್ಬಲಾದ ವಹ್ನಿಕುಂಡದಲ್ಲಿ ನಮ್ಮನ್ನು ತಳ್ಳಿ ದಗ್ಧಗೊಳಿಸಿದಿರಿ. ನಿಮ್ಮ ಮನದ ಬಯಕೆಯನ್ನು ಸಫಲಗೊಳಿಸಿಕೊಂಡಿರಿ. ನಿರಪರಾಧಿಗಳ, ಶಿಷ್ಟರ ರಕ್ತದಲ್ಲಿ ನಿಮ್ಮ ಪಾದಗಳನ್ನು

ತೊಳೆದಿರಿ. ಆದರೂ ನಿಮ್ಮಾತ್ಮಕ್ಕೆ ಶಾಂತಿಯುಂಟಾಗಲಿಲ್ಲ. ಪುತ್ರನಾದ ಆಬಿದನು ಪ್ರಜ್ಞಾಶೂನ್ಯನಾಗಿ ರುಗ್ಣಶಯ್ಯೆಯ ಮೇಲೊರಗಿದ್ದಾನೆ. ಔಷಧಿಯ ಮಾತೇಕೆ? ಒಂದು ತೊಟ್ಟು ಜಲಕ್ಕಾಗಿ ಬಾಯಿ ಬಾಯಿ ಬಿಡುತ್ತಿದ್ದಾನೆ. ನೀವೆಲ್ಲರೂ ಫಿರಾತ ಜಲಪಾನದಿಂದ ಸಂತೃಪ್ತರಾಗಿರುವಿರಿ. ನಾವಾದರೋ, ಬಿಸಿಲಿನ ಧಗೆಯನ್ನೂ, ತಪ್ತಾನಿಲವನ್ನೂ ಪ್ರಾಶನಿಸಿ ಪ್ರಜ್ಞೆಗುಂದುತ್ತಿರುವೆವು. ಇದೇನು—ಕರ್ಬಲಾದ ಮರುಭೂಮಿಯೋ? ಅಥವಾ ಜ್ವಾಲಾರಸಾಂಬುಧಿಯೋ? ಅರಿಯದಂತಾಗಿದೆ. ಇಲ್ಲಿನ ಮಳಲ ರಾಶಿಯು ಅಗ್ನಿಕಣಗಳಂತೆ ಜ್ವಲಿಸುತ್ತಿರುವುದು. ಕಲ್ಲುಗಳು ಬೆಂಕಿಯ ಕೆಂಡಗಳಂತೆ ಚುಚ್ಚುತ್ತಿರುವುವು. ಗಾಳಿ ತಪ್ತಮಾರುತಸಂತೆ ಬೀಸುತ್ತಿರುವುದು. ಈ ಬಿಸಿಲ ಬೇಗೆಯಲ್ಲಿ, ಈ ಅಸಹನೀಯ ತಾಪದಲ್ಲಿ, ಕ್ಷುಧಾತೃಷಾಪೀಡಿತರಾದ ನಮ್ಮನ್ನು ವಿವಿಧ ಸಂಕಟಗಳಿಗೀಡುಮಾಡಿದಿರಿ. ನನ್ನ ಅನುಚರರನ್ನು ಶರವರ್ಷಗಳಿಂದ ವಿಧ್ವಂಸಗೊಳಿಸಿದಿರಿ. ಈಗ ನನ್ನ ಪ್ರಾಣಾಪಹರಣಕ್ಕಾಗಿ ತವಕಗೊಳ್ಳುತ್ತಿರುವಿರಿ. ನಿಮ್ಮ ದೃಷ್ಟಿಯಲ್ಲಿ ಅನ್ಯಾಯಿಯೆಂದರೆ, ತಪ್ಪಿತಸ್ಥನೆಂದರೆ, ಶಿಕ್ಷಾರ್ಹನೆಂದರೆ ನಾನಲ್ಲವೆ? ಆದರೆ ಈ ನಿರಪರಾಧಿ, ನಿರುಪದ್ರವಿ, ನಿರ್ದೋಷಿಯಾದ ಹಸುಳೆಯದೇನು ತಪ್ಪಿದೆ? ಇದರ ಮೇಲೇಕೆ ನೀವು ಇಂಥಾ ದೌರ್ಜನ್ಯವನ್ನು ಪ್ರಯೋಗಿಸುತ್ತಿರುವಿರಿ? ಇದರ ಜೀವ ಒಂದು ಗುಟುಕು ನೀರಿಗಾಗಿ ಕಾದು ಕುಳಿತಿದೆ. ಬಾಯಾರಿಕೆಯಿಂದ ಈ ಮುದ್ದು ಮಗು ನಾಲಿಗೆಯನ್ನು ಹೊರಚಾಚಿಕೊಂಡಿದೆ. ನೀರ ಹೆಸರನ್ನು ಕೇಳಿದೊಡನೆಯೇ ಕಂಪಿಸಿ ಹೋಗುತ್ತಿದೆ. ಇದರ ಶುಷ್ಕವದನವನ್ನೂ ದಾರುಣವೇದನೆಯನ್ನೂ ನೋಡಿದೊಡನೆಯೇ ಕರುಳು ಕತ್ತರಿಸಿಹೋಗುತ್ತವೆ. ಈ ಸಂದರ್ಭದಲ್ಲಿ ಪರಮಾತ್ಮನಿಗಾಗಿ ಈ ಮಗುವಿಗೆ ಒಂದು ಗುಟುಕು ಜಲವನ್ನು ಕುಡಿಸಿರಿ. ಬಹು ನಿರ್ದೋಷಿಯಾದ ಈ ಮೂಗುಜೀವಿ ಬದುಕಿದರೂ ಬದುಕಿಕೊಳ್ಳಬಹುದು" ಎಂದು ಬೇಡಲಾರಂಭಿಸಿದರು.

ಒಡನೆಯೇ ಒಬ್ಬ ಪಾಷಾಣಹೃದಯಿಯಾದ ಚತುರ ಬಿಲ್ಗಾರನ ಅಂಬಿನಿಂದ ಬಾಣವೊಂದು ವಾಯುವೇಗದಲ್ಲಿ ಹೊರಟಿತು. ಮಗುವಿನ ತೆರೆಯಲ್ಪಟ್ಟ ಬಾಯನ್ನು ಹೊಕ್ಕು ಕಂಠದಲ್ಲಿ ಬೇರೂರಿತು. ಮಗು ದಡದ ಮೇಲೆಸೆಯಲ್ಪಟ್ಟ ಮೀನಿನಂತೆ ಇಮಾಮರ ಮಡಿಲಲ್ಲಿ ಹೊರಳಾಡಲಾರಂಭಿಸಿತು. ಇಮಾಮರು ಮಗುವಿನ ಕಂಠಶಲ್ಯವನ್ನು ಕಿತ್ತರು. ಬೊಗಸೆಯು ರಕ್ತದಿಂದ ತುಂಬಿಹೋಯಿತು. ಆ ರಕ್ತಧಾರಾ ವರ್ಷಿತ ಮಗುವಿನೊಂದಿಗೆ ಗೂಡಾರದೆಡೆಗೆ ಹಿಂದಿರುಗಿದರು. ಮಗುವನ್ನು ಶಹರ್ ಬಾನೋರವರ ಮಡಿಲಲ್ಲಿ ಹಾಕುತ್ತ "ಇದೋ, ಅಲೀಅಸ್ಗರನು ಈಗ ಶಾಂತಚಿತ್ತನಾಗಿದ್ದಾನೆ. ಮರಣಪೀಯೂಷವನ್ನು ಸವಿದು ತನ್ನ ದಾಹವನ್ನು ನಿರಂತರಕ್ಕಾಗಿ ಪರಿಹರಿಸಿಕೊಂಡಿರುತ್ತಾನೆ" ಎಂದರು.

ಎಸ್. ಕೆ. ಕರೀಂಖಾನ್.

---

# ಚೌತಿಯ ಚಂದ್ರ

೧

ಬೆನಕ ಚೌತಿಯ ಚೆಲುವ ಶಿಶುಶಶಿ
ಅಂತರಿಕ್ಷದ ವಕ್ಷದಿ
ಘನಪಯೋಧರ ಪಾನ ಸುಖವಶಿ
ಶುಕ್ಲಸುಂದರ ಪಕ್ಷದಿ.

೨

ಅರಿಲಗೊಂಚಲ ತೆರನ ತೆನೆಯಾ
ಕೃತ್ತಿಕೆಯು ಬೆಳೆ ಹೊನ್ನನು.
ಸವರಿ ಕವರಲು ಬಂದ ಭಾದ್ರನ,
ಪಿಡಿಪು ಮರೆಯುಪ್ಪಂತೆ ಪಿಡಿದಿಹ
ಕೈಯ ಕುಡುಗೋಲನ್ನನು.

೩

ರತಿಯ ನೆಚ್ಚರಗೊಳಿಸಿ ಯತಿಯಲಿ
ಮದನ ಕಿವಿವರಿಗೆಳೆದನು;
ಜೊನ್ನವಿಲ್ಲನ ಜೊನ್ನನಾರಿಯ
ವೃತ್ತವಾದುದು ಆ ಧನು:
ಶಿವನ ಹೃದಯವ ಹೊಕ್ಕ ಹೂವಿನ
ಸರಳು ಸಂದುದು ಬೇಳ್ವೆಗೆ;
ಭಸ್ಮವಾದನು ಅತನು, ಬಾನಿನ
ಬೂದಿಮುಗಿಲಿನ ಬಾಳ್ವೆಗೆ;
ವ್ಯೋಮಕೇಶನ ಜಟೆಗೆ ಸಿಲ್ಕಿತೊ
ವೃತ್ತಗೊಂಡಾ ಜ್ಯಾಧನು:
ಕಾಣು ಕಾಣ್ ಅದೆ ಮೇಲೆ ತೇಲಿದೆ
ಬೆನಕ ಚೌತಿಯ ಚಂದ್ರನು!

ಕುವೆಂಪು.

# ಛಂದಃಶಾಸ್ತ್ರದ ಸಂಕ್ಷಿಪ್ತ ಇತಿಹಾಸ

ಕೊಲ್ಹಾಪುರ ರಾಜಾರಾಂ ಕಾಲೇಜಿನ ಮರಾಠಿ ಭಾಷೆಯ ಪ್ರಾಧ್ಯಾಪಕ ರಾಗಿದ್ದ ದಿವಂಗತ ಶ್ರೀ ಮಾಧವರಾವ್ ತ್ರ್ಯಂಬಕ್ ಪಟವರ್ಧನ್ ಎಂಬವರು ಮಹಾರಾಷ್ಟ್ರ ದೇಶದಲ್ಲಿ 'ಮಾಧವ ಜೂಲಿಯನ್' ಎಂಬ ಪ್ರಸಿದ್ಧ ಕವಿಗಳು. ಅವರು ೧೯೩೭ರಲ್ಲಿ 'ಛಂದೋರಚನಾ'ವೆಂಬ ಅಮೂಲ್ಯವಾದ ಗ್ರಂಥವನ್ನು ಪ್ರಕಾಶ ಪಡಿಸಿದರು. ಈ ಗ್ರಂಥವು ಮರಾಠಿ ಭಾಷೆಯಲ್ಲಿ ಇದ್ದರೂ ಇದರ ವ್ಯಾಪ್ತಿ ಕೇವಲ ಮರಾಠಿ ಛಂದಸ್ಸಿಗೆ ಮಾತ್ರ ಅನ್ವಯಿಸಿಲ್ಲ; ಅಲ್ಲಿ ಸಂಸ್ಕೃತ ಛಂದಸ್ಸಿನ ವಿಚಾರವೂ ಇದೆ. ಗ್ರಂಥದಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಛಂದೋವಿಷಯಕವಾದ ಕೆಲವು ಪ್ರಶ್ನೆಗಳ ವಿಚಾರವಿದೆ. ಎರಡನೆಯ ಅಧ್ಯಾಯ ದಲ್ಲಿ ಯಮಕ, ಯತಿ, ಅಕ್ಷರ ಮತ್ತು ಗಣ ಇವುಗಳ ವಿಚಾರವಿದೆ. ಮೂರನೆಯ ಅಧ್ಯಾಯದಲ್ಲಿ ವೃತ್ತ ವಿಚಾರ ಮತ್ತು ವೃತ್ತ ವಿಸ್ತಾರ ಇವೆ. ಇಲ್ಲಿ ಒಟ್ಟು ೯೧ ವೃತ್ತಗಳ ಲಕ್ಷಣ ಸಿಕ್ಕುತ್ತದೆ. ನಾಲ್ಕನೆಯ ಅಧ್ಯಾಯ ವೃತ್ತ ವಿಹಾರ:— ಹಿಂದೆ ಹೇಳಿದ ವೃತ್ತಗಳಿಗೆ ಉದಾಹರಣೆಗಳು ಇಲ್ಲಿ ಕಂಡುಬರುತ್ತವೆ. ಅನೇಕ ಉದಾಹರಣೆಗಳ ಜೊತೆಗೆ ಗ್ರಂಥಕರ್ತರು ತಾವೇ ರಚಿಸಿರುವ ೨೬೦ ಉದಾಹರಣೆ ಗಳನ್ನು ಕೊಟ್ಟಿರುತ್ತಾರೆ. ಐದನೆಯ ಅಧ್ಯಾಯ 'ಜಾತಿ ಜೀವನ'ಕ್ಕೆ ಸಂಬಂಧ ಪಟ್ಟದ್ದು. ಆರನೆಯ ಅಧ್ಯಾಯ 'ಜಾತಿ ಜೃಂಭಣ'. ಏಳನೆಯದು ಛಂದಶ್ಛಾಯ. ಎಂಟು, ಛಂದಃಶಾಸ್ತ್ರದ ಸಂಕ್ಷಿಪ್ತ ಇತಿಹಾಸ. ಈ ಕೊನೆಯ ಅಧ್ಯಾಯದ ಕೆಲವು ಭಾಗಗಳನ್ನು ಮಾತ್ರ ಈ ಲೇಖನ ಕನ್ನಡಿಸುತ್ತದೆ.

## ಪಿಂಗಳನ ಛಂದಃಸೂತ್ರ

ಛಂದಃಶಾಸ್ತ್ರದ ಪಾಯವನ್ನು ಯಾರು ಹಾಕಿದರೆಂಬುದನ್ನು ನಿಶ್ಚಯವಾಗಿ ಹೇಳುವುದಕ್ಕಾಗುವುದಿಲ್ಲ. 'ಛಂದಸ್' ಶಬ್ದದಂತೆ 'ಪಿಂಗಳ' ಎಂಬ ಹೆಸರು ಪ್ರಾಚೀನಕಾಲದಿಂದ ಪ್ರಸಿದ್ಧವಾಗಿದೆ. ಆದರೆ ಛಂದಃಸೂತ್ರಗಳ ಕರ್ತನೆಂದು ಯಾವ ಪಿಂಗಳನು ಪರಿಚಿತನೋ, ಆತನ ಹಿಂದೆ ಕಾಶ್ಯಪ, ಸೈತವ, ರಾತ, ಮಾಂಡವ್ಯ ಇವರು ಛಂದೋವಿವೇಚಕರಾಗಿ ಹೋದರೆಂದು ಪಿಂಗಳನ ೭/೯–೧೦ ಮತ್ತು ೭/೩೪ ಈ ಸೂತ್ರಗಳಿಂದ ತಿಳಿದುಬರುತ್ತದೆ. ಇವರ ಕೃತಿಗಳು ಈಗ ಉಪಲಬ್ಧ ವಾಗಿಲ್ಲ. ಪಿಂಗಳನ ಛಂದಃಶಾಸ್ತ್ರ ಮಾತ್ರ ಪ್ರಸಿದ್ಧವಾಗಿದೆ.[1]

1 "ಬ್ರಾಹ್ಮಣಗಳಲ್ಲಾಗಲೆ ಛಂದೋ ವಿಷಯಗಳಲ್ಲಿ ಆಸಕ್ತಿ ಕಾಣುತ್ತದೆ. ಶಾಂಖಾಯನ

ಪಿಂಗಳನು ಕೇವಲ ಸೂತ್ರಗಳನ್ನು ಕೊಟ್ಟು ಪಾಣಿನೀಯ ಅಷ್ಟಾಧ್ಯಾಯಿಯಂತೆ ಅವುಗಳನ್ನು ಎಂಟು ಅಧ್ಯಾಯಗಳನ್ನಾಗಿ ವಿಭಾಗಿಸಿರುತ್ತಾನೆ. ವೈದಿಕ ಛಂದಸ್ಸು, ತನುಮಧ್ಯಾ ಅಥವಾ ಆರು ಅಕ್ಷರಗಳ ವೃತ್ತ ಮೊದಲ್ಗೊಂಡು ಚಂಡವೃಷ್ಟಿಪ್ರತಾಪ ಅಥವಾ ಇಪ್ಪತ್ತೇಳು ಅಕ್ಷರಗಳ ದಂಡಕಪರ್ಯಂತ ಕೆಲವು ಲೌಕಿಕ ವೃತ್ತಗಳು, ವೈತಾಲೀಯಾದಿ ಕೆಲವು ಜಾತಿಗಳು, ಇವುಗಳ ವಿಚಾರವನ್ನು ಮಾಡಿರುತ್ತಾನೆ. ಉಳಿದ ವಿಚಾರವನ್ನು 'ಶೇಷಃ ಪ್ರಚಿತ ಇತಿ (೭–೩೫) ಎಂಬ ಒಂದೇ ಸೂತ್ರದಿಂದ ಮಾಡಿರುತ್ತಾನೆ. ಯಾವ ವೃತ್ತಗಳು ನಾಮ ನಿರ್ದೇಶದಿಂದ ಪ್ರಸಿದ್ಧವಾಗಿಲ್ಲದೆ ಪ್ರಯೋಗರೂಪದಿಂದ ತಿಳಿದುಬರುತ್ತವೆಯೊ, ಆ ವೃತ್ತಗಳ ಪರಾಮರ್ಶವನ್ನು ಗಾಥಾಪ್ರಕರಣದಲ್ಲಿ ಮಾಡಿದ್ದಾನೆ. ಆದರೆ ಪ್ರಾಕೃತ ಪದ್ಯಗಳ ವಿಚಾರವನ್ನು ಮಾಡಿರುವಂತೆ ಕಾಣುವುದಿಲ್ಲ. ಇವನ್ನು ಬಿಟ್ಟು ಇನ್ನಾವ ವೈದಿಕ ಛಂದಸ್ಸುಗಳ ವಿಚಾರವನ್ನು ಮಾಡಿಲ್ಲ.

ಪಿಂಗಳನು ಛಂದಃಶಾಸ್ತ್ರದಲ್ಲಿ ಮೊದಲನೆಯ ಸೂತ್ರಕಾರನೆಂದು ತೋರುತ್ತದೆ. ತ್ರ್ಯಕ್ಷರೀ ಗಣಗಳಿಗೆ ಮ-ಯ-ರ-ಸ-ತ-ಜ-ಭ-ನ-, ಮತ್ತು ಲಘು, ಗುರುಗಳಿಗೆ ಲ-ಗ ಸಂಜ್ಞೆಗಳನ್ನು ಕೊಟ್ಟು ಯತಿಸ್ಥಾನಗಳನ್ನು ತೋರಿಸುವುದಕ್ಕೆ ಸಮುದ್ರ, ಕಾಮಶರಾದಿ ಸಂಜ್ಞೆಗಳನ್ನು ಕೊಟ್ಟು, ವೃತ್ತಗಳ ಲಕ್ಷಣಗಳನ್ನು ಸೂತ್ರಬದ್ಧವನ್ನಾಗಿ ಮಾಡಿರುತ್ತಾನೆ. ಈ ಸೂತ್ರಗಳಿಂದ ವೃತ್ತದ ಅಕ್ಷರಗಳ ಸಂಖ್ಯೆ ಲ-ಗ ಕ್ರಮ ಮತ್ತು ಯತಿ, ಇವುಗಳ ತಿಳಿವಳಿಕೆ ಸರಿಯಾಗಿ ಆಗುತ್ತದೆ. ಉದಾಹರಣೆ: "ಶಿಖರಿಣೀ ಯ್ಮೌನ್ಸೌ ಭ್ಲೌಗ್ ಋತು ರುದ್ರಾಃ." ಪಿಂಗಳನ ಪೂರ್ವದಲ್ಲಿ ಯತಿಯನ್ನೂ ಗಮನಿಸುತ್ತಿರಲಿಲ್ಲವೆಂಬುದರ ಅರ್ಥ, ಪಾದಾಂತರ್ಗತಯತಿಯನ್ನು ಗಮನಿಸುತ್ತಿರಲಿಲ್ಲವೆಂದು. ಪಾದಾಂತ್ಯಯತಿ ವಿಷಯದ ಪ್ರಶ್ನೆಯೇ ಏಳುವುದಿಲ್ಲ. ಆದ್ದರಿಂದ 'ಅತ್ರಪಾದಾಂತೆ ಯತಿಃ' ಎಂದು ಹಲಾಯುಧನು ಭಾಷ್ಯಮಾಡುವಾಗ ನಗು ಬರುವ ಹಾಗಿದೆ. ಪಾದಾಂತರ್ಗತ ಯತಿ ವಿಷಯದಲ್ಲಿ ಪಿಂಗಳನ ಮಾತುಗಳು ಅನೇಕ ಸ್ಥಳಗಳಲ್ಲಿ ಸೂಚಕವಾಗಿದ್ದರೂ ಆತನ ವಿವೇಚನೆಯಲ್ಲಿ ನಿಶ್ಚಿತಾರ್ಥವಿಲ್ಲ. ಗಜವಿಲಾಸಿತ, ವರತನು, ಶೈಲಶಿಖಾ, ಕೋಕಿಲಕ ಮುಂತಾದ ಕೆಲವು ವೃತ್ತಗಳಲ್ಲಿ ಆತನು ಹೇಳುವ ಯತಿಸ್ಥಾನಗಳು ಅಸ್ವಾಭಾವಿಕವಾಗಿ ಕಾಣುತ್ತವೆ. ಯತಿಪ್ರಕರಣದಲ್ಲಿ ಪಿಂಗಳನ ಮತ ಪ್ರಮಾಣವೆಂದು ಗ್ರಹಿಸಬೇಕಾಗಿಲ್ಲ.

---

ಶ್ರೌತಸೂತ್ರದ ಕೆಲವು ಭಾಗಗಳು, ನಿದಾನಸೂತ್ರ, ಋಕ್ ಪ್ರಾತಿಶಾಖ್ಯ, ಋಗ್ವೇದ ಯಜುರ್ವೇದಗಳಿಗೆ ಸಂಬಂಧಿಸಿದ ಕಾತ್ಯಾಯನನ ಅನುಕ್ರಮಣಿಗಳು ಇವುಗಳಲ್ಲಿ ಛಂದಸ್ಸಿಗೆ ಸಂಬಂಧಿಸಿದ ವಿಚಾರವಿದೆ. ವೇದಾಂಗ ಛಂದಸ್ ಎಂಬ ಗೌರವ ಇದಕ್ಕುಂಟು."—ಎ. ಬಿ. ಕೀತ್.

ಪಿಂಗಳನು ವೃತ್ತಗಳ ಕ್ರಮವನ್ನು ಚರಣಗಳ ಉದ್ದದ ಮೇಲೆ ನಿಶ್ಚಯಿಸಿರುವಂತೆ ಕಂಡುಬರುತ್ತದೆ. ಇದೇ ಪದ್ಧತಿ ಮುಂದೆ ಎಲ್ಲ ಸ್ಥಳದಲ್ಲಿಯೂ ಕಾಣುವುದು. ಆತನು ಕೇವಲ ಪ್ರಸಿದ್ಧ ವೃತ್ತಗಳನ್ನು ಸಂಗ್ರಹಮಾಡಿರುತ್ತಾನೆಂದು ಹೇಳುವುದಾದರೆ, ತತ, (೬-೪೩) ವಾಹಿನೀ, (೬-೪೨) ಮೊದಲಾದ ವೃತ್ತಗಳನ್ನೂ ಸಂಗ್ರಹಿಸಿರುತ್ತಾನೆ. ವಾಹಿನೀ ವೃತ್ತಕ್ಕಾದರೂ ಥಾಟಿಯೇ ಹತ್ತುವುದಿಲ್ಲ. ಅಶ್ವಘೋಷನು ಸೌಂದರನಂದ ಕಾವ್ಯದಲ್ಲಿ ಒಂದು ಸರ್ಗವನ್ನು ವಿಯೋಗಿನೀ ವೃತ್ತದಲ್ಲಿ ಬರೆದಿರುವುದೂ ಮತ್ತು ಕಾಳಿದಾಸನು ರಘುವಂಶ ಕಾವ್ಯದಲ್ಲಿ 'ರತಿವಿಲಾಪ' ಮತ್ತು 'ಅಜವಿಲಾಪ'ಗಳನ್ನು ಅದೇ ವೃತ್ತದಲ್ಲಿ ಬರೆದಿರುವುದೂ ಪಿಂಗಳನ ದೃಷ್ಟಿಗೆ ಬೀಳದೆ ಇರುವುದು ಆಶ್ಚರ್ಯವಾಗಿದೆ. ಇದೇ ರೀತಿ ಮಾಲಭಾರಿಣೀ ವೃತ್ತಪರಿಚಯವೂ ಇಲ್ಲವೆಂದು ತೋರುತ್ತದೆ. ನಾರಾಚಕ ಮತ್ತು ವಿಸ್ಮಿತಾ ವೃತ್ತಗಳ ಉದಾಹರಣೆಗಳು ಅನುಕ್ರಮವಾಗಿ ರಘುವಂಶ ಮತ್ತು ಶಿಶುಪಾಲವಧ ಕಾವ್ಯಗಳಲ್ಲಿ ಇದ್ದಾಗ್ಯೂ ಅವುಗಳನ್ನು ಗಾಥಾಪ್ರಕರಣದಲ್ಲಿ ಸೇರಿಸಿರುತ್ತಾನೆ.

ಶಾಸ್ತ್ರದಲ್ಲಿ ಒಂದು ಪಾರಿಭಾಷಿಕ ಸಂಜ್ಞೆಯಿಂದ ಒಂದೇ ವಿಷಯದ ತಿಳಿವಳಿಕೆಯಾಗಬೇಕು. ಮತ್ತು ಒಂದೇ ವಿಷಯಕ್ಕೆ ಅನೇಕ ಪಾರಿಭಾಷಿಕ ಸಂಜ್ಞೆಗಳು ಇರಕೂಡದೆಂಬ ಮೂಲನಿಯಮವನ್ನು ಪಿಂಗಳನು ಪಾಲಿಸಿಲ್ಲ. 'ವೃತ್ತ' ಎಂಬುದನ್ನು ಒಂದು ವೃತ್ತದ ಹೆಸರನ್ನಾಗಿ ಕೊಟ್ಟಿದ್ದಾನೆ. ಯಾವ ವೃತ್ತವನ್ನು ಆರನೆಯ ಅಧ್ಯಾಯದಲ್ಲಿ (೬-೩೬) ಚಂಚಲಾಕ್ಷಿಕಾ ಎಂದು ಕರೆದಿರುತ್ತಾನೆಯೊ ಅದೇ ವೃತ್ತವನ್ನು ಗಾಥಾ ಪ್ರಕರಣದಲ್ಲಿ (೮-೫) ಗೌರೀ ಎಂದು ಕರೆದಿರುತ್ತಾನೆ. ಮತ್ತೆ ಏಳನೆಯ ಅಧ್ಯಾಯದಲ್ಲಿ (೭-೪) ಗೌರೀ ಎಂಬ ಪ್ರತ್ಯೇಕ ವೃತ್ತವನ್ನು ಹೇಳುತ್ತಾನೆ. ಪಾರಿಭಾಷಿಕ ಸಂಜ್ಞೆಯನ್ನು ಪ್ರಬಲ ಕಾರಣವಿಲ್ಲದೆ ಬದಲಾಯಿಸಬಾರದು. ಆದರೆ ಯಾವ ವೃತ್ತವನ್ನು ಕಾಶ್ಯಪನು 'ಸಿಂಹೋನ್ನತಾ' ಎಂದು ಕರೆದಿರುವನೊ ಸೈತವನು 'ಉದ್ಧರ್ಷಿಣೀ' ಎಂದು ಕರೆದಿರುವನೊ ಅದಕ್ಕೆ ಪಿಂಗಳನು ವಸಂತತಿಲಕಾ ಎಂಬ ಹೆಸರನ್ನು ಏಕೆ ಕೊಟ್ಟಿರುತ್ತಾನೆಂಬುದಕ್ಕೆ ಕಾರಣ ಸಿಗುವುದಿಲ್ಲ.

ಮೂಲವೃತ್ತಗಳು ಹೇಗೆ ರಚಿಸಲ್ಪಟ್ಟವು, ಅವುಗಳಿಗೆ ಹೆಸರು ಹೇಗೆ ಇಡಲಾಯಿತು ಎಂಬುದನ್ನು ಪ್ರಾಚೀನತಮ ಮತ್ತು ಸುಪ್ರಸಿದ್ಧತಮ ಲೇಖಕರ ಹೆಸರೊಡನೆ ಉದಾಹರಣೆಗಳನ್ನು ಕೊಟ್ಟಿದ್ದರೆ ಬಹಳ ಉಪಯೋಗವಾಗುತ್ತಿತ್ತು. ಮುಖ್ಯವಾಗಿ ಪಿಂಗಳನು ಸೂತ್ರರಚನಾ ಕಾರ್ಯವನ್ನು ಬಿಟ್ಟು ಮುಂದೆ ಹೋಗಲಿಲ್ಲ. ಛಂದೋರಚನೆ ಎಂದರೆ ಸಾಮಾನ್ಯತಃ ಲಯಬದ್ಧ ಅಕ್ಷರರಚನೆ. ಈ ಮೂಲಭೂತವಾದ ಮಾತು ಆತನ ಧ್ಯಾನಕ್ಕೆ ಬರಲಿಲ್ಲವೆಂದು ತೋರುತ್ತದೆ. ಹದಿನಾಲ್ಕು ಲಘು ಮತ್ತು

ಒಂದು ಗುರು ಇವುಗಳಿಂದ ಕೂಡಿ ಆಗುವ ಒಂದೇ ಲಘು ಗುರುಗಳ ಆವಳಿಯಲ್ಲಿ ಯತಿ ಭೇದದಿಂದ ಮಣಿಗುಣನಿಕರ, ಚಂದ್ರಾವರ್ತಾ ಮತ್ತು ಮಾಲಾ ಈ ರೀತಿ ಯಾದ ಮೂರು ಭಿನ್ನವೃತ್ತಗಳು ಸಿದ್ಧವಾಗುತ್ತವೆ ಎಂಬ ಅಂಶ (7/11-13) ಆತನ ಧ್ಯಾನಕ್ಕೆ ಬಂದಿದ್ದರೂ ಈ ವೃತ್ತಗಳು ಅಷ್ಟಮಾತ್ರಕ, ಸಪ್ತಮಾತ್ರಕ ಮತ್ತು ಷಣ್ಮಾತ್ರಕ ಆವರ್ತನದಿಂದ ಭಿನ್ನಭಿನ್ನವಾಗುತ್ತವೆ ಎಂಬ ಕಲ್ಪನೆಯೂ ಆತನಿಗೆ ಹೊಳೆದಿಲ್ಲ. ಹೊಳೆದಿದ್ದರೆ ಆತನು ಮಾಡಿರುವ ಜಾತಿ ವಿಚಾರವು ಅಗಾಧವಾಗಿಯೂ ಶಾಸ್ತ್ರಶುದ್ಧವಾಗಿಯೂ ಆಗುತ್ತಿತ್ತು. ಆದರೂ ಪಿಂಗಳನು ಪ್ರಾಚೀನ ಮತ್ತು ಪ್ರಚಲಿತ ತ್ರಿಕಾವಲಂಬಿ ಸಂಪ್ರದಾಯದ ಸಂಸ್ಥಾಪಕನೊಬ್ಬನಾಗಿರುತ್ತಾನೆ.

ಪಿಂಗಳನ ಕಾಲವನ್ನು ನಿಶ್ಚಯಿಸುವುದು ಸಂಸ್ಕೃತಪಂಡಿತರ ಕೆಲಸ. ಗಾಥಾ ಪ್ರಕರಣದಲ್ಲಿ 'ಅತಿಶಾಯಿನೀ' ಮತ್ತು 'ವಿಸ್ಮಿತಾ' ವೃತ್ತಗಳ ಲಕ್ಷಣವು ಕಂಡು ಬರುತ್ತದೆ. ಈ ಹೆಸರುಗಳು ಅನುಕ್ರಮವಾಗಿ ಶಿಶುಪಾಲವಧ ಕಾವ್ಯದಲ್ಲಿ ೮-೧೧, ಮತ್ತು ೨೦-೭೪, ಶ್ಲೋಕಗಳಿಂದ ಸೂಚಿತವಾಗಿರಬೇಕೆಂದು ತೋರುತ್ತದೆ. ಇದನ್ನು ಒಪ್ಪುವುದಾದರೆ ಪಿಂಗಳನು ಮಾಘನ ತರುವಾಯ ಇದ್ದನೆಂದು ಹೇಳಬೇಕಾಗುತ್ತದೆ. ಆದರೆ ಇದು ಸರಿಯಾಗಿ ಕಾಣುವುದಿಲ್ಲ. ಸೂತ್ರಗಳ ಮಧ್ಯದಲ್ಲಿ ಇವುಗಳನ್ನು ಯಾರೋ ಇತ್ತೀಚೆಗೆ ಸೇರಿಸಿರಬೇಕೆಂದು ಊಹಿಸಲವಕಾಶವಿದೆ. ಹಲಾಯುಧನು ಕೊಟ್ಟಿರುವ ಎಲ್ಲ ಉದಾಹರಣೆಗಳ ಉಗಮ ಸಿಕ್ಕುವ ಪಕ್ಷಕ್ಕೆ ಪಿಂಗಳನ ಕಾಲವನ್ನು ನಿಶ್ಚಯಿಸಲು ಬಹು ಸಹಾಯವಾದೀತು.

## ಭರತನ ನಾಟ್ಯಶಾಸ್ತ್ರ

ನಾಟ್ಯಶಾಸ್ತ್ರದ ಕರ್ತನಾದ ಭರತಮುನಿಯ ಸಂಪ್ರದಾಯ ಪಿಂಗಳ ಸಂಪ್ರದಾಯದಿಂದ ಬೇರೆಯಾಗಿದೆ. ಭರತಮುನಿ ಈ ಭಿನ್ನಸಂಪ್ರದಾಯದ ಆದ್ಯ ಪ್ರವರ್ತಕನಲ್ಲದೇ ಇದ್ದರೂ ಪ್ರಾಚೀನ ಆಚಾರ್ಯರ ಗುಂಪಿಗೆ ಸೇರಿದವನು. ಈಗ ನಮಗೆ ಸಿಕ್ಕಿರುವ ನಾಟ್ಯಶಾಸ್ತ್ರದ ಆವೃತ್ತಿ ಅಶುದ್ಧವಾಗಿದೆ. ಅನೇಕ ಸ್ಥಳಗಳಲ್ಲಿ, ಇತ್ತೀಚೆಗೆ ಹೆಚ್ಚುಗೊಂಡದ್ದಾಗಿದೆ. ಉದಾಹರಣೆಗೆ ಮದನವತೀವೃತ್ತ ಕಾವ್ಯ ಮಾಲಾ (೪೬೮) ಆವೃತಿಯಲ್ಲಿ ಮಾತ್ರ ಇದೆ. ಚಿತ್ರವಿಲಾಸಿತ ವೃತ್ತ ಗಾಯಕವಾಡ ಪ್ರತಿಯಲ್ಲಿ (೬೦೯) ಮಾತ್ರ ಇದೆ. ಕಾವ್ಯಮಾಲಾ ಪ್ರತಿಯಲ್ಲಿ (೧೫-೩೨) ಶಾಲಿನೀ ವೃತ್ತದಲ್ಲಿ ಯತಿಯನ್ನು ಹೇಳಿಲ್ಲ. ಆದರೆ ಚೌಖಂಬಾ ಆವೃತಿಯಲ್ಲಿ (೧೬-೩೬) ಹೇಳಿದೆ. ಭರತನು ಯತಿಯನ್ನು ಗಮನಿಸದವರಲ್ಲಿ ಒಬ್ಬನು ಎಂದು ಸ್ವಯಂಭೂ ವಚನವಿದೆ. ಯತಿಯನ್ನು ಗಮನಿಸದೆ ಇರುವುದು ಪ್ರಾಕೃತ ಸಂಪ್ರದಾಯ ವಿರಬೇಕು. ಅವಿತಥಾದಿಗೇಯವೃತ್ತಗಳು ಯಾವಾಗ ಪ್ರಾಕೃತ ಕಾವ್ಯದ ಮೂಲಕ

ಪರಿಣತವಾಗಿ ಸಂಸ್ಕೃತದಲ್ಲಿ ಬಂದವೋ ಆಗ ಪಿಂಗಳ ಮುಂತಾದ ಛಂದಃಶಾಸ್ತ್ರ ಕಾರರಿಗೆ ಆ ವರ್ತನೆಯ ಕಲ್ಪನೆ ಇರಲಿಲ್ಲವಾದ್ದರಿಂದ ಅನೇಕ ತೊಡಕುಗಳು ಉಂಟಾದವು. ಅದೇ ಪ್ರಕಾರ ತ್ರ್ಯಕ್ಷರೀ ಗಣಗಳ ವಿವೇಚನೆ ನಾಟ್ಯಶಾಸ್ತ್ರದಲ್ಲಿ ಏಕೆ ಇರಬೇಕೊ ತಿಳಿಯುವುದಿಲ್ಲ. ಭರತನು ವೃತ್ತಲಕ್ಷಣವನ್ನು ಹೇಳುವಾಗ ಆ ಪರಿಭಾಷೆಯ ಉಪಯೋಗವನ್ನು ಮಾಡುವುದಿಲ್ಲ. ಆತನು ವೃತ್ತವಿಚಾರವನ್ನು ಎರಡು ಸ್ಥಳಗಳಲ್ಲಿ ಮಾಡುತ್ತಾನೆ. ಮೊದಲು ಸುಪರಿಚಿತವೃತ್ತಗಳ ವಿಚಾರವನ್ನು ೧೬ನೆಯ ಅಧ್ಯಾಯದಲ್ಲಿಯೂ ಅನಂತರ ಧ್ರುವಗಳ ನಿಮಿತ್ತದಿಂದ ಗೇಯವೃತ್ತಗಳ ವಿಚಾರವನ್ನು ೩೨ನೆಯ ಅಧ್ಯಾಯದಲ್ಲಿಯೂ ಮಾಡಿದ್ದಾನೆ. ೩೨ನೆಯ ಅಧ್ಯಾಯ ದಲ್ಲಿ ಆತನು ಪ್ರಾಕೃತ ಉದಾಹರಣೆಗಳನ್ನು ಕೊಡುತ್ತಾನೆ. ಆದರೆ ಪ್ರಾಕೃತ ಜಾತಿಗಳ ವಿಚಾರವನ್ನು ಸ್ವಲ್ಪವೂ ಮಾಡುವುದಿಲ್ಲ.

ವೃತ್ತಲಕ್ಷಣವನ್ನು ಹೇಳುವ ಭರತನ ಪದ್ಧತಿ ಕೇವಲ ಪ್ರಾಥಮಿಕ ಅವಸ್ಥೆಯ ದೆಂದು ಕಾಣುತ್ತದೆ. ಇದರಿಂದ ಭರತನು ಪಿಂಗಳನ ಹಿಂದೆ ಇದ್ದಿರಬೇಕೆಂಬ ಶಂಕೆ ಬರುತ್ತದೆ. ಇಷ್ಟು ಅಕ್ಷರಗಳುಳ್ಳ ಚರಣದಲ್ಲಿ ಅನುಕ್ರಮವಾಗಿ ಇಂಥ ಇಂಥ ಅಕ್ಷರ ಗುರು, ಉಳಿದವೆಲ್ಲ ಲಘು—ಈ ರೀತಿಯಾದ ಲಕ್ಷಣವನ್ನು ಒಂದು ಅಥವಾ ಎರಡು ಅನುಷ್ಟುಪ್ ಶ್ಲೋಕಗಳಲ್ಲಿ ಹೇಳಿರುತ್ತಾನೆ. ಉದಾಹರಣೆ:

ಆದ್ಯಾತ್ಪರಾಣಿ ಪಂಚೈವ ದ್ವಾದಶಂ ಸತ್ರಯೋದಶಂ |
ಅಂತ್ಯಂ ಸಪ್ತದಶೇ ಪಾದೇ ಶಿಖರಿಣ್ಯಾಂ ಗುರೂಣಿ ಚ ||

(ಭ. ನಾ. ೧೬-೭೬).

ಕೆಲವು ವೃತ್ತಗಳ ಲಕ್ಷಣಗಳು ಆಯಾ ವೃತ್ತಗಳಲ್ಲೆ ಗ್ರಥಿತವಾಗಿ ಕಂಡುಬರುತ್ತವೆ. ಈ ಸುಧಾರಣೆಯನ್ನು ಮೂಲದಲ್ಲಿ ಈಚೆಗೆ ಯಾರಾದರೂ ತಂದಿರಬೇಕೆಂದು ತೋರು ತ್ತದೆ. ಲಕ್ಷಣದ ಹಿಂದೆ ವೃತ್ತದ ಉದಾಹರಣೆಯನ್ನು ಕೊಟ್ಟು ಉದಾಹರಣೆಯ ನಾಲ್ಕನೆಯ ಚರಣದಲ್ಲಿ ವೃತ್ತದ ಹೆಸರು ಗ್ರಥಿತವಾಗಿ ಕಂಡುಬರುತ್ತದೆ.

ಮಹಾನದ್ಯಾಭೋಗೇ ಪುಲಿನಮಿವ ತೇ ಭಾತಿ ಜಘನಂ
ತಥಾಽಽಸ್ಯಂ ನೇತ್ರಾಭ್ಯಾಂ ಭ್ರಮರಸಹಿತಂ ಪಂಕಜಮಿವ |
ತನುಸ್ಪರ್ಶಶ್ಚಾಯಂ ಸುತನು ಸುಕುಮಾರೋ ನ ಪರುಷಃ
ಸ್ತನಾಭ್ಯಾಂ ತುಂಗಾಭ್ಯಾಂ ಶಿಖರಿಣಿನಿಭಾ ಭಾಸಿ ದಯಿತೆ ||

(ಭ. ನಾ. ೧೬-೭೭)

ಉದಾಹರಣೆಗಳು ಬಹುಶಃ ಶೃಂಗಾರಿಕವಾಗಿ ಇವೆ.

ಭರತನು ಕೊಟ್ಟಿರುವ ವೃತ್ತಗಳಲ್ಲಿ ಎರಡು ವೃತ್ತಗಳು ವಿಚಾರಣೀಯ. ಅವು ಗಳನ್ನು ಪಿಂಗಳನು ಕೊಟ್ಟಿಲ್ಲ. ಅವುಗಳಿಗೆ ಉದಾಹರಣೆಗಳು ಸಿಗುವುದು ಕಷ್ಟವಾಗಿ

ದ್ದರೂ ಸುಪ್ರಸಿದ್ಧ ವಾಙ್ಮಯದಲ್ಲಿ ಕಂಡುಬರುತ್ತವೆ. ಭಾಸನ ಪ್ರತಿಮಾನಾಟಕದಲ್ಲಿ (ಅಂಕ III ಶ್ಲೋಕ ೩) ಮೇಘಮಾಲಾ ವೃತ್ತಕ್ಕೆ ಉದಾಹರಣೆ ಇದೆ. ಅಶ್ವಘೋಷನ ಸೌಂದರನಂದ ಕಾವ್ಯದಲ್ಲಿ (೧೨-೪೩, ೧೩-೫೬) ಶರಭಲಲಿತಾ ವೃತ್ತಕ್ಕೆ ಎರಡು ಉದಾಹರಣೆಗಳು ದೊರೆಯುತ್ತವೆ. ಮತ್ತೆ ಸಿಂಹರೇಖಾವೃತ್ತವನ್ನು ಭರತನು ಹೇಳುತ್ತಾನೆ. ಪಿಂಗಳನು ಇದನ್ನು ಹೇಳಿಲ್ಲ. ಈ ವೃತ್ತಕ್ಕೆ ಉದಾಹರಣೆಯೆಂದರೆ ಮಹಾಭಾಷ್ಯದ (ಖಂಡ ೧, ಪೃ. ೫೦೨) ಎರಡು ಕಾರಿಕೆಗಳು. ಇಂದ್ರವಂಶಾ ವೃತ್ತವನ್ನು ಭರತನು ಕೊಡುವುದಿಲ್ಲ: ಇದೂ ವಿಚಾರಣೀಯ. ಆದರೆ ಇಂದ್ರವಂಶಾ ವೃತ್ತದ ರಚನೆಯೂ ಬಹಳ ಈಚೆಗೆ ಆದದ್ದು.

ಭರತನ ವಿಷಯದಲ್ಲಿ ಇನ್ನೂ ಒಂದು ಮಾತು ಚಿಂತನೀಯ. ಸುಪ್ರಸಿದ್ಧ ವೃತ್ತಗಳಾದ ಪ್ರಮಾಣಿಕಾ, ವಿದ್ಯುನ್ಮಾಲಾ, ದ್ರುತವಿಲಂಬಿತಾ, ಭುಜಂಗಪ್ರಯಾತ, ಸ್ರಗ್ವಿಣೀ, ರುಚಿರಾ, ಮಾಲಿನೀ, ಹರಿಣೀ, ಮಂದಾಕ್ರಾಂತಾ, ಪೃಥ್ವೀ ಮತ್ತು ಕುಸುಮಿತಲತಾವೇಲ್ಲಿತಾ, ಇವುಗಳಿಗೆ ನಾಟ್ಯಶಾಸ್ತ್ರದಲ್ಲಿ ಅನುಕ್ರಮವಾಗಿ ಮತ್ತಚೇಷ್ಟಿತ, ವಿದ್ಯುಲ್ಲೇಖಾ, ಹರಿಣೀಪ್ಲುತಾ, ಅಪ್ರಮೇಯಾ, ಪದ್ಮಿನೀ, ಪ್ರಭಾವತೀ, ನಾಂದೀಮುಖೀ ವೃಷಭಲಲಿತಾ, ಶ್ರೀಧರಾ, ವಿಲಂಬಿತಗತಿ ಮತ್ತು ಚಿತ್ರಲೇಖಾ ಈ ಹೆಸರುಗಳನ್ನು ಕೊಟ್ಟಿರುತ್ತಾನೆ. ಆದರೆ ಭರತನು ವಸಂತತಿಲಕಾ ಎಂಬ ಹೆಸರನ್ನು ಮಾತ್ರ ಗ್ರಾಹ್ಯವೆಂದು ಸ್ವೀಕರಿಸಿದ್ದಾನೆ. ಪ್ರಾಚೀನವಾದ ಹೆಸರ ಪೈಕಿ ಸಿಂಹೋನ್ನತಾ ಮತ್ತು ಉದ್ಧರ್ಷಿಣೀ ಈ ಹೆಸರುಗಳನ್ನು ಕೊಡುವುದಿಲ್ಲ.

## ವರಾಹ ಮಿಹಿರನ ಬೃಹತ್ಸಂಹಿತೆ

ವಿವಿಧ ವಿಷಯಾತ್ಮಕ ಗ್ರಂಥವಾದ ತನ್ನ ಬೃಹತ್ಸಂಹಿತೆಯ ೧೦೩ ನೆಯ ಗ್ರಹಗೋಚರವೆಂಬ ಅಧ್ಯಾಯದಲ್ಲಿ ವರಾಹಮಿಹಿರನು 'ಶ್ರುತಿಸುಖದವೃತ್ತ ಸಂಗ್ರಹ' ವನ್ನು ಮಾಡಿರುತ್ತಾನೆ. ವೃತ್ತವಿಚಾರವು ಈ ಅಧ್ಯಾಯದ ವಿಷಯವಲ್ಲ. ಆದರೆ ಪ್ರತಿಪಾದ್ಯ ವಿಷಯವನ್ನು ಸಹೇತುಕವಾಗಿ ವಿವಿಧ ವೃತ್ತದಲ್ಲಿ ಮುಂದಿಟ್ಟು ಆಯಾ ಶ್ಲೋಕದಲ್ಲಿ ವೃತ್ತಗಳ ಹೆಸರನ್ನು ಕೊಟ್ಟಿರುತ್ತಾನೆ.

'ಶಾರ್ದೂಲ ವಿಕ್ರೀಡಿತ' ವೆಂಬ ಹೆಸರು ಮಾತ್ರ ಸಂಪೂರ್ಣವಾಗಿ ಗ್ರಥಿತವಾಗಿಲ್ಲ. ವರಾಹಮಿಹಿರನು ಶಾರ್ದೂಲ ಎನ್ನುತ್ತಾನೆ. ಆದರೂ ಈ ವರಾಹಮಿಹಿರನ ವ್ಯಾಪಾರ ಆಶ್ಚರ್ಯಕಾರಕವಾಗಿದೆ, ಇದರಲ್ಲಿ ಸಂದೇಹವಿಲ್ಲ. ಯಾವ ವೃತ್ತಗಳಿಗೆ ಪಿಂಗಳನು ಪ್ರಮಾಣಿಕಾ, ದೋಧಕ, ವರತನು, ವಾತೋರ್ಮಿ, ಹರಿಣೀ, ಪೃಥ್ವೀ ಮತ್ತು ಅವಿತಥ ಎಂದು ಹೆಸರಿಟ್ಟಿದ್ದಾನೆಯೋ ಆ ವೃತ್ತಗಳಿಗೆ ಅನುಕ್ರಮವಾಗಿ ವರಾಹಮಿಹಿರನು ಸ್ಥಿರ, ದೋಧಕ, ಮಾಲತಿ, ಊರ್ಮಿಮಾಲಾ, ವೃಷಭ

ಚರಿತ, ವಿಲಂಬಿತಗತಿ ಮತ್ತು ಸರ್ಕುಟಕ ಎಂಬೀ ಹೆಸರುಗಳನ್ನು ಕೊಟ್ಟಿರುತ್ತಾನೆ. ವೃಷಭಚರಿತ ಮತ್ತು ವಿಲಂಬಿತಗತಿ ಈ ಎರಡು ಹೆಸರಿಗೆ ಮಟ್ಟಿಗೆ ಈತನು ಭರತ ಸಂಬಂಧಿಯಾಗುತ್ತಾನೆ. ಪಿಂಗಳನು ಹೇಳದೇ ಇರುವ ಪ್ರಸಭ, ಅನವಸಿತಾ ದ್ರುತ ಪದ, ಲಲಿತಪದಾ, ಲಕ್ಷ್ಮೀ ಮತ್ತು ಸಮುದವಿಲಾಸಿನೀ ಈ ಹೊಸ ವೃತ್ತಗಳನ್ನು ಕೊಟ್ಟಿರುತ್ತಾನೆ. ಗ್ರಂಥದ ಇತರ ಕಡೆಗಳಲ್ಲಿ ಕೊಟ್ಟಿರುವ ಮೋಟನಕ (ಬೃ. ಸಂ. ೪೬-೨೬), ಶುದ್ಧವಿರಾಟ್ (ಬೃ. ಸಂ. ೫೫-೩೮), ವಿದ್ಯುನ್ಮಾಲಾ (ಬೃ. ಸಂ. ೬೮-೨೨), ರುಕ್ಮವತೀ (ಬೃ. ಸಂ. ೬೩-೨) ಮತ್ತು ತೋಟಕ (ಬೃ. ಸಂ. ೪೬-೧೧) ಈ ವೃತ್ತಗಳ ಸಮಾವೇಶವನ್ನು ಈ ಅಧ್ಯಾಯದಲ್ಲಿ ಮಾಡಿರುವುದಿಲ್ಲ. ಅದೇ ಪ್ರಕಾರ ಬೃ. ಸಂ. ೩೩/೨೫/೨೮ ಈ ಶ್ಲೋಕಗಳು ಸುಕಾಮಿನೀ (|—ບ—ບ |—ບ—) ವೃತ್ತದಲ್ಲಿವೆ. ಬೃ. ಸಂ. ೩೩-೨೯, ೩೬-೮, ಈ ಎರಡು ಶ್ಲೋಕಗಳು [||ບບບບ——|ບບ———] ಈ ವೃತ್ತದಲ್ಲಿ ಇದ್ದು ಇದರ ಉಲ್ಲೇಖನವನ್ನು ಯಾವ ಛಂದಃಶಾಸ್ತ್ರಕಾರನೂ ಮಾಡಿಲ್ಲ. ದಂಡಕಕ್ಕೆ ಬೃ. ಸಂ. ಯಲ್ಲಿ ಮೂರು ಉದಾಹರಣೆಗಳು ಸಿಕ್ಕುತ್ತವೆ. (ಬೃ. ಸಂ. ೧೨/೬, ೮೮/೧, ೧೦೩/೬೧,) ಇದರಲ್ಲಿ ಮೂರನೆಯದಾದ ಸಾನಂದ ದಂಡಕದ ಒಂದೇ ಚರಣದಲ್ಲಿ ೧೦೨ ಅಕ್ಷರಗಳಿವೆ.[1] ವರಾಹಮಿಹಿರನ ಬೃಹಜ್ಜಾತಕದ ೨೩/೪. ಶ್ಲೋಕವು (——ບ—!ບບບບ—ບ—ບ——) ಈ ಅಭಿನವ ವೃತ್ತದಲ್ಲಿ ಕಂಡುಬರುತ್ತದೆ. ಈ ವೃತ್ತಕ್ಕೆ 'ಕೋಣೋದಯ'ವೆಂದು ಹೆಸರು. ಅದೇ ರೀತಿ (೨೮/೩) ಈ ಶಾಲಿನೀ ವೃತ್ತದ ಶ್ಲೋಕದ ('ಸಿಯಾರ್ಣಾಂ ಸ್ಯಾನ್ನಷ್ಟಜನ್ಮದೃಕಾಣಃ', ಎರಡನೆಯ ಚರಣದಲ್ಲಿ ಋಕಾರಯುಕ್ತ ವ್ಯಂಜನದ ಹಿಂದಿನ ಅಕ್ಷರಕ್ಕೆ ಗುರುತ್ವವು ಬಂದಿದೆ. ಈ ವಿಷಯವು ಚಿಂತನೀಯವಾದುದು.

## ಅಗ್ನಿಪುರಾಣ

ಅಗ್ನಿಪುರಾಣದ ೩೨೮–೩೩೪ನೆಯ ಅಧ್ಯಾಯಗಳಲ್ಲಿ ಛಂದೋವಿವೇಚನೆ ಇದೆ. ಪಿಂಗಳೋಕ್ತ ಪರಿಭಾಷೆಯ ಅವಲಂಬವಿದೆ. ವಿಶೇಷವೇನೂ ಇಲ್ಲ. ಮುದ್ರಿತ ಆವೃತ್ತಿಯಲ್ಲಿ ಅಶುದ್ಧ ಬಹಳ ಉಂಟು.

---

[1] ಅಥ ಬುಧಸ್ಯದಿನೆ ಯಾನಿ ಕಾರ್ಯಾಣಿಕ್ರಿಯಂತೇ ತಾನಿದಂಡಕ ಚತುರ್ಥಪಾದೇನಾಹ :— ಹರಿತಮಣಿ ಮಹೀಸುಗಂಧೀನಿ ವಸ್ತ್ರಾಣಿಸಾಧಾರಣಂ ನಾಟಕಂ ಶಾಸ್ತ್ರವಿಜ್ಞಾನಕಾವ್ಯಾನಿ ಸರ್ವಾ. ಕಲಾಮುಕ್ತಯೋ ಮಂತ್ರಧಾತುಕ್ರಿಯವಾದನೈಪುಣ್ಯಪುಣ್ಯವ್ರತಾಯೋಗದೂತಸ್ತ ಥಾಽಽಯುಷ್ಯಮಾಯಾನೃತ ಸ್ನಾನ ಹ್ರಸ್ವಾಣಿ ದೀರ್ಘಾಣಿ ಮಧ್ಯಾನಿ ಚ ಚ್ಛಂದತಶ್ಚಂಡವೃಷ್ಟಿ ಪ್ರಯಾತಾನುಕಾರೀಣಿ ಕಾರ್ಯಾಣಿ ಸಿಧ್ಯಂತಿ ಸೌಮ್ಯಸ್ಯ ಲಗ್ನೇಽಹ್ನಿವಾ ||

## ಕಾಳಿದಾಸನ ಶ್ರುತಬೋಧ

ಶ್ರುತಬೋಧ ಗ್ರಂಥದ ೨೦ನೆಯ ಅಂದರೆ ಇಂದ್ರ ವಜ್ರಾವಿಷಯದ ಶ್ಲೋಕವನ್ನು ಹಲಾಯುಧನು (ಪಿಂ. ೨೮) ಉದಾಹರಿಸಿರುತ್ತಾನೆ. ಇದರಿಂದ ಶ್ರುತಬೋಧವು ಹಲಾಯುಧಾನ ಹಿಂದೆ ಇದ್ದಿರಬೇಕು. ಈ ೪೨ ಶ್ಲೋಕಗಳ ಗ್ರಂಥಕರ್ತನಾದ ಕಾಳಿದಾಸನು ರಘುವಂಶಕಾರ ಕಾಳಿದಾಸನಲ್ಲ. ಈತನು ಪಿಂಗಳೋಕ್ತ ಪರಿಭಾಷೆಯನ್ನು ಉಪಯೋಗಿಸುವುದಿಲ್ಲ ಭರತನ ಪದ್ಧತಿಯನ್ನು ಅನುಸರಿಸುತ್ತಾನೆ. ಆದರೆ ವೃತ್ತಲಕ್ಷಣವನ್ನು ಅನುಷ್ಟುಪ್ ಶ್ಲೋಕದಲ್ಲಿ ಹೇಳದೆ ಆ ವೃತ್ತಗಳಲ್ಲೇ ಕೊಡುತ್ತಾನೆ. ಮತ್ತು ಯತಿಯನ್ನೂ ಕುರಿತು ಹೇಳುತ್ತಾನೆ.

> ಯದಿ ಪ್ರಾಚ್ಯೋಹ್ರಸ್ವಃ ಕಮಲನಯನೇ ಪಂಚಗುರವ-
> ಸ್ತತೋ ವರ್ಣಾಃ ಪಂಚ ಪ್ರಕೃತಿ ಸುಕುಮಾರಾಂಗಿ ಲಘವಃ |
> ತ್ರಯೋಽನ್ಯೈಚೋಪಾಂತ್ಯಾಃ ಸುತನು ಜಘನಾಭೋಗಸುಭಗೇ
> ರಸೈರುದ್ರೈರ್ಯಸ್ಯಾಂ ಭವತಿ ವಿರತಿಃ ಸಾ ಶಿಖರಿಣೀ
>
> (ಶ್ರು. ಬೊ. ೩೯)

ಯತಿ (ರಸೈರುದ್ರೈಃ) ಮಾತ್ರ ಪಿಂಗಳೋಕ್ತ ಪರಿಭಾಷೆಯಿಂದ ಹೇಳಿರುತ್ತಾನೆ. ಶ್ರುತಬೋಧದಲ್ಲಿ, ಪ್ರಮಾಣಿಕಾ, ರುಕ್ಮವತೀ, ಲಕ್ಷ್ಮೀ ಈ ವೃತ್ತಗಳಿಗೆ ಅನುಕ್ರಮವಾಗಿ ನಗಸ್ವರೂಪಿಣೀ, ಚಂಪಕಮಾಲಾ ಮತ್ತು ಪ್ರಭಾವತೀ ಎಂಬ ಹೆಸರುಗಳನ್ನು ಕೊಟ್ಟಿದ್ದಾನೆ. ಅಕ್ಷರಪಂಕ್ತಿ (—UU——) ಎಂಬ ಪಂಚಾಕ್ಷರೀ ಹ್ರಸ್ವ ವೃತ್ತವನ್ನೂ ಹೇಳಿರುತ್ತಾನೆ. ಶ್ರುತಬೋಧಕಾರನು ಜಾತಿಯ ವಿಷಯವನ್ನೇ ಪ್ರಸ್ತಾಪಿಸಿಲ್ಲ.

## ವಿರಹಾಂಕನ ವೃತ್ತಜಾತಿ ಸಮುಚ್ಚಯ

ಈ ಗ್ರಂಥವನ್ನು ಪ್ರೊ|| ಹರಿ ದಾಮೋದರ ವೇಲಣಕರ್ ಅವರು ಸಂಪಾದಿಸಿ, ಪ್ರಸ್ತಾವನೆ ಟೀಕೆಗಳೊಡನೆ ಪ್ರಕಾಶಪಡಿಸಿದ್ದಾರೆ. ಅವರ ಮತದಂತೆ ವಿರಹಾಂಕನ ಕಾಲ ಒಂಬತ್ತು ಅಥವಾ ಹತ್ತನೆಯ ಶತಮಾನ. ಗ್ರಂಥಕರ್ತನು ಪ್ರಾಕೃತ ಜಾತಿಗಳ ವಿಚಾರವನ್ನು ಪ್ರಾಕೃತದಲ್ಲೆ ಮಾಡಿರುತ್ತಾನೆ. ಐದನೆಯ ನಿಯಮದಲ್ಲಿ ಸಂಸ್ಕೃತದ ೫೦ ವೃತ್ತಗಳ ವಿವೇಚನೆಯನ್ನು ಸಂಸ್ಕೃತದಲ್ಲಿ ಮಾಡಿದ್ದಾನೆ. ಈತನು ಯತಿಯನ್ನು ಪಾಲಿಸುವುದಿಲ್ಲ. ತ್ರ್ಯಕ್ಷರೀ ಗಣಗಳ ಉಪಯೋಗವನ್ನು ಮಾಡುವುದಿಲ್ಲ. ಈತನು ಒಂದು ವಿಶಿಷ್ಟ ಪರಿಭಾಷೆಯನ್ನು ಯೋಜಿಸಿರುತ್ತಾನೆ. ವೃತ್ತಗಳ ಲಕ್ಷಣಗಳನ್ನು ಆಯಾ ವೃತ್ತಗಳಲ್ಲೇ ಹೇಳುತ್ತಾನೆ. ಉದಾಹರಣೆ:

ಸುರೇಂದ್ರೇಭಂ ಕರ್ಣಂ ಚರಣಪಟಹಂ ಚಂದ್ರವದನೇ
ಪ್ಪ (?) ಯಸ್ಮಿಂಲ್ಲಲಿತಗಮನೇ ಪಶ್ಯಸಿ ಪುನಃ |
ನಿಯುಕ್ತಂ ಕೇಯೂರಂ ಮರಕತಯುತಂ ಭಾವಸಹಿತಂ
ಧ್ವಜಶ್ಚಾಂತೇ ಯಸ್ಯಾ ಸುತನು ಕಥಿತಾ ಸಾ ಶಿಖರಿಣೇ ||

(ವಿ. ವೃ. ೫-೩೫)

ಸುರೇಂದ್ರೇಭ (ᴗ— —), ಕರ್ಣ (— —), ಚರಣ (—ᴗᴗ), ಪಟಹ (ᴗᴗᴗ), ಕೇಯೂರ (—), ಮರಕತ (—) ಭಾವ (ᴗᴗ), ಧ್ವಜ (ᴗ—) ಈ ಪರಿಭಾಷೆ ಗಳಿಂದ ವೃತ್ತಲಕ್ಷಣಗಳನ್ನು ತಿಳಿಸುತ್ತಾನೆ.

ಲಘುತಮ ವೃತ್ತಗಳಲ್ಲಿ ಗೌ (—) ಏಕಾಕ್ಷರೀ, ನೌ (— —) ದ್ವ್ಯಕ್ಷರೀ ವೃತ್ತಗಳನ್ನು ಕೊಟ್ಟಿರುತ್ತಾನೆ. ದಂಡಕವನ್ನೂ ಸಂಸ್ಕೃತ ವೃತ್ತದಲ್ಲಿ ಕೊಡುವುದಿಲ್ಲ. ನಾಲ್ಕನೆಯ ನಿಯಮದಲ್ಲಿ ಕೊಡುತ್ತಾನೆ. ಈತನು ಕೊಟ್ಟಿರುವ ಶ್ಲೋಕ (ವಿ. ವೃ. ೪-೮೬) ವ್ಯಾಲಕದಂಡಕವಾಗಿದೆ. ಉಪಜಾತಿಗೆ ಮಿಶ್ರವೆಂದು ಹೇಳುತ್ತಾನೆ. ವೃತ್ತಗಳಿಗೆ ಹೊಸ ಹೊಸ ಹೆಸರನ್ನು ಕೊಟ್ಟು ತೊಡಕುಗಳನ್ನು ಹೆಚ್ಚುಮಾಡುವ ಸ್ವಾತಂತ್ರ್ಯವನ್ನು ಈತನು ದೂರಮಾಡುವುದಿಲ್ಲ. ವಂಶಸ್ಥ, ಪ್ರಹರ್ಷಿಣೀ, ರುಚಿರಾ, ವೀರಲಲಿತಾ, ಸುವದನಾ ಈ ವೃತ್ತಗಳಿಗೆ ಅನುಕ್ರಮವಾಗಿ ವಸಂತಮಂಜರೀ, ಮಯೂರಪಿಚ್ಛ, ಸದಾಗತಿ, ಪ್ರಮುದಿತಾ, ಈ ಹೆಸರುಗಳನ್ನು ಕೊಡುತ್ತಾನೆ. ಶ್ಯಾಮಾ, ಗುರ್ವೀ, ಕುಸುಮ ಮತ್ತು ಹಯಲೀಲಾಂಗೀ ಈ ಹೊಸ ವೃತ್ತಗಳನ್ನು ಕೊಟ್ಟಿರುತ್ತಾನೆ.

ವಿರಹಾಂಕನು ದೋಹಾಜಾತಿಯನ್ನು ಇತರ ಛಂದಃ ಶಾಸ್ತ್ರಕಾರರಂತೆ ೧೩ ಮತ್ತು ೧೧ ಮಾತ್ರಗಳುಳ್ಳದ್ದನ್ನಾಗಿ ಗಣಿಸದೆ ೧೪ ಮತ್ತು ೧೨ ಮಾತ್ರಗಳುಳ್ಳದ್ದನ್ನಾಗಿ ಗಣಿಸುತ್ತಾನೆ. ಇದರಿಂದಲೇ ಪಾದಾಂತ್ಯದಲ್ಲಿ ಬರುವ ಲಘು ನೋಡುವುದಕ್ಕೆ ಲಘುವಾದರೂ ಉಚ್ಚರಿಸುವಾಗ ಗುರುವಾಗುತ್ತಾದ ಕಾರಣ ಈತನು ಅದನ್ನು ಗುರುವಾಗಿ ಪರಿಗಣಿಸುತ್ತಾನೆ.

## ಜಯದೇವಕೃತ ಛಂದೋವೃತ್ತಿ

ಛಂದೋವೃತ್ತಿ ಜಯದೇವನಿಂದ ರಚಿತವಾದುದು. ಇದರ ಮೇಲೆ ಹರ್ಷಟನ ವಿವೃತಿ ಇದೆ. ಈತನು ಯತಿವಾದಿ. 'ವಿರಾಮೊ ಯತಿರಿತಿ' ಎಂದು ಮೊದಲನೆಯ ಅಧ್ಯಾಯದ ಕೊನೆಯಲ್ಲಿ ಕೊಡುತ್ತಾನೆ. 'ನರ್ಕುಟಕ' ಎಂಬ ವೃತ್ತದ ಹೆಸರನ್ನು ಮೊದಲು ಜಯದೇವನು ಕೊಟ್ಟನೆಂದು ಹೇಮಚಂದ್ರನು ಹೇಳುತ್ತಾನೆ. ವಿರಹಾಂಕನೂ ಇದೇ ನರ್ಕುಟಕ ಹೆಸರನ್ನು ಕೊಡುತ್ತಾನೆ. ಆದ್ದರಿಂದ ಜಯದೇವನು

ವಿರಹಾಂಕನ ಪೂರ್ವದಲ್ಲಿ ಇದ್ದಿರಬೇಕೆಂದು ಪ್ರೊ|| ವೇಲಣಕರರ ಮತ. ಆದರೆ ನರ್ಕುಟಕ ಹೆಸರನ್ನು ವರಾಹಮಿಹಿರನೂ ಕೊಟ್ಟಿದ್ದಾನೆ. ಆದ್ದರಿಂದ ಜಯದೇವನು ವರಾಹಿಮಿಹಿರನ ಪೂರ್ವದಲ್ಲಿ ಇದ್ದನೆ ? ಹೇಮಚಂದ್ರನು 'ನರ್ಕುಟಕಮಿತಿ ಜಯದೇವಃ' ಇಷ್ಟುಮಾತ್ರ ಹೇಳುತ್ತಾನೆ. ಇದರಿಂದ ಜಯದೇವನೇ ನರ್ಕುಟಕ ಹೆಸರನ್ನು ಕೊಟ್ಟನೆಂದು ಹೇಳುವುದಿಕ್ಕಾಗುವುದಿಲ್ಲ.

## ಸ್ವಯಂಭೂಚ್ಛಂದ

ಈ ಗ್ರಂಥವನ್ನು ಪ್ರೊ|| ವೇಲಣಕರರು ಸಂಪಾದಿಸಿ ಪ್ರಕಾಶಪಡಿಸಿದ್ದಾರೆ. ಈ ಜೈನ ಛಂದಃಶಾಸ್ತ್ರಕಾರನು ೧೦ನೆಯ ಶತಮಾನದ ಪೂರ್ವಭಾಗದಲ್ಲಿ ಇದ್ದನೆಂದು ಹೇಳುತ್ತಾರೆ. ಪ್ರಾಕೃತ ಜಾತಿ ಮತ್ತು ಪ್ರಾಕೃತ ಕಾವ್ಯಗಳ ದೃಷ್ಟಿಯಿಂದ ಈ ಗ್ರಂಥದಲ್ಲಿ ಬಹಳ ಮಹತ್ವವಿದೆ. ದುರ್ದೈವದಿಂದ ಹಸ್ತಲಿಕಿತ ಪ್ರತಿಯ ಆದಿಭಾಗದ ಕೆಲವು ಪತ್ರಗಳು ಕಳೆದುಹೋಗಿರುವುದರಿಂದ ಅತಿಜಗತೀವರ್ಗದಲ್ಲಿ ರುಚಿರಾ ಮತ್ತು ಕನಕಪ್ರಭಾ (ಈ ವೃತ್ತವನ್ನು ಆತನು ನಂದಿನೀ ಎಂದು ಕರೆಯುತ್ತಾನೆ) ಈ ಎರಡು ವೃತ್ತಗಳನ್ನು ಬಿಟ್ಟರೆ ೧೪ ಅಕ್ಷರಗಳ ವೃತ್ತಪರ್ಯಂತ ಸರ್ವ ವೃತ್ತಗಳ ವೃತ್ತಾಂತವು ನಷ್ಟವಾಗಿದೆ. ಆದರೂ ಈತನು ಕೊಟ್ಟಿರುವ ವಿಷಮ, ಅರ್ಧಸಮ ಮತ್ತು ಸಮವೃತ್ತಗಳ ಸಂಖ್ಯೆ ಕಡಮೆ ಏನೂ ಇಲ್ಲ. ಮುಂದೆ ಹೇಮಚಂದ್ರನ ಛಂದೋನುಶಾಸನದಲ್ಲಿ ಕಂಡುಬರುವ ಎಷ್ಟೋ ಹೊಸ ವೃತ್ತಗಳು ಮೊದಲು ಸ್ವಯಂಭೂಚ್ಛಂದದಲ್ಲಿ ಕಂಡುಬರುತ್ತವೆ. ಈತನು ವೃತ್ತಲಕ್ಷಣವನ್ನು ಪ್ರಾಕೃತದಲ್ಲಿ ಹೇಳಿ ಹೆಸರನ್ನೂ ಪ್ರಾಕೃತದಲ್ಲಿ ಕೊಡುತ್ತಾನೆ. ಆದರೆ ವೃತ್ತದ ಲಕ್ಷಣವನ್ನು ಅದೇ ವೃತ್ತದಲ್ಲಿ ಕೊಡುತ್ತಾನೆ.

> ಪಢಾ ದೋಪಾ ಚಂಸೋ ಮಹುಲತಿ ಗುರೂ ಸವ್ವಪರಲಾ
> ಗಳಅರಂತೋ ಸೇಸೋ ಹುವಇ ಚಲಣೇ ಸಾ ಸಿಹರಿಣೀ
>
> (ಸ್ವ. ಛ. ೧-೫೬)

ಈ ಗ್ರಂಥದಲ್ಲಿ ಒಂದು ವಿಶೇಷವೇನೆಂದರೆ ವೃತ್ತಗಳ ಉದಾಹರಣೆಗಳನ್ನು ಈತನು ಸ್ವಯಂ ರಚಿಸದೆ ಕವಿಗಳು ರಚಿಸಿರುವ ಪ್ರಾಕೃತಕಾವ್ಯಗಳಿಂದ ಸಂಗ್ರಹಿಸಿ ಸಂಕ್ಷೇಪವಾಗಿ ಶ್ಲೋಕವು ಯಾವುದು, ಯಾರು ರಚಿಸಿದವರು, ಎಂಬುದನ್ನು ತಿಳಿಸುತ್ತಾನೆ. ಪಿಪೀಲಿಕಾ, ಮಾಲಾ, ಇತ್ಯಾದಿ ಕ್ಲಿಷ್ಟವೃತ್ತಗಳಲ್ಲಿ ಅನೇಕ ಕವಿಗಳು ಪದ್ಯಗಳನ್ನು ರಚಿಸಿರುವುದನ್ನು ನೋಡಿದರೆ ಪ್ರಾಕೃತ ಕಾವ್ಯವೈಚಿತ್ರ್ಯವು ಎಲ್ಲರಿಗೂ ಭಾಸವಾಗುತ್ತದೆ.

ಸ್ವಯಂಭುವೇ ಯತಿಯನ್ನು ಮಾನ್ಯಮಾಡುವುದಿಲ್ಲವಾದ್ದರಿಂದ ಯಾವ ಪಿಂಗಳನ ಅಪವಾಹಕ ವೃತ್ತವು ಯತಿದೃಷ್ಟ್ಯಾ ಭೃಂಗಾವರ್ತನೀ ಅಥವಾ ಷಣ್ಮಾತ್ರಕ ಆವರ್ತನವಾಗಿ ಕಂಡುಬರುತ್ತದೆಯೋ

[|---|ಟಟಟಟಟಟ|ಟಟಟಟಟಟ|ಟಟಟಟಟಟ|ಟಟ--|-]

ಅದೇ ಸ್ವಯಂಭೂ ಪ್ರಕಾರ ಪದ್ಮಾವರ್ತನೀ ಅಂದರೆ ಅಷ್ಟಮಾತ್ರಕ ಆವರ್ತನವಾಗಿ ಆಗುತ್ತದೆ.

[|---ಟಟ|ಟಟಟಟಟಟಟಟ|ಟಟಟಟಟಟಟಟ|ಟಟ---]

ಉದಾಹರಣೆ:

ಅವವಾಹಂ ಸುದ್ಧ ಸಹಾವಸ್ಸ.

ಫುಲ್ಲೋ ಲಾವಣಪಸರಿಅಪರಿಮಲಪರಿಪಿಹಿಅಸಅಲ ಭುಅಣಾಭೋಓ |
ಮಾಅದ್ಧುಗ್ಗಅಸುಮಣಸಕುವಲಅವಣಕಮಲಪಸರಿಅರಆ ವೋದೋ |
ಅಚ್ಛಂತಂ ಪಿಅಪರಹುಅಮುಹುಅರ ಮಹುರಅರರ ಇಅರವಸಂಗೀಓ |
ಅವ್ವೋ ಕಸ್ಸವ ಣ ಹರಇ ಮಣಹರ ಮಲಅಗಿರಿಸುರಹಿ ಸಿಹರುದ್ದೇಸೋ ||

## ಹಲಾಯುಧನ ವೃತ್ತಿ

ಪಿಂಗಳನ ಛಂದಃಸೂತ್ರದ ಮೇಲೆ ಹಲಾಯುಧನ ಮೃತಸಂಜೀವಿನೀ ವೃತ್ತಿ ಇದೆ. ಈತನು ೧೦ನೆಯ ಶತಮಾನದಲ್ಲಿ ಇದ್ದಿರಬೇಕು. 'ವರತನು ಸಂಪ್ರವದಂತಿ ಕುಕ್ಕುಟಾಃ' ಎಂಬ ಮಹಾಭಾಷ್ಯದ ಸ್ಫುಟಚರಣದ ಸಮಸ್ಯಾಪೂರ್ತಿ ಯಾವ ಶ್ಲೋಕದಲ್ಲಿ ಇದೆಯೋ ಮತ್ತು ಆ ಶ್ಲೋಕ ಕುಮಾರಪಾಲನದೆಂದು ಕ್ಷೇಮೇಂದ್ರನು ಯಾವುದನ್ನು ಹೇಳುತ್ತಾನೆಯೋ ಆ ಶ್ಲೋಕವನ್ನು ಹಲಾಯುಧನು ವರತನು ವೃತ್ತಕ್ಕೆ ಉದಾಹರಣೆಯನ್ನಾಗಿ ಕೊಟ್ಟಿದ್ದಾನೆ.

ಹಲಾಯುಧನು ಕಾಳಿದಾಸ ಮಾಘ ಇತ್ಯಾದಿ ಅನೇಕ ಕವಿಗಳ ಗ್ರಂಥಗಳಿಂದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಸ್ವಯಂಭೂ ಹೇಳುವಂತೆ ಉದಾಹರಣೆಗಳನ್ನು ಇಂಥಾ ಸ್ಥಳದಿಂದ ಸಂಗ್ರಹಿಸಿದ್ದೆಂಬುದನ್ನು ಹೇಳುವುದಿಲ್ಲ. ಶ್ಲೋಕಗಳನ್ನು ಸಂಗ್ರಹಿಸುವಾಗ ವೃತ್ತದ ಹೆಸರು ಎಲ್ಲಿಯಾದರೂ ಇದೆಯೆ? (ಶ್ಲೋಕದ ನಾಲ್ಕನೆಯ ಚರಣದಲ್ಲಿ ಮಾತ್ರವಲ್ಲ) ಎಂಬ ಈ ಒಂದೇ ಮಾತನ್ನು ಲಕ್ಷಿಸಿದನೆಂದು ತೋರಿಬರುತ್ತದೆ.

ಛಂದಃಸೂತ್ರಗಳ ಅನಂತರ ಕೆಲವು ಶತಮಾನಗಳಾದ ಮೇಲೆ ಹಲಾಯುಧನು ಈ ವೃತ್ತಿಯನ್ನು ಬರೆದನು. ಆದರೆ ಈ ಮಧ್ಯದಲ್ಲಿ ಯಾವ ಹೊಸ ವೃತ್ತಗಳು ರಚಿಸಲ್ಪಟ್ಟವೊ ಅವುಗಳನ್ನು ಸಂಗ್ರಹಮಾಡಿ ಪಿಂಗಳನ ವೃತ್ತಸಂಗ್ರಹಕ್ಕೆ ಪರಿಶಿಷ್ಟವನ್ನಾಗಿ ಜೋಡಿಸಿಲ್ಲ. ಗಾಥಾ ಪ್ರಕರಣದಲ್ಲಿ, ಶಿಶುಪಾಲವಧ ಕಾವ್ಯದ ಶ್ಲೋಕದಿಂದ

ಸೂಚಿತವಾದ ಅತಿಶಾಯಿನೀ ಮತ್ತು ವಿಸ್ಮಿತಾ ಈ ಎರಡು ವೃತ್ತಗಳ ಸಮಾವೇಶವಿದೆ. ಅದೇ ಕಾವ್ಯದ 'ಕುಟಜಾನಿ ವೀಕ್ಷ್ಯ ಶಿಖಿಭಿಃ ಶಿಖರೀಂದ್ರಂ' (ಶಿಶು. ೬-೭೩) ಶ್ಲೋಕದಿಂದ ಸೂಚಿತವಾಗುವ 'ಕುಟಜಾ' ವೃತ್ತ ಈ ಪ್ರಕರಣದಲ್ಲಿ ಏಕೆ ಸೇರಿಸಲ್ಪಡಲಿಲ್ಲವೆಂಬ ಶಂಕೆ ಹಲಾಯುಧನಿಗೆ ಬಾರದಿರುವುದು ಆಶ್ಚರ್ಯವಾಗಿದೆ.

ಪಿಂಗಳನು ಯತಿಯನ್ನು ಹೇಳದೆ ಇರುವ ಅನೇಕ ವೃತ್ತಗಳಲ್ಲಿ 'ಇತ್ಯಾಮ್ನಾಯಃ' ಎಂದು ಹಲಾಯುಧನು ಯತಿಯನ್ನು ಹೇಳುತ್ತಾನೆ. ಕುಮಾರಲಲಿತಾ ವೃತ್ತದಲ್ಲೇ ಯತಿಭೇದವೆಂದು ಹೇಳಿ 'ಇದಂವದನಪದ್ಮಂ' ಎಂಬ ಉದಾಹರಣೆಯನ್ನು ಕೊಟ್ಟು 'ದ್ವಾಭ್ಯಾಂ ಪಂಚಭಿಶ್ಚ ಯತಿಮಿಚ್ಛಂತಿ' ಎಂದು ಹೇಳುತ್ತಾನೆ. ವಸ್ತುತಃ ಪಿಂಗಳನು ಹೇಗೆ ಯತಿಭೇದದಿಂದ ಮಣಿಗುಣನಿಕರ, ಚಂದ್ರಾವರ್ತಾ, ಮಾಲಾ, ಎಂದು ವೃತ್ತಭೇದವನ್ನು ಮಾಡುತ್ತಾನೆಯೋ ಹಾಗೆಯೆ ವೃತ್ತಭೇದವನ್ನು ಹಲಾಯುಧನು ಪರಿಗಣಿಸಿ ಈ ವೃತ್ತಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಡುವ ಆವಶ್ಯಕತೆಯನ್ನು ಏಕೆ ಪ್ರತಿಪಾದಿಸಕೂಡದು ? ಹಾಗೆಯೆ ಶ್ರುತಬೋಧವು ಈತನಿಗೆ ಪರಿಚಿತವಾದ ಗ್ರಂಥವಾಗಿತ್ತು. ಯಾಕೆಂದರೆ, ಇಂದ್ರವಜ್ರಾ ವೃತ್ತಕ್ಕೆ ಕೊಟ್ಟಿರುವ ಮೂರು ಉದಾಹರಣೆಗಳೊಳಗೆ ಅದರಲ್ಲಿ ಮೊದಲನೆಯದು ಶ್ರುತಬೋಧದಲ್ಲಿ ಇದೆ. ಆದರೆ ಶ್ರುತಬೋಧಕಾರನು

ಇಂದ್ರಿಯಬಾಣೈರ್ಯತ್ರ ವಿರಾಮಾ
ಸಾ ಕಥನೀಯಾ ಚಂಪಕಮಾಲಾ (ಶ್ರುಬೊ. 15)

ಎಂದು ಹೇಳಿ ಯತಿಯನ್ನು ಹೇಳಿರುವಾಗ ಪಿಂಗಳನು ಏತಕ್ಕೆ ಯತಿಯನ್ನು ಹೇಳಲಿಲ್ಲವೆಂಬ ವಿಚಾರವನ್ನೇ ಹಲಾಯುಧನು ಮಾಡುವುದಿಲ್ಲ. "ಪಾದತಲೆ ಪದ್ಮೋದರಗೌರೇ" ಎಂದು ಹೇಳಿ ಯಾವ ಉದಾಹರಣೆಯನ್ನು ಹಲಾಯುಧನು ಕೊಡುತ್ತಾನೆಯೊ ಅದರಲ್ಲಿ ಯತಿಯನ್ನು ಪಾಲಿಸದೆ ಇರುವುದು ಒಂದು ಕಾರಣವಿರಬಹುದು.

(ಮುಂದುವರಿಯುವುದು)

ಕಾಲಗಿ. ಶೇಷಾಚಾರ್ಯ.

# ಶಕುಂತಲೆಯ ಕಥೆ

ಕಾಳಿದಾಸನು ತನ್ನ 'ಅಭಿಜ್ಞಾನ ಶಾಕುಂತಲ'ದ ಕಥೆಯನ್ನು ಭಾರತದಿಂದ ತೆಗೆದುಕೊಂಡನೆಂದೂ ಭಾರತದಲ್ಲಿಲ್ಲದ ಹಲವು ಕಲ್ಪನೆಗಳನ್ನು ಜೋಡಿಸಿ ಕಥೆಯನ್ನು ಬಹಳ ಚೆನ್ನಾಗಿ ಶೃಗಾರಗೊಳಿಸಿರುವನೆಂದೂ ಹೇಳುವುದು ವಾಡಿಕೆ. ಆದರೆ ಕಾಳಿದಾಸನ ನಾಟಕದಲ್ಲಿರುವ ಕೆಲವು ಸನ್ನಿವೇಶಗಳು ಶಕುಂತಲೆಯ ಕಥೆ ಬರುವ ಬೇರೆ ಕೆಲವು ಗ್ರಂಥಗಳಲ್ಲಿಯೂ ಇವೆ. ಪದ್ಮಪುರಾಣದಲ್ಲಿ ದೂರ್ವಾಸ ಶಾಪವೃತ್ತಾಂತ, ಅಂಗುಳೀಯಕದ ಸುದ್ದಿ, ಇವೆರಡೂ ಇವೆ. ಬೌದ್ಧ ಜಾತಕ ಕಥೆಯೊಂದರಲ್ಲಿ ಅಂಗುಳೀಯಕದ ಪ್ರಸ್ತಾಪವಿದೆ. ವಿಷ್ಣುಪುರಾಣದಲ್ಲಿ ದೂರ್ವಾಸ ಶಾಪವೃತ್ತಾಂತವಿದೆಯಾದರೂ ಉಂಗುರದ ಸುದ್ದಿಯಿಲ್ಲ. ಪದ್ಮಪುರಾಣ ಕರ್ತನು ಕಾಳಿದಾಸನ ನಾಟಕವನ್ನು ಅನುಸರಿಸಿಯೇ ಬರೆದಿದ್ದಾನೆಂದು ಹೇಳುವುದುಂಟು. ಆದರೆ ವೈದಿಕಮತಕ್ಕೆ ಸಂಬಂಧಪಟ್ಟ ಗ್ರಂಥಗಳೊಂದೊಂದರಲ್ಲಿ ಒಂದೊಂದು ರೀತಿಯಾಗಿರುವ ಈ ಕಥೆಯು ಬೌದ್ಧ ಜೈನ ಸಾಹಿತ್ಯಗಳಲ್ಲಿಯೂ ಇರುವುದರಿಂದಲೂ ಈ ಎಲ್ಲ ಗ್ರಂಥಗಳ ರಚನೆಯ ಕಾಲ ನಿಷ್ಕರ್ಷೆಯಾಗಿ ತಿಳಿಯದಿರುವುದರಿಂದಲೂ ಇದನ್ನು ಯಾರು ಯಾರಿಂದ ತೆಗೆದುಕೊಂಡರೆಂದು ನಿರ್ಣಯಿಸುವುದು ಸಾಧ್ಯವಲ್ಲ.

ಭಾಗವತದ ಒಂಬತ್ತನೆಯ ಸ್ಕಂಧದಲ್ಲಿ ಶಕುಂತಲಾದುಷ್ಯಂತರ ಪ್ರಣಯ ಕಥೆಯಿದೆ. ಆದರೆ ಇದು ಮಹಾಭಾರತದ ದುಷ್ಯಂತೋಪಾಖ್ಯಾನದಷ್ಟು ವಿಸ್ತಾರವಾಗಿಲ್ಲ; ಕೇವಲ ಹದಿನಾರು ಶ್ಲೋಕಗಳಲ್ಲಿಯೇ ಮುಗಿದುಹೋಗುತ್ತದೆ. ಭಾಗವತದಲ್ಲಿ ಶಕುಂತಲೆಯು ತನಗೆ ಮುಂದೆ ಹುಟ್ಟಬಹುದಾದ ಮಗನಿಗೆ ರಾಜ್ಯ ಕೊಡಬೇಕೆಂದು ಅರಸನ ಸಂಗಡ ಒಪ್ಪಂದಮಾಡಿಕೊಳ್ಳುವುದಿಲ್ಲ. ಇಲ್ಲಿ ಅವರ ಮದುವೆಗೆ ಪರಸ್ಪರ ಪ್ರೇಮವೇ ಕಾರಣ. ಆಶ್ರಮವಾಸಿನಿಯಾದ ಶಕುಂತಲೆಯು ಅತಿಥಿಯಾಗಿ ಬಂದ ದುಷ್ಯಂತನನ್ನು ಮೋಹಿಸಿದಳು. ಅರಸನೂ ಆಕೆಯನ್ನು ನೋಡಿದ ಮಾತ್ರದಿಂದಲೇ ಅನುರಾಗವಶನಾಗಿ "ಸ್ವಂ ಹಿ ವೃಣ್ವತೇ ರಾಜ್ಞಾಂ ಕನ್ಯಕಾಸ್ಸದೃಶಂ ವರಮ್' ಎಂದು ಕ್ಷತ್ರಿಯ ಕನ್ಯಕೆಯರಿಗೆ ಸ್ವಯಂವರದ ಹಕ್ಕಿದೆಯೆಂದು ಸೂಚಿಸಿ ಅವಳನ್ನೊಲಿಸಿಕೊಂಡು ಗಾಂಧರ್ವ ವಿಧಿಯಿಂದ ಮದುವೆಯಾಗುತ್ತಾನೆ. ಒಂದು ರಾತ್ರಿ ಅಲ್ಲಿದ್ದು ಅರಸನು ಮಾರನೆಯ ದಿನ ತನ್ನ ನಗರವನ್ನು ಸೇರಿದನು. ಗರ್ಭಿಣಿಯಾದ ಶಕುಂತಲೆಯು ಸಕಾಲದಲ್ಲಿ ಮಗನನ್ನು ಹೆತ್ತಳು. ಕಣ್ವಮಹರ್ಷಿಯು ಆ ಮಗುವಿಗೆ ಜಾತಕರ್ಮಾದಿಗಳನ್ನು ನಡೆಯಿಸಿದನು. ಕೆಲವು ವರ್ಷಗಳ ಮೇಲೆ

ಶಕುಂತಲೆಯು ತನ್ನ ಮಗನನ್ನು ಕರೆದುಕೊಂಡು ಅರಸನ ಬಳಿಗೆ ಹೋದಳು. ಆದರೆ ದೀರ್ಘಕಾಲವಾಗಿದ್ದುದರಿಂದ ನೆನಪಿಲ್ಲದೆ ಅರಸನು ಅವಳನ್ನು ಗುರುತಿಸದೆ ಇರಲು,

[1] "ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಸ್ಸ ಏವಸಃ
ಭರಸ್ವ ಪುತ್ರಂ ದುಷ್ಯಂತ ಮಾವಮಂಸ್ಥಾ ಶ್ಶಕುಂತಲಾಮ್
ರೇತೋಧಾಃ ಪಿತರಂ ಪುತ್ರೋ ನಯತ್ಯೇವ ಯಮಕ್ಷಯಾತ್
ತ್ವಂಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ"

ಎಂದು ಆಕಾಶವಾಣಿಯಾಯಿತು. ಈ ಮಾತುಗಳನ್ನು ಕೇಳಿ ಪರಿಹೃತಸಂಶಯನಾದ ದುಷ್ಯಂತನು ಶಕುಂತಲೆಯನ್ನು ಹೆಂಡತಿಯಾಗಿ ಸ್ವೀಕರಿಸಿದನು.

ಇದು ಭಾಗವತದಲ್ಲಿರುವ ಕಥೆ. ಇದರಲ್ಲಿಯೂ ಕಾಳಿದಾಸನ ನಾಟಕದಲ್ಲಿರುವ ದೂರ್ವಾಸಶಾಪ ವೃತ್ತಾಂತ, ಅಂಗುಳೀಯಕ ಕಥೆ ಮುಂತಾದ ಸಂಗತಿಗಳಿಲ್ಲ. ಆದರೆ ಭಾರತದಲ್ಲಿರುವ ಕೆಲವು ವಿಷಯಗಳೂ ಇದರಲ್ಲಿಲ್ಲ. ದುಷ್ಯಂತನು ಶಕುಂತಲೆಯನ್ನು ಮದುವೆಯಾದ ವಿಷಯ ತನಗೆ ಸ್ಮರಣೆಯಲ್ಲಿದ್ದರೂ ಕಣ್ವರ ಹೆದರಿಕೆಯಿಂದ ಅವರನ್ನು ಕರೆಸಿಕೊಳ್ಳಲಿಲ್ಲವೆಂದೂ ಅವರೇ ಇದಿರಿಗೆ ಬಂದಾಗ ಸಭೆಯಲ್ಲಿ ತನಗೆ ಅಪಮಾನವಾದೀತೆಂಬ ಹೆದರಿಕೆಯಿಂದ ಅವರನ್ನು ಅಂಗೀಕರಿಸಲಿಲ್ಲವೆಂದೂ ಭಾರತದಲ್ಲಿ ಹೇಳಿದೆ. ಇನ್ನು ರಾಜಸಭೆಯಲ್ಲಿ ದುಷ್ಯಂತ ಶಕುಂತಲೆಯರು ಒಬ್ಬರನ್ನೊಬ್ಬರು ಹೀಯಾಳಿಸುವ ಪ್ರಕರಣವೂ ಭಾಗವತದಲ್ಲಿಲ್ಲ. ಅಲ್ಲದೆ ಭಾರತದಲ್ಲಿ ಶಕುಂತಲೆಯು ಹಲವು ನೀತ್ಯುಪದೇಶಗಳನ್ನು ಬೇರೆ ಮಾಡುತ್ತಾಳೆ. ಭಾರತದಲ್ಲಿನ ಶಕುಂತಲೆಯ ಕಥೆಗೆ ಬೇರೆ ಬೇರೆ ಕಾಲಗಳಲ್ಲಿ ಹಲವು ಸಂಗತಿಗಳು ಸೇರಿಕೊಂಡಿವೆ. ದುಷ್ಯಂತೋಪಾಖ್ಯಾನದ ಬಹುಭಾಗ ಪ್ರಕ್ಷಿಪ್ತವೆಂದೇ ತೋರುತ್ತದೆ. ಆದರೆ ಮೇಲೆ ಹೇಳಿದ ಎರಡು ಶ್ಲೋಕಗಳು ಭಾಗವತದಲ್ಲಿ ಮಾತ್ರವೇ ಅಲ್ಲದೆ ಶಕುಂತಲೆಯ ಕಥೆ ಬರುವ ಇನ್ನೂ ಹಲವು ಗ್ರಂಥಗಳಲ್ಲಿ ಬರುತ್ತವೆ.[2] ಮಹಾಭಾರತದಲ್ಲಿಯೂ ಇವುಗಳನ್ನು ಅನುವಂಶಶ್ಲೋಕಗಳೆಂದು ಹೇಳಿದೆ. ಆದ್ದರಿಂದ ಈ ಶ್ಲೋಕಗಳು ಭಾರತ ಭಾಗವತಗಳಿಗಿಂತ ಮುಂಚೆಯೇ ಜನತೆಯಲ್ಲಿ ಪ್ರಚಾರದಲ್ಲಿದ್ದಿರಬೇಕೆಂದು ತೋರುತ್ತದೆ. ಈ ಊಹೆಗೆ ಉಪಷ್ಟಂಭಕವಾಗಿ ಶತಪಥ ಬ್ರಾಹ್ಮಣದಲ್ಲಿ ಶಕುಂತಲೆ ದುಷ್ಯಂತ ಮತ್ತು

[1] ದುಷ್ಯಂತ! ತಾಯಿಯು ಆಧಾರ ಮಾತ್ರ. ಯಾವನಿಂದ ಹುಟ್ಟುವನೋ ಅವನು ತಾನೇ. ಮಗನು ತಂದೆಗೆ ಸೇರಿದವನು. ಆದ್ದರಿಂದ ಮಗನನ್ನು ಸಂರಕ್ಷಿಸು. ಶಕುಂತಲೆಯನ್ನು ತಿರಸ್ಕರಿಸಬೇಡ. ವಂಶೋದ್ಧಾರಕನಾದ ಮಗನು ತಂದೆಯನ್ನು ನರಕದಿಂದ ರಕ್ಷಿಸುತ್ತಾನೆ. ಈ ಗರ್ಭವನ್ನಿಟ್ಟವನು ನೀನೇ. ಶಕುಂತಲೆ ಸತ್ಯವನ್ನಾಡಿದಳು.

[2] ವಿಷ್ಣುಪುರಾಣ, ಹರಿವಂಶ, ಪದ್ಮಪುರಾಣ, ವಾಯುಪುರಾಣ, ಮತ್ಸ್ಯಪುರಾಣ.

ಭರತರ ಹೆಸರುಗಳು ಬಂದಿವೆ. ಈಗ ಪ್ರಚಾರದಲ್ಲಿರುವ ರೂಪದಲ್ಲಿ ಅಲ್ಲದಿದ್ದರೂ ಶಕುಂತಲಾ ದುಷ್ಯಂತರ ಕಥೆ ಆವೇಳೆಗಾಗಲೇ ಹರಡಿತ್ತು.

ವೈದಿಕ ಗ್ರಂಥಗಳಲ್ಲಿಯೇ ಅಲ್ಲದೆ ಬೌದ್ಧ, ಜೈನ ಗ್ರಂಥಗಳಲ್ಲಿಯೂ ಈ ಕಥೆ ಹರಡಿತ್ತೆಂದು ತಿಳಿಯಲು ಕಾರಣವಿದೆ. ಬುದ್ಧನ ಜಾತಕ ಕಥೆಯೊಂದರಲ್ಲಿ ಶಕುಂತಲೆಯ ಕಥೆಯನ್ನು ಬಹಳಮಟ್ಟಿಗೆ ಹೋಲುವ ಒಂದು ಕಥೆಯಿದೆ. ವಾರಾಣಸಿಯ ಬ್ರಹ್ಮದತ್ತ ರಾಜನು ಒಂದುದಿನ ಪುರೋದ್ಯಾನದಲ್ಲಿ ವಿಹರಿಸುತ್ತಿರುವಾಗ ಒಬ್ಬ ಹೆಂಗಸು ಉದ್ಯಾನದ ಒಂದುಕಡೆ ಉಲ್ಲಾಸದಿಂದ ಹಾಡುತ್ತಾ ಸೌದೆಗಾಗಿ ಕಡ್ಡಿಗಳನ್ನು ಮುರಿಯುತ್ತಿದ್ದಳು. ಆ ಸಂಗೀತಕ್ಕೆ ಕಿವಿಸೋತು ಅರಸನು ಆ ಹೆಂಗಸನ್ನು ನೋಡಿದನು. ದರ್ಶನಮಾತ್ರದಿಂದಲೇ ಪ್ರೇಮಪರವಶನಾದ ಅರಸನು ಅವಳನ್ನು ಒಲಿಸಿಕೊಂಡು ಅವಳ ಸಹವಾಸ ಮಾಡಿದನು. ಅವಳು ಆಗ ತಾನು ಗರ್ಭವತಿಯಾದುದನ್ನರಿತು ಅರಸನಿಗೆ ಆ ಸಂಗತಿಯನ್ನು ಹೇಳಿದಳು. ಅರಸನು ಅವಳಿಗೆ ತನ್ನ ಮುದ್ರೆಯುಂಗರವನ್ನು ಕೊಟ್ಟು "ಹೆಣ್ಣು ಮಗುವಾದರೆ ಈ ಉಂಗುರವನ್ನು ಅದರ ಪೋಷಣೆಗಾಗಿ ವೆಚ್ಚಮಾಡು, ಗಂಡುಮಗುವಾದರೆ ಈ ಉಂಗುರವನ್ನೂ ಮಗುವನ್ನೂ ನನ್ನಲ್ಲಿಗೆ ತಾ" ಎಂದು ಹೇಳಿ ಹೊರಟುಹೋದನು.

ಕಾಲಕ್ರಮದಲ್ಲಿ ಆ ಹೆಂಗಸು ಗಂಡು ಮಗುವನ್ನು ಹೆತ್ತಳು. ಬೋಧಿಸತ್ವನೇ ಅವಳ ಮಗನಾಗಿ ಹುಟ್ಟಿದ್ದನು. ಆ ಮಗು ಸ್ವಲ್ಪ ವಯಸ್ಸಾಗಿ ಓಡಾಡುವ ಹಾಗಾದಾಗ ಅವನ ಜತೆಯ ಹುಡುಗರು ತಂದೆಯಿಲ್ಲದವನೆಂದು ಅಲ್ಲಗಳೆಯಲು ಅವನು ತನ್ನ ತಂದೆ ಯಾರೆಂದು ತಾಯಿಯನ್ನು ಕೇಳಿದನು. "ಮಗು, ನೀನು ವಾರಾಣಸಿಯ ದೊರೆಯ ಮಗ" ಎಂದು ಉತ್ತರ ಬಂತು. 'ಏನು ನಿದರ್ಶನ?' 'ಇಗೋ ಈ ಅಭಿಜ್ಞಾನಾಭರಣವನ್ನು ಅರಸನು ಕೊಟ್ಟಿದ್ದಾನೆ.' 'ಹಾಗಾದರೆ ತಂದೆಯಲ್ಲಿಗೆ ಹೋಗೋಣ ನಡೆ' ಹೀಗೆ ಮಗನ ಒತ್ತಾಯಕ್ಕೋಸ್ಕರವಾಗಿ ಅವಳು ಮಗನನ್ನು ಕರೆದುಕೊಂಡು ಉಂಗುರದೊಡನೆ ಅರಸನ ಬಳಿಗೆ ಹೋದಳು.

ಅರಸನಿಗೆ ಆ ಹೆಂಗಸಿನ ಪರಿಚಯ ನೆನಪಿಗೆ ಬಂದರೂ ಸಭೆಯಲ್ಲಿ ಇದನ್ನು ಒಪ್ಪಿಕೊಂಡರೆ ತನಗೆ ಅಪಮಾನವೆಂದು ಬಗೆದು ಅವನು ಒಪ್ಪಿಕೊಳ್ಳಲಿಲ್ಲ; ಅವರನ್ನು ತಿರಸ್ಕರಿಸಿದನು. ಅವಳ ನೆನಪೇ ತನಗಿಲ್ಲವೆಂದೂ ಆ ಉಂಗುರವೂ ತನ್ನದಲ್ಲವೆಂದೂ ಹೇಳಿಬಿಟ್ಟನು. ಆಗ ಆಕೆಯು ತನ್ನ ಮಾತನ್ನು ಸ್ಥಿರಪಡಿಸಲು ಇನ್ನೇನೂ ಮಾರ್ಗ ತೋರದೆ "ಮಹಾರಾಜ, ನನಗೆ ಇನ್ನು ಯಾವ ಸಾಕ್ಷ್ಯವೂ ಇಲ್ಲ. ದೇವರಿಗೆ ಮೊರೆಯಿಡುವುದೊಂದೇ ನನಗೆ ದಾರಿ. ಇಗೋ ಈ ಮಗುವಿಗೆ ನೀನು ತಂದೆಯಾದ ಪಕ್ಷಕ್ಕೆ ಈ ಮಗು ಅಂತರಿಕ್ಷದಲ್ಲಿ ನಿಲ್ಲಲಿ. ಇಲ್ಲದಿದ್ದರೆ ಕೆಳಗೆ ಬಿದ್ದು ಸಾಯಲಿ" ಎಂದು ಹೇಳಿ ತನ್ನ ಮಗುವನ್ನು ಮೇಲಕ್ಕೆ ಎಸೆದಳು.

ಬೋಧಿಸತ್ವನು ಅಂತರಿಕ್ಷದಲ್ಲಿ ಪದ್ಮಾಸನಸ್ಥನಾಗಿ ಕುಳಿತು ತಾನು ಆ ರಾಜನ ಮಗನೇ ಹೌದೆಂಬುದನ್ನು ಸಿದ್ಧಾಂತಪಡಿಸಿದನು. ಆಗ ಅರಸನು ಆ ಸತಿಪುತ್ರರನ್ನು ತನ್ನವರನ್ನಾಗಿ ಸ್ವೀಕರಿಸಿದನು. ಬ್ರಹ್ಮದತ್ತನ ತರುವಾಯ ಆ ಹುಡುಗನೇ ರಾಜನಾದನು. ಕಟ್ಟಿಗೆ ಹೊರುತ್ತಿದ್ದವಳ ಮಗನಾದ್ದರಿಂದ ಅವನಿಗೆ ಕಟ್ಠವಾಹನನೆಂದೇ ಹೆಸರಾಯಿತು (ಇದಕ್ಕೆ ಕಟ್ಠವಾಹನ ಜಾತಕವೆಂದೇ ಹೆಸರು).

ಈ ಕಥೆಯಲ್ಲಿ ಅಂಗುಳೀಯಕದ ವೃತ್ತಾಂತವಿದೆ. ಕಾಳಿದಾಸನ ನಾಟಕದಲ್ಲಿ ನಡೆದ ಹಾಗೆ ಇಲ್ಲಿ ಉಂಗುರ ಕಳೆದುಹೋಗುವುದಿಲ್ಲವಾದರೂ ಇದೂ ನಿಷ್ಫಲವಾಗುತ್ತದೆ—ಅರಸನು ಅದನ್ನು ತನ್ನದೆಂದು ಒಪ್ಪದಿದ್ದುದರಿಂದ. ಅರಸನು ತನಗೆ ನೆನಪಿದ್ದರೂ ಅಪಮಾನದ ಅಂಜಿಕೆಯಿಂದ ಹೆಂಗಸನ್ನು ಒಪ್ಪಿಕೊಳ್ಳದಿರುವ ಸಂಗತಿ ಭಾರತಕ್ಕೂ ಇದಕ್ಕೂ ಸಮಾನವಾಗಿದೆ. ಇದರಿಂದ ಶತಪಥಬ್ರಾಹ್ಮಣದ ಕಾಲಕ್ಕೆ ಈ ಕಥೆಯು ಪ್ರಚಾರದಲ್ಲಿದ್ದಿತೆಂದೂ ಮಹಾಭಾರತದ ವೇಳೆಗೆ ಜನಶ್ರುತಿಯಾಗಿದ್ದ ಆ ಕಥೆಯು ಭಾರತಕ್ಕೆ ಸೇರಿತೆಂದೂ ಊಹಿಸಬಹುದಲ್ಲದೆ ಆ ಕಥೆಯ ಆಧಾರದಿಂದಲೇ ಈ ಬೌದ್ಧಕಥೆಯೂ ಕಲ್ಪಿತವಾಯಿತೆಂದು ತೋರುತ್ತದೆ. ಕಾಳಿದಾಸನು ತನ್ನ ನಾಟಕಕ್ಕೆ ವಸ್ತುವನ್ನು ಭಾರತದಿಂದಲೇ ಆರಿಸಿಕೊಂಡಿದ್ದರೂ ಈ ಬೌದ್ಧಕಥೆಗೆ ಆಧಾರವಾದ—ಅಂಗುಳೀಯಕ ವೃತ್ತಾಂತವನ್ನೊಳಗೊಂಡ—ಜನಪದ ಸಾಹಿತ್ಯದ ಕಥೆಯನ್ನೂ ನೋಡಿರಬಹುದೆಂದು ಭಾವಿಸಿದರೆ ತಪ್ಪಾಗಲಾರದು.

ಪಾರ್ಶ್ವನಾಥ ಚರಿತ್ರೆಯಲ್ಲಿ ಕಾಳಿದಾಸನ ನಾಟಕದ ಕಥೆಯ ಹೋಲಿಕೆ ಬಹಳವಾಗಿ ಕಾಣುತ್ತದೆ. ನಮ್ಮ ಪದ್ಮಪುರಾಣದ ಕಥೆಯ ಹಾಗೆ ಇದೂ ಕಾಳಿದಾಸನ ನಾಟಕವನ್ನು ನೋಡಿ ಬರೆದಿದ್ದರೂ ಇರಬಹುದು. ಶಕುಂತಲಾ ದುಷ್ಯಂತರ ಪ್ರಣಯ ಕಥೆಯನ್ನು ಹೋಲುವ ಒಂದು ಉಪಾಖ್ಯಾನವಿದೆ. ಸುರಪುರದ ಅರಸು ಸುವರ್ಣಬಾಹು ಒಂದು ದಿನ ಒಂದು ಹೊಸ ಕುದುರೆಯನ್ನೇರಿ ವಿಹಾರಕ್ಕೆಂದು ಹೊರಟನು. ಆದರೆ ಆ ಕುದುರೆಗೆ ವಿಪರೀತ ಶಿಕ್ಷಣವನ್ನು ಕೊಟ್ಟಿತ್ತು[1]. ಅದು ಸುವರ್ಣಬಾಹುವನ್ನು ಹೊತ್ತುಕೊಂಡು ಹೋಗಿ ಯಾವುದೋ ಅಪರಿಚಿತವಾದ ಸರೋವರದ ಬಳಿ ನಿಂತಿತು. ಆ ಸರೋವರದ ಅಚ್ಛೋದಕದಲ್ಲಿ ಮಿಂದಮೇಲೆ ಅರಸನು ಅದರ ಪರಿಸರದಲ್ಲಿ ಹರಿಣಮಯವಾದ ಒಂದು ಋಷ್ಯಾಶ್ರಮವನ್ನು ಕಂಡನು. ಒಡನೆಯೇ ಅವನ ಬಲಗಣ್ಣು ಅದುರಿತು. ಈ ಶುಭಶಕುನದಿಂದ ತನ್ನ ಆಯಾಸವನ್ನು ಮರೆತು ಹರ್ಷಚಿತ್ತನಾದ ಸುವರ್ಣಬಾಹು ಮುಂದೆ ಹೋಗಲು ಆಶ್ರಮದಲ್ಲಿ ಲತೆಗಳಿಗೆ

---

[1] ಸಾಧಾರಣವಾದ ಅಶ್ವಶಿಕ್ಷೆಯ ವಿಪರ್ಯಾಸ. ಸವಾರನು ಕುದುರೆಯ ಸ್ವಭಾವವನ್ನು ತಿಳಿಯದೆ ಕಷ್ಟಪಡುತ್ತಾನೆ.

ನೀರೆರೆಯುವ ಕೆಲಸದಲ್ಲಿ ತೊಡಗಿದ್ದ, ಸಖೀಪರಿವೃತಳಾದ ಒಬ್ಬ ಸುಂದರ ಕನ್ಯೆಯನ್ನು ಕಂಡನು. ಅವಳು ರಂಭೆಗಿಂತ ಸುಂದರಿಯೆಂದೆನಿಸಿತು ಅರಸನಿಗೆ. ನಾಗ, ವಿದ್ಯಾಧರ, ಅಪ್ಸರಸ್ತ್ರೀಯರೆಲ್ಲರ ಸೌಂದರ್ಯದ ಸಾರವೇ ಆಕೆಯೆಂದು ತೋರಿತು. ಅರಸನು ಹೀಗೆ ಯೋಚಿಸುತ್ತಿರುವಾಗ ಆ ಕನ್ಯೆಯು ತನ್ನ ಗೆಳತಿಯೊಬ್ಬಳೊಡನೆ ಪುಷ್ಪಿತವಾದ ಲತಾ ಗೃಹವೊಂದನ್ನು ಹೊಕ್ಕಳು. ಅವಳನ್ನೇ ನೋಡುತ್ತಿದ್ದು ಆ ಸೌಂದರ್ಯ ಮುಗ್ಧ ನಾದ ಅರಸನು ಅವಳು ಸಾಮಾನ್ಯಳಾದ ಆಶ್ರಮವಾಸಿನಿಯಾಗಿರಧೆ ಯಾವುದೋ ರಾಜವಂಶದಲ್ಲಿ ಹುಟ್ಟಿದವಳಾಗಿರಬೇಕೆಂದು ಯೋಚಿಸುತ್ತಿದ್ದನು. ಆ ಸಮಯದಲ್ಲಿ ಒಂದು ದುಂಬಿಯ ಆ ರಮಣಿಯ ಮುಖಕ್ಕೆರಗಿತು. ಅವಳು ರಕ್ಷಣೆಗಾಗಿ ಕೂಗಿ ಕೊಳ್ಳಲು ಸಖಿಯರು "ಆಶ್ರಮರಕ್ಷಣೆ ಸುವರ್ಣಬಾಹು ರಾಜನಿಗೆ ಸೇರಿದ್ದು. ಆತನಿಗೆ ಮೊರೆಯಿಡು" ಎಂದು ಹೇಳಿ ಹಾಸ್ಯಮಾಡಿದರು. ಇಷ್ಟೇನೆಪ ಸಾಕೆಂದು ಅರಸನು ಮುಂದೆ ನುಗ್ಗಿ ಅವರಿಗೆ ಕಾಣಿಸಿಕೊಂಡು "ವಜ್ರನಾಭಸುತನು ರಾಜ್ಯಭಾರ ಮಾಡುತ್ತಿರುವಾಗ ಋಷ್ಯಾಶ್ರಮದಲ್ಲಿ ದೌರ್ಜನ್ಯನಡೆಸುವ ಸಾಹಸಿ ಯಾರು?" ಎಂದನು. ಆಗ ಸಖಿಯೊಬ್ಬಳು ಏನೂ ಪ್ರಮಾದ ನಡೆಯಲಿಲ್ಲವೆಂದೂ ದುಂಬಿ ಯೊಂದು ಆಕೆಯ ಮುಖಕ್ಕೆರಗಿತೆಂದು ಹೇಳುವ ಧೈರ್ಯಮಾಡಿ ಅರಸನ ಪರಿಚಯ ವನ್ನು ಕೇಳಿದಳು. ನಿಜಸ್ವರೂಪವನ್ನು ತಿಳಿಸಲು ಇಷ್ಟವಿಲ್ಲದೆ ತಾನು ರಾಜನಿಂದ ಆಶ್ರಮರಕ್ಷಣೆಗೆ ನಿಯಮಿತನಾದವನೆಂದು ಆತನು ಹೇಳಿಕೊಂಡನು. ಆದರೆ ಆ ರಮ ಣಿಯು ಅವನೇ ಅರಸನಿರಬೇಕೆಂದು ಊಹಿಸಿದಳು. ಆಮೇಲೆ ಅರಸನು ಆಕೆಯ ಪರಿಚಯಮಾಡಿಕೊಳ್ಳ ಬಯಸಲು ಆಕೆಯು ರತ್ನಪುರದ ವಿದ್ಯಾಧರ ರಾಜನಿಗೂ ಅವನ ಹೆಂಡತಿ ರತ್ನಾವಳಿಗೂ ಮಗಳಾದ ಪದ್ಮೆಯೇ ಅವಳೆಂದು ತಿಳಿಯಿತು. ಆ ರಾಜನ ಮರಣಾನಂತರ ಅವನ ಮಕ್ಕಳು ಜಗಳವಾಡಲು ರತ್ನಾವಳಿಯು ತನ್ನ ಚಿಕ್ಕ ಮಗ ಳನ್ನು ಕರೆದುಕೊಂಡು ಆ ಆಶ್ರಮಕ್ಕೆ ಬಂದಳು. ಆಕೆಯ ಅಣ್ಣ ಗಾಲವನೇ ಆ ಆಶ್ರಮದ ಕುಲಪತಿ. ಪದ್ಮೆಯು ಚಕ್ರವರ್ತಿ ಸುವರ್ಣಬಾಹುವಿಗೆ ಹೆಂಡತಿ ಯಾಗುವಳೆಂದೂ ಆ ಅರಸನು ವೈಪರೀತ್ಯಾಭಸ್ತವಾದ ಕುದುರೆಯನ್ನೇರಿ ಅಲ್ಲಿಗೆ ಬರುವನೆಂದೂ ಸಿದ್ಧಪುರುಷನೊಬ್ಬನು ಹಿಂದೆಯೇ ಭವಿಷ್ಯ ಹೇಳಿದ್ದನಂತೆ! ಈ ಸಂಗತಿ ತಿಳಿದು ಸುವರ್ಣಬಾಹು ಬಹಳ ಆನಂದಪಟ್ಟನು. ಈ ವೇಳೆಗೆ ಸರಿಯಾಗಿ ಅರಸನ ಬರವನ್ನು ತಿಳಿದ ಗಾಲವನೂ ಅಲ್ಲಿಗೆ ಬಂದು ಸುವರ್ಣಬಾಹುವಿಗೂ ಪದ್ಮೆಗೂ ಮದುವೆಮಾಡಿದನು. ಆಗ ಪದ್ಮೆಯ ಬಲತಮ್ಮನಾದ ಪದ್ಮೋತ್ತರನು ತನ್ನ ವಿದ್ಯಾಧರ ರಾಜಧಾನಿಯಾದ ವೈತಾಢ್ಯದಿಂದ ಬಂದು ಸುವರ್ಣಬಾಹು ತನ್ನೊಡನೆ ಬಂದು ವಿದ್ಯಾಧರ ರಾಜ್ಯಾಧಿಪತ್ಯವನ್ನು ವಹಿಸಿಕೊಳ್ಳಬೇಕೆಂದು ಕೇಳಿಕೊಂಡನು. ಅದರಂತೆ

ಪದ್ಮಾಸಮೇತನಾದ ಸುವರ್ಣಬಾಹುವು ಸ್ವರ್ಗಗಾಮಿಯಾದ ಒಂದು ಸುವರ್ಣ ರಥವನ್ನೇರಿದನು. ಪದ್ಮಳು ತಾಯಿಯ ಅಗಲಿಕೆಯನ್ನು ಸಹಿಸಲಾರದೆ ದುಃಖಿಸಲು ರತ್ನಾವಳಿ ಅವಳ ಮುಂದಿನ ವೈಭವವನ್ನು ವರ್ಣಿಸಿ ಪತಿಭಕ್ತಿಯ ಮಹಿಮೆಯನ್ನು ಉಪದೇಶಿಸಿ ಸಂತೈಸುವಳು. ಸುವರ್ಣಬಾಹು ವೈತಾಢ್ಯವನ್ನು ಸೇರಿ ವಿದ್ಯಾಧರಾಧಿಪತ್ಯವನ್ನು ವಹಿಸಿಕೊಂಡು ಅಲ್ಲಿ ಕೆಲವು ಕಾಲವಿದ್ದು ತರುವಾಯ ತನ್ನ ಸ್ವಂತ ನಗರವನ್ನು ಸೇರಿದನು.

ಕಾಳಿದಾಸನ ನಾಟಕದ ಕಥೆಗೆ ಹಿಂದೆ, ಮುಂದೆ, ಸುತ್ತ ನೆಲಸಿರುವ ಈ ಶಕುಂತಲಾ ಪ್ರಪಂಚ ಕೌತುಕವನ್ನುಂಟುಮಾಡುವಂಥಾದ್ದಾಗಿದೆ.

ಕೆ. ವೆಂಕಟರಾಮಪ್ಪ.

## ಆಕರಗಳು


ಭಾಗವತ: ಸ್ಕಂಧ ೯, ಅಧ್ಯಾಯ ೨೦.

ಭಾವದೇವಸೂರಿ: ಪಾರ್ಶ್ವನಾಥಚರಿತೆ, ಸರ್ಗ ೪.

Maurice Bloomfield: *The Life and Stories of the Jaina Saviour Parsvanatha*, pp. 104-107.

Cowell: *Jataka Stories: Kaṭṭhavahana Jataka.*

# ಭಾವಸ್ವರೂಪ ಮತ್ತು ರಸೋತ್ಪತ್ತಿ

ಮನಶ್ಶಾಸ್ತ್ರದಲ್ಲಿ ಭಾವಸಂಬಂಧವಾದ ವಿಷಯವನ್ನು ಚರ್ಚೆಮಾಡಿರುವಷ್ಟು ಬೇರೆ ಯಾವ ವಿಷಯವನ್ನೂ ಚರ್ಚೆಮಾಡಿರುವುದು ಅಪರೂಪ. ಅತಿ ಪುರಾತನ ಕಾಲದಿಂದಲೂ,— ಮಾನವನು ಭಾವದ ಬಿಸಿಯನ್ನು ಅನುಭವಿಸಿದಂದಿನಿಂದಲೂ — ಹಾಗೆ ಅನುಭವಿಸಿ, ಅದರ ಸ್ವರೂಪ, ಸಾರ್ಥಕ್ಯದ ವಿಷಯದಲ್ಲಿ ಕುತೂಹಲವನ್ನು ತೋರಿಸಿದಂದಿನಿಂದಲೂ, ಭಾವಕ್ಕೆ ಹೆಚ್ಚಿನದೊಂದು ಪ್ರಾಶಸ್ತ್ಯವು ದೊರಕಿದೆ. ಮನಶ್ಶಾಸ್ತ್ರವು ರೂಪುಗೊಂಡು, ಒಂದು ಶಾಸ್ತ್ರವಾಗಲು ಆರಂಭಿಸಿದಂದಿನಿಂದ ಮನಶ್ಶಾಸ್ತ್ರಿಗಳು ಭಾವಸಂಬಂಧವಾದ ವಿಷಯಗಳು ಬಹು ಮುಖ್ಯವಾದವುಗಳೆಂದು ಅರಿತಿರುವುದು ಕಂಡುಬರುತ್ತದೆ. ಆಧುನಿಕ ಮನಶ್ಶಾಸ್ತ್ರದಲ್ಲಿ, ಪ್ರಾಯೋಗಿಕ ಮನಶ್ಶಾಸ್ತ್ರದಲ್ಲಿ ಕೂಡ, ಭಾವದ ಸ್ಥಾನವು ಹಿರಿಮೆಯನ್ನು ಪಡೆದಿದೆ.

ಭಾವದ ವಿಷಯದಲ್ಲಿ ಅನೇಕ ತತ್ವಗಳನ್ನು ಪ್ರತಿಪಾದಿಸಿದ್ದಾರೆ. ಅವು ಅನೇಕವಾಗಿರುವುದರಿಂದಲೇ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ ಎಂಬುದು ವ್ಯಕ್ತವಾಗುತ್ತದೆ. ಈ ತತ್ವಗಳನ್ನು ಎರಡು ಪಂಗಡಗಳಾಗಿ ವಿಭಾಗಿಸಬಹುದು; (೧) ದೇಹಕೇಂದ್ರವಾದುವು, ಮತ್ತು (೨) ಮನಃಕೇಂದ್ರವಾದುವು. ದೇಹಕೇಂದ್ರ ತತ್ವಗಳಲ್ಲಿ ನಾವು ಸಾಧಾರಣವಾಗಿ ಕಾಣುವುದೇನೆಂದರೆ, ಭಾವದ ಸ್ವರೂಪದ ಅರಿವಾಗಬೇಕಾದರೆ ದೈಹಿಕವ್ಯಾಪಾರದ ವ್ಯತ್ಯಾಸಗಳನ್ನೇ ಪರಿಶೀಲಿಸಬೇಕೆಂಬ ಕಲ್ಪನೆ. ಮನಃಕೇಂದ್ರತತ್ವಗಳಾದರೋ, ಆ ಅರಿವೆಗೆ ಮನಸ್ಸಿನಲ್ಲಿ ಆಗುವ ವ್ಯತ್ಯಾಸಗಳನ್ನು ಪರಿಶೀಲಿಸಬೇಕೆಂದು ಹೇಳುವುವು. ಈ ಎರಡು ವಿಧವಾದ ತತ್ವಗಳ ಸ್ವರೂಪವನ್ನು ಈಗಾಗಲೇ ಮನಶ್ಶಾಸ್ತ್ರಿಗಳು ವಿಶದವಾಗಿ ಪ್ರತಿಪಾದಿಸಿದ್ದಾರೆ.

ಪ್ರಸಿದ್ಧನಾದ ಜೇಮ್ಸ್ ಎಂಬ ಮನಶ್ಶಾಸ್ತ್ರಿಯೂ ಮತ್ತು ಅದೇ ಸಮಯದಲ್ಲಿ ಲ್ಯಾಂಗೆ ಎಂಬ ದೇಹಶಾಸ್ತ್ರಜ್ಞನೂ, ಭಾವಸ್ವರೂಪದ ವಿಷಯದಲ್ಲಿ ನೂತನವಾದ ಒಂದು ತತ್ವವನ್ನು ಒಂದೇ ಕಾದಲ್ಲಿ ಪ್ರತಿಪಾದಿಸಿದರು. ಈ ತತ್ವವು ಜೇಮ್ಸ್-ಲ್ಯಾಂಗೆ ತತ್ವವೆಂದು ಮನಶ್ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ.

ಸಾಧಾರಣವಾಗಿ ಭಾವೋದ್ರೇಕವಾಗಬೇಕಾದರೆ ಯೋಗ್ಯವಾದ ಪ್ರಚೋದನ ವಸ್ತುವನ್ನು ನಾವು ಕಾಣಬೇಕು. ಹಾಗೆ ಪ್ರಚೋದಕವನ್ನು ಕಂಡಾಗ ಮೊದಲು ಭಾವವು ಮನಸ್ಸಿನಲ್ಲಿ ಉದ್ರೇಕವಾಗಿ ಬಳಿಕ ದೈಹಿಕವ್ಯಾಪಾರದಲ್ಲಿ ವ್ಯತ್ಯಾಸ

ವಾಗುವುದು ನಮ್ಮೆಲ್ಲರ ಅನುಭವ. ಉದಾಹರಣೆಗಾಗಿ, ನಾವು ಕಾಡಿನಲ್ಲಿ ಹೋಗುತ್ತಿದ್ದೇವೆಂದು ಇಟ್ಟುಕೊಳ್ಳೋಣ. ಆಗ, ಅಕಸ್ಮಾತ್ತಾಗಿ ಎದುರಿಗೆ ಕರಡಿಯೊಂದು ಬಂದರೆ, ಮೊದಲು ನಮಗೆ ಭಯವುಂಟಾಗುತ್ತದೆ. ಬಳಿಕ ಕೈಕಾಲು ನಡುಗುವುದು, ಗಂಟಲು ಬತ್ತಿಹೋಗುವುದು ಇವೇ ಮೊದಲಾದ ವ್ಯತ್ಯಾಸಗಳು ದೈಹಿಕವ್ಯಾಪಾರದಲ್ಲಿ ಕಂಡುಬರುವುವು. ಅಂದರೆ ಭಯದ ಅನುಭವದ ಪ್ರಸ್ತಾರವು ಈ ರೀತಿಯಾಗಿರುತ್ತದೆ— (೧) ಮೊದಲು ಪ್ರಚೋದಕ ವಸ್ತುವನ್ನು ಕಾಣುವುದು, (೨) ಆ ಮೇಲೆ ನಮ್ಮ ಮನಸ್ಸಿನಲ್ಲಿ ಭಾವೋದ್ರೇಕವುಂಟಾಗುವುದು, (೩) ಬಳಿಕ ದೈಹಿಕವ್ಯಾಪಾರದಲ್ಲಿ ವ್ಯತ್ಯಾಸಗಳು ಉಂಟಾಗುವುದು. ಈ ಪ್ರಸ್ತಾರಕ್ರಮವು ಸಾಧಾರಣವಾಗಿ ಎಲ್ಲರ ಅನುಭವದಲ್ಲಿಯೂ ಇದೆ.

ಆದರೆ ಜೇಮ್ಸ್—ಲ್ಯಾಂಗೆ ತತ್ವಕ್ಕೆ ಅನುಸಾರವಾಗಿ ಅನುಭವ ಪ್ರಸ್ತಾರದಲ್ಲಿ ಕ್ರಮ ವಿಪರ್ಯಯವಾಗಬೇಕು. ಅವರು ಹೇಳುವ ಪ್ರಕಾರ, ಮೊದಲು ಪ್ರಚೋದಕ ವಸ್ತುವನ್ನು ಕಾಣುತ್ತೇವೆ. ಆ ಮೇಲೆ ದೈಹಿಕವ್ಯಾಪಾರದಲ್ಲಿ ವ್ಯತ್ಯಾಸಗಳುಂಟಾಗುತ್ತವೆ. ಬಳಿಕ ಭಾವೋದ್ರೇಕವುಂಟಾಗುತ್ತದೆ. ಅಂದರೆ ಇವರ ಅಭಿಪ್ರಾಯಕ್ಕೆ ಅನುಸಾರವಾಗಿ, ಪ್ರಚೋದಕ ವಸ್ತುವನ್ನು ಕಂಡ ಒಡನೆ, ಆ ಅವಧಾನಕ್ಕೆ ಅನುಗುಣವಾಗಿ, ಮನಸ್ಸಿನ ಪ್ರಕ್ರಿಯೆಯು ಇಲ್ಲದೆಯೇ, ದೈಹಿಕವ್ಯಾಪಾರದಲ್ಲಿ ವ್ಯತ್ಯಾಸಗಳುಂಟಾಗುತ್ತವೆ. ಕರಡಿಯನ್ನು ಕಂಡ ಒಡನೆ ದೇಹದಲ್ಲಿನ ಮಾಂಸ ಭಿತ್ತಿಗಳಲ್ಲಿಯೂ ನಿರ್ನಾಳ ಗ್ರಂಥಿಗಳ ಕೆಲಸದಲ್ಲಿಯೂ, ದೇಹದ ಒಳಭಾಗದಲ್ಲಿರುವ ಅಂಗಾಂಗಳಲ್ಲಿಯೂ ವ್ಯತ್ಯಾಸವುಂಟಾಗುತ್ತವೆ. ಈ ವ್ಯತ್ಯಸ್ತ ವ್ಯಾಪಾರಗಳ ಅನುಭವವೇ ಭಾವಾನುಭವವೆಂದು ಜೇಮ್ಸ್ ಸ್ಪಷ್ಟವಾಗಿ ಹೇಳಿದ್ದಾನೆ.

ಜೇಮ್ಸ್—ಲ್ಯಾಂಗೆ ತತ್ವವನ್ನು ಈಚಿನ ಮನಶ್ಶಾಸ್ತ್ರಕಾರರಾರೂ ಸಂಪೂರ್ಣವಾಗಿ ಒಪ್ಪಿಲ್ಲ. ಪ್ರಯೋಗಬಲದಿಂದ ಷೆರಿಂಗ್‌ಟನ್ ಮತ್ತು ಕ್ಯಾನನ್ ಈ ತತ್ವವನ್ನು ಸಂಪೂರ್ಣವಾಗಿ ವಿರೋಧಿಸಿರುತ್ತಾರೆ. ದೈಹಿಕವ್ಯಾಪಾರಗಳ ವ್ಯತ್ಯಾಸಗಳು ಮೆದುಳಿಗೆ ಹೋಗದಂತೆ ಶಸ್ತ್ರಚಿಕಿತ್ಸೆಯನ್ನು ಮಾಡಿದ್ದರೂ, ಪ್ರಚೋದಕ ವಸ್ತುವನ್ನು ಕಂಡ ಒಡನೆ ಭಾವೋದ್ರೇಕವಾದ ಸಂದರ್ಭವನ್ನು ತೋರಿಸಿ ಷೆರಿಂಗ್‌ಟನ್ ಈ ತತ್ವವನ್ನು ವಿರೋಧಿಸಿದ. ಹಸಿವು, ಕೋಪ, ಭಯ ಈ ಭಾವಗಳು ಉದ್ರೇಕವಾದಾಗ ದೇಹದಾಂತರ್ಯದಲ್ಲಿ ಒಂದೇ ಮಾದರಿಯ ವ್ಯತ್ಯಾಸಗಳು ಆಗುವುದರಿಂದ ವಿಧವಿಧವಾದ ಭಾವಗಳಿಗೆ ಕಾರಣಗಳು ವಿಧವಿಧವಾದ ದೈಹಿಕ ವ್ಯಾಪಾರ ವ್ಯತ್ಯಾಸಗಳೆಂದು ಹೇಳುವುದು ಕಷ್ಟವೆಂದು ಕ್ಯಾನನ್ ಹೇಳುತ್ತಾನೆ.

ಬೆಷ್ಟೆರೆವ್ ಮತ್ತು ಹೆಡ್ ಇವರ ಪರಿಶೋಧನೆಗಳಿಗೆ ಅನುಸಾರವಾಗಿ ಭಾವದ

ಕೇಂದ್ರವು ಮೇರುದಂಡದ ಮೇಲಿರುವ ತಲಾಮಸ್ ಎಂದು ತಿಳಿಯಬರುತ್ತದೆ. ಇದೇ ಅಭಿಪ್ರಾಯವನ್ನು ಕ್ಯಾನನ್ ಸಹ ಪುಷ್ಟೀಕರಿಸುತ್ತಾನೆ. ತಲಾಮಸ್ಸಿನ ರಚನಾ ವಿಧಾನವನ್ನು ನೋಡಿದರೆ ಅಲ್ಲಿ ಭಾವಾನುಗುಣವಾದ ರಚನೆಯ ಪ್ರಭೇದಗಳೇನೂ ಕಂಡುಬರುವುದಿಲ್ಲ.

ಒಟ್ಟಿನಲ್ಲಿ ಹೇಳುವುದಾದರ ಜೇಮ್ಸ್-ಲ್ಯಾಂಗೆ ತತ್ವವನ್ನು ಈಗ ಯಾರೂ ಒಪ್ಪುವುದಿಲ್ಲ. ಆದರೆ ಇವರು ಮಾಡಿರುವ ಮಹದುಪಕಾರ ಒಂದಿದೆ. ತತ್ವಶಾಸ್ತ್ರದ ಮೋಹಕ್ಕೆ .ಒಳಪಟ್ಟ ಮನಶ್ಶಾಸ್ತ್ರವು ಮಾನವನ ವರ್ತನೆಯನ್ನೇ ಮುಖ್ಯವಾಗಿ ಪರೀಕ್ಷಿಸುವುದನ್ನು ಬಿಟ್ಟು, ದೇಹವನ್ನು ಮೂಲೆಗೆ ಒರಗಿಸಿ, ಮನಸ್ಸಿಗೇ ಹೆಚ್ಚು ಹೆಚ್ಚಾಗಿ ಪ್ರಾಮುಖ್ಯತೆಯನ್ನು ಕೊಡುತ್ತಿತ್ತು. ಹೀಗಾಗಿ ಮನುಷ್ಯನೆಂದರೆ ಮನಸ್ಸಿನ ಕೈಗೊಂಬೆಯೆಂಬ ಭಾವನೆಯು ತಲೆದೋರಿ, ಶರೀರಸಂಬಂಧವು ದೂರ ವಾಗುತ್ತಿತ್ತು. ಈ ಸಮಯದಲ್ಲಿ ಸರಿಯಾದ ಎಚ್ಚರಿಕೆ ಕೊಟ್ಟು ಮನಶ್ಶಾಸ್ತ್ರದಲ್ಲಿ ಶರೀರದ ಮೇಲ್ಮೆಯೂ ಉಂಟೆಂದು ತೋರಿಸಿಕೊಟ್ಟವರು ಜೇಮ್ಸ್ ಮತ್ತು ಲ್ಯಾಂಗೆ. ಹಿಂದಿನ ಮನಶ್ಶಾಸ್ತ್ರಿಗಳು ಚಿಂತನಾಮಾರ್ಗದ ಸಹಾಯದಿಂದ ಭಾವೋದ್ರೇಕ ವಾದಾಗ ಏನಾಗುವುದು ಎಂಬುದನ್ನು ಪರೀಕ್ಷಿಸುತ್ತಿದ್ದರು. ಇವರು ಹೆಚ್ಚು ಹೆಚ್ಚಾಗಿ ಮನಸ್ಸಿನ ವ್ಯಾಪಾರಗಳನ್ನೇ ಪರಿಶೀಲಿಸುತ್ತಾ ದೈಹಿಕವ್ಯಾಪಾರಗಳ ಕಡೆಗೆ ಲಕ್ಷ್ಯವನ್ನು ಬೀರದೆ ಅಸಂಪೂರ್ಣವಾದ ತತ್ವಗಳನ್ನು ನೇಯುವುದಕ್ಕೆ ಪ್ರಯತ್ನಪಡುತ್ತಿದ್ದರು. ಹೀಗೆ ಮಾಡುತ್ತಿದ್ದುದರಿಂದ ಭಾವಸ್ವರೂಪದ ವಿಷಯಗಳು ಹೆಚ್ಚು ಬೆಳಕಿಗೆ ಬರಲು ಅವಕಾಶವಿರಲಿಲ್ಲ. ಭಾವಸ್ವರೂಪದ ಅರಿವಿಗೆ ದೈಹಿಕ ವ್ಯಾಪಾರದ ವ್ಯತ್ಯಾಸಗಳ ಜ್ಞಾನವೂ ಆವಶ್ಯಕವೆಂದು ತೋರಿಸಿದ ಉಪಕಾರಿಗಳು ಜೇಮ್ಸ್ ಮತ್ತು ಲ್ಯಾಂಗೆ.

ಹೆನ್ರಿ ಪಿಯರಾನ್ ಎಂಬ ಮನಶ್ಶಾಸ್ತ್ರಿಯು ಹೇಳುವುದೂ ಸ್ವಲ್ಪ ಹಾಗೆಯೇ ಇದೆ. ಇವನ ಅಭಿಪ್ರಾಯದಲ್ಲಿ ಬೇರೆಬೇರೆ ಭಾವಗಳಿಗೆ ಅನುಸಾರವಾಗಿ ದೈಹಿಕ ವ್ಯಾಪಾರದಲ್ಲಿ ಬೇರೆಬೇರೆ ವ್ಯತ್ಯಾಸಗಳು ನಡೆಯುವುವು. ಅಂದರೆ ಭಾವಸ್ವರೂಪದ ತಿಳಿವಳಿಕೆ ನಮಗೆ ಆಗಬೇಕಾದರೆ ವಿಧವಿಧವಾದ ದೈಹಿಕ ವ್ಯಾಪಾರಗಳನ್ನು ಪರಿಶೀಲಿಸಿ ಅವುಗಳನ್ನೂ ಆಯಾಕಾಲದಲ್ಲಿ ಉದ್ರೇಕವಾಗುವ ಭಾವಗಳನ್ನೂ ಜೋಡಿಸಿ, ಒಂದಕ್ಕೊಂದನ್ನು ಗಂಟುಹಾಕಿ, ಕಾರ್ಯಕಾರಣ ಸಂಬಂಧವನ್ನೋ ಅಥವಾ ಇನ್ನು ಯಾವುದಾದರೂ ಸಂಬಂಧವನ್ನೋ ಹೊಂದಿಸಿಬಿಟ್ಟರೆ ಸರಿ. ಇದನ್ನು ನೋಡಿದರೆ, ಈ ವಿಷಯವು ಇಷ್ಟು ಸುಲಭಸಾಧ್ಯವೇ ಎಂದು ಅನುಮಾನ ಬರುತ್ತದೆ. ಬ್ರನ್ಸ್‌ವಿಕ್ ಪರೀಕ್ಷೆಮಾಡಿನೋಡಿ ಕರುಳುಗಳ ಮತ್ತು ಒಳ ಅಂಗಗಳ ವ್ಯಾಪಾರದಲ್ಲಿ ಭಾವಾನು

ಗುಣವಾಗಿ ಸ್ಪಷ್ಟವಾಗಿ ವ್ಯತ್ಯಾಸಗಳು ನಡೆಯುವುದು ಕಾಣುವುದಿಲ್ಲವೆಂದು ಅಭಿಪ್ರಾಯಪಡುತ್ತಾನೆ. ಪಿಯರಾಸಿಸ ಮತವನ್ನು ಒಪ್ಪುವುದು ಸಾಧ್ಯವಲ್ಲವೆಂದು ಬ್ರನ್ಸ್‌ವಿಕ್ ಪ್ರಯೋಗಬಲದಿಂದ ತೋರಿಸಿಕೊಟ್ಟಿದ್ದಾನೆ.

ಅಂದರೆ ದೇಹಶಾಸ್ತ್ರದ ದೃಷ್ಟಿಯಿಂದ ಕ್ಯಾನನ್, ಬ್ರನ್ಸ್‌ವಿಕ್, ಬೆಷ್ಟೆರೆವ್, ಹೆಡ್ ಮುಂತಾದವರು ತೋರಿಸಿರುವಂತೆ ಭಾವಸ್ವರೂಪದ ನಿರ್ಣಯಕ್ಕೆ ಸಹಾಯವು ಅಷ್ಟು ದೊರೆಯಲಾರದು. ದೈಹಿಕವ್ಯಾಪಾರಗಳ ಪರಿಶೀಲನೆಗಳ ದತ್ತಲಬ್ಧಗಳ ತಳಹದಿಯಮೇಲೆ ಭಾವಸ್ವರೂಪವನ್ನು ನಿರ್ದಿಷ್ಟಮಾಡುವುದು ಆಗದ ಕೆಲಸ.

ದೈಹಿಕವ್ಯಾಪಾರಗಳ ನೆಲಗಟ್ಟಿನ ಮೇಲೆಯೇ ಭಾವಸ್ವರೂಪದ ತತ್ವವನ್ನು ಕಟ್ಟುವುದು ನ್ಯಾಯವೂ ಅಲ್ಲ, ಸಾಧ್ಯವೂ ಅಲ್ಲ ಎಂದು ಷೆಪರ್ಡ್ ಅಭಿಪ್ರಾಯಪಟ್ಟಿರುತ್ತಾನೆ. ಸಾಧಾರಣವಾಗಿ ನರಗಳಲ್ಲಿ ಶಕ್ತಿಪ್ರವಹಿಸಿ, ಕೆಲಸ ನಡೆದಾಗಲೆಲ್ಲ ರಕ್ತನಾಳಗಳ ಕೊನೆಯಲ್ಲಿ ಅವು ಸಂಕುಚಿಸಿ, ನಾಡಿಯ ವೇಗವೂ ರಕ್ತದ ಒತ್ತಡವೂ ವ್ಯತ್ಯಾಸವಾಗುತ್ತವೆ. ಹೀಗಿರುವಾಗ ಭಾವೋದ್ರೇಕವುಂಟಾದಾಗ ರಕ್ತದ ಚಲನದಲ್ಲಿ ವ್ಯತ್ಯಾಸವಾಗಲೇಬೇಕು. ಈ ವ್ಯತ್ಯಾಸಗಳಿಗೆ ಅನುಗುಣವಾಗಿ, ಈ ವ್ಯತ್ಯಾಸಗಳನ್ನೇ ಮುಖ್ಯವೆಂದು ಭಾವಿಸಿ ಭಾವಭಿನ್ನತೆಯನ್ನು ಸ್ಪಷ್ಟಪಡಿಸುವುದು ಸಾಧುವಲ್ಲ. ಲ್ಯಾಂಡಿಸ್ ಮತ್ತು ಗ್ಯುಲೆಟ್ ವಿಧವಿಧವಾದ ಪ್ರಯೋಗಗಳನ್ನು ಮಾಡಿ, ಬಂದಿರುವ ತೀರ್ಮಾನವೂ ಹೀಗೆಯೇ ಇದೆ. ದೇಹಾಂತರ್ಯದಲ್ಲಿ ಸೂಕ್ಷ್ಮವಾದ ಅಂಗಾಂಗಗಳ ವ್ಯಾಪಾರದಲ್ಲಿ ವ್ಯತ್ಯಾಸಗಳು ಉಂಟಾಗುವುವು. ಮುಖಭಾವದಲ್ಲಿ ಬದಲಾವಣೆಯಾಗುವುದು. ಆದರೆ ಇವುಗಳನ್ನೇ ಅತಿ ಮುಖ್ಯವೆಂದು ಭಾವಿಸಿ ಭಾವಸ್ವರೂಪದ ನಿರ್ದಿಷ್ಟತೆಗೆ ಇವುಗಳಿಂದಲೇ ಸಹಾಯವನ್ನು ಪಡೆಯುವುದು ನ್ಯಾಯವಲ್ಲ.

ಪ್ರಾಯೋಗಿಕ ಮನಶ್ಶಾಸ್ತ್ರದಲ್ಲಿ ಭಾವದ ಬಿಸಿಯನ್ನು ಅಳೆಯುವ ಸಾಧನಗಳ ಉಪಯೋಗವಿದೆ. ಉಷ್ಣಮಾಪಕಯಂತ್ರದ ಸಹಾಯದಿಂದ ಉಷ್ಣಾಂಶವನ್ನು ಮಾತ್ರ ಅಳೆಯಬಹುದು; ಯಾವರೀತಿಯ ಜ್ವರವೆಂದು ಹೇಳುವುದು ಅಸಾಧ್ಯ. ಅದರಂತೆ ಭಾವೋದ್ರೇಕಮಾಪಕ ಯಂತ್ರಗಳಲ್ಲಿ ಮುಖ್ಯವಾದ ಸೈಕೋಗಾಲ್ವನೋಮೀಟರ್, ಸೈಕೋಟ್ಯಾಚೋಗ್ರಾಮ್ ಮುಂತಾದುವುಗಳಲ್ಲಿಯೂ ಸಹ ನಮಗೆ ಸಾಧ್ಯವಾಗಿರುವುದು ಭಾವದ ಉಲ್ಬಣತೆಯ ಬಿಸಿಯನ್ನು ಕಂಡುಹಿಡಿಯುವುದು. ಆದರೆ ಭಾವಸ್ವರೂಪವು ಮಾತ್ರ ಅರ್ಥವಾಗಿರುವುದಿಲ್ಲ. ಭಾವಸ್ವರೂಪದ ಅರಿವಿಗೆ ಯಾರಮೇಲೆ ಪ್ರಯೋಗಮಾಡುತ್ತಿರುವೆವೋ ಅವರನ್ನೇ ಕೇಳಿ ತಿಳಿದುಕೊಳ್ಳಬೇಕಾಗಿದೆ.

ಆದುದರಿಂದ ದೇಹಶಾಸ್ತ್ರದ ಬಲದಿಂದಲೂ ಪ್ರಯೋಗಗಳ ಬಲದಿಂದಲೂ ಭಾವಸ್ವರೂಪವನ್ನು ನಿರ್ದಿಷ್ಟಮಾಡುವುದು ಅಸಾಧ್ಯ. ಅಂದರೆ ದೇಹಕೇಂದ್ರ

ತತ್ವಗಳಿಂದ ನಮಗೆ ಅಷ್ಟು ಪ್ರಯೋಜನವಾಗುವಂತಿಲ್ಲ. ಭಾವಸ್ವರೂಪದ ಜ್ಞಾನಕ್ಕೆ ಬೇರೆ ಕಡೆ ನಾವು ತಿರುಗಬೇಕು.

ಮನಃಕೇಂದ್ರ ತತ್ವಗಳನ್ನು ಪರಿಶೀಲಿಸಿದರೆ ನಮಗೆ ಕಂಡುಬರುವ ವಿಷಯ ವಾದರೂ ಹೆಚ್ಚಿಲ್ಲ. ಭಾವದ ಉತ್ಪತ್ತಿಗೆ ಮನಸ್ಸೇ ಕಾರಣ — ಅದರ ಸ್ವರೂಪದ ಅರಿವಿಗೆ ಮನೋವ್ಯಾಪಾರಗಳ ಪರಿಶೀಲನೆಯೇ ಮುಖ್ಯ — ಎಂದು ಈ ತತ್ವಪಂಥಿಗಳು ಹೇಳುತ್ತಾರೆ. ಇವರುಗಳಲ್ಲಿ ಮುಖ್ಯರಾದ ಕೆಲವರ ಅಭಿಪ್ರಾಯಗಳನ್ನು ನೋಡೋಣ.

ಆಧುನಿಕ ಮನಶ್ಶಾಸ್ತ್ರ ಪ್ರಪಂಚದಲ್ಲಿ ಹೆಸರಾಂತ ಮನಶ್ಶಾಸ್ತ್ರಿ ಮೆಕ್‌ಡೂಗಲ್. ಹುಟ್ಟುಗುಣಗಳ ಮತ್ತು ಭಾವಗಳ ವಿಭಜನೆಯನ್ನು ಇವನಷ್ಟು ಸಮರ್ಪಕವಾಗಿ ಯಾರೂ ಮಾಡಿಲ್ಲ. ಈಚೆಗೆ ಮೆಕ್‌ಡೂಗಲ್ಲಿನ ವಿಭಜನೆಯಲ್ಲಿ ಬದಲಾವಣೆಗಳನ್ನು ಹಲವರು ಸಚಿಸಿರುವುದಾದರೂ, ಅವನ ಮತವನ್ನು ಅನುಮೋದಿಸಿರುವವರೇ ಹೆಚ್ಚು. ಆದುದರಿಂದ ಅವನ ಅಭಿಪ್ರಾಯವನ್ನೂ ನಾವು ಪರಿಶೀಲಿಸಬೇಕು.

ಮೆಕ್‌ಡೂಗಲ್ಲಿನ ಅಭಿಪ್ರಾಯಾನುಸಾರ, ಹುಟ್ಟುವಾಗಲೇ ಮನುಷ್ಯನಲ್ಲಿ ಕೆಲವು ಗುಣಗಳಿರುತ್ತವೆ. ಕೆಲವು ಶೈಶವದಲ್ಲಿಯೇ ವರ್ತನೆಯಲ್ಲಿ ಕಂಡುಬರಬಹುದು. ಇನ್ನು ಕೆಲವು ಪ್ರಕಾಶಕ್ಕೆ ಬರಲು, ದೇಹವು ಬೆಳೆದು ಸರಿಯಾದ ಯೋಗ್ಯತೆಯೂ ಅವಕಾಶವೂ ಬೇಕು. ಹುಟ್ಟಿದ ಶಿಶುವು ಹಸಿವಾದಾಗ ಅಳುವುದು, ಅವಲಂಬನ ಸಡಿಲವಾದರೆ ಬೆಚ್ಚುಬೀಳುವುದು, ಅಕಸ್ಮಾತ್ ಶಬ್ದವಾದರೂ ಬೆಚ್ಚುಬೀಳುವುದು. ಈ ಎರಡು ವರ್ತನೆಗಳೂ ಹುಟ್ಟುಗುಣಗಳು. ಇವುಗಳನ್ನು ಯಾರೊಬ್ಬರೂ ಶಿಶುವಿಗೆ ಹೇಳಿಕೊಡ ಬೇಕಾಗಿಲ್ಲ. ಮಗುವಿನಲ್ಲಿ ಪಿತೃದತ್ತವಾಗಿ ಬಂದ ಗುಣವೂ ಅದರ ದೇಹರಚನೆಯೂ ಹಾಗಿವೆ. ಅದಕ್ಕೆ ಅನುಗುಣವಾದ ಮನೋಬೋಧೆಯೂ ಇದೆ. ಆದುದರಿಂದ ಸನ್ನಿವೇಶದಲ್ಲಿ, ಪ್ರಚೋದಕಗಳಾಗಿ ಹಸಿವು, ಅವಲಂಬನ ನಿವಾರಣೆ ಇದ್ದಾಗಲೆಲ್ಲಾ, ಪ್ರತಿಕ್ರಿಯಾರೂಪವಾಗಿ ಶಿಶುವರ್ತನೆಯಲ್ಲಿ ಅಳುವುದು ಬೆಚ್ಚುಬೀಳುವುದೂ ಕಂಡು ಬರುತ್ತವೆ. ಶೈಶವದ ತೀರ ಪ್ರಾರಂಭದಲ್ಲಿ ನಮಗೆ ಕಂಡುಬರುವ ಹುಟ್ಟುಗುಣಗಳು ಇವೆರಡು. (ಇದರಲ್ಲಿ ಇನ್ನೊಂದು ವಿಷಯ :— ಸನ್ನಿವೇಶದಲ್ಲಿರುವ ಪ್ರಚೋದಕ ಗಳನ್ನು ಶಿಶುವು ಕಾಣುತ್ತದೆಯೇ? ಅಥವಾ ಮನಗಾಣುತ್ತದೆಯೇ? ಶೈಶವದ ವರ್ತನೆಯು ಪ್ರಾಣಿವರ್ಗದ ವರ್ತನೆಯನ್ನೇ ಹೆಚ್ಚಾಗಿ ಹೋಲುತ್ತದೆ. ಪ್ರಚೋದ ಕವು ಪ್ರತಿಬಿಂಬಿತವಾಗಿ ತಮ್ಮ ಕಣ್ಣಿನ ರೆಟಿನದ ಮುಖಾಂತರ ನರಗಳಲ್ಲಿ ಶಕ್ತಿ ರೂಪದಲ್ಲಿ ಉದ್ಭವಿಸಿ ಮೆದುಳಿಗೆ ಹೋಗುತ್ತದೆ. ಇಷ್ಟೇ ಸಾಕೆ? ಅಥವಾ ಹಾಗೆ ಮೆದುಳಿಗೆ ಹೋದ ಶಕ್ತಿಯು ಪುನಃ ವ್ಯತ್ಯಸ್ತವಾಗಿ, ನಾವು ಪ್ರಚೋದಕವನ್ನು ವಸ್ತುವನ್ನಾಗಿ ಮನಗಾಣುವುದಿಲ್ಲವೆ? ಮನಗಾಣದೆಯೇ ಭಾವವು ಉದ್ರೇಕವಾಗ

ಲಾರದೆಂದು ನಾವು ಈಗಾಗಲೇ ತಿಳಿದಿದ್ದೇವೆ.— ಶೈಶವದ ವರ್ತನೆಯು ಪ್ರಾಣಿವರ್ಗದ ವರ್ತನೆಯನ್ನೇ ಹೆಚ್ಚಾಗಿ ಹೋಲುತ್ತಿದ್ದರೂ ಅತಿಸ್ವಲ್ಪಕಾಲದಲ್ಲಿಯೇ ಭಾವದ ಬಿಸಿಯು ತಲೆದೋರಿ ವರ್ತನೆಯ ಅರ್ಥವೂ ಬದಲಾಯಿಸುತ್ತದೆ. *Indian Journal of Psychology*, 1936 ರಲ್ಲಿ ಈ ಲೇಖಕನು 'Evolution of the Instinct' ಎಂಬ ಲೇಖನದಲ್ಲಿ ಪ್ರತಿಪಾದಿಸಿರುವಂತೆ ಪ್ರಚೋದಕವನ್ನು ಮನಗಾಣುವ ಶಕ್ತಿ ಪಡೆದಂದಿನಿಂದ ಶಿಶುವನ್ನು ಮಾನವನೆಂದು ಭಾವಿಸಬೇಕು. ಭಾವಾನುಭವವು ಮುಂದೆ ಬರುವುದಾದರೂ ಅದರ ಪ್ರಾರಂಭವು ಮೃಗಾವಸ್ಥೆಯಲ್ಲಿ ಕಾಣಬಹುದಾದ ದೈಹಿಕವ್ಯಾಪಾರದಲ್ಲಿ ಸೂಚಿತವಾಗುವುದೆಂಬುದನ್ನು ನಾವು ಮರೆಯಬಾರದು. ಮಾನವಯೋಗ್ಯ ಅನುಭವಗಳಿಗೆ — ಅದರಲ್ಲಿಯೂ ಭಾವಾನುಭವಕ್ಕೆ — ದೈಹಿಕ ವ್ಯಾಪಾರವು ದೂರವೆಂದು ಕಂಡುಬಂದರೂ — ಈ ಅನುಭವಗಳ ಹುಟ್ಟೆಲ್ಲ ಮೃಗಾವಸ್ಥೆಯಲ್ಲಿಯೇ ಪ್ರಾರಂಭವಾಗಿದೆ. ಆದುದರಿಂದಲೇ ಹೆನ್ರಿ ಪಿಯರಾನ್, ಷೆಪರ್ಡ್ ಮುಂತಾದವರೆಲ್ಲ ಭಾವಸ್ವರೂಪವನ್ನು ತಿಳಿಯಬೇಕಾದರೂ ಅದು ಮೃಗಾವಸ್ಥೆಯಿಂದ ಮಾನವನವರೆಗೆ ಹೇಗೆ ಬೆಳೆದುಬಂದಿತೆಂಬುದನ್ನು ಪರಿಶೀಲಿಸಬೇಕೆಂದು ಹೇಳುವುದು.)

ಹುಟ್ಟುಗುಣಗಳಿಂದ ಪ್ರಾಣಿಗೆ ಬಹಳ ಪ್ರಯೋಜನವುಂಟು. ಪ್ರಾಣಿಯು ಸನ್ನಿವೇಶಕ್ಕೆ ಸರಿಯಾಗಿ ಹೊಂದಿಕೊಂಡು ಹೋಗಲು ಇವು ಸಹಾಯಕಗಳು. ಕಾಡಿನಲ್ಲಿರುವ ಜಿಂಕೆ, ಅಕಸ್ಮಾತ್ ಶಬ್ದವಾದೊಡನೆ ಭಯಪಟ್ಟು ಪಲಾಯನಮಾಡುವುದರಿಂದ ಆ ಶಬ್ದಮಾಡಿದ ಶತ್ರುವಿನ ಬಾಯಿಗೆ ತುತ್ತಾಗದೆ, ಆ ಸನ್ನಿವೇಶಕ್ಕೆ ಸರಿಯಾಗಿ ಹೊಂದಿಕೊಂಡು ಹೋಯಿತು. ಆದುದರಿಂದ ಆ ಸಮಯದಲ್ಲಿ ಪ್ರಚೋದಕವಾದ ಅಕಸ್ಮಾತ್ ಶಬ್ದವನ್ನು ಮನಗಂಡು, ಹುಟ್ಟುಗುಣಾನುಸಾರವಾಗಿ ಮರುಕ್ಷಣದಲ್ಲಿಯೇ ಪಲಾಯನಮಾಡಿ, ಬಂದ ವಿಪತ್ತಿನಿಂದ ಪಾರಾಗಿ, ಭಯೋತ್ಪಾದಕ ಸನ್ನಿವೇಶಕ್ಕೆ ಯೋಗ್ಯವಾದ ರೀತಿಯಲ್ಲಿ ಜಿಂಕೆಯು ಹೊಂದಿಕೊಂಡಿತು. ಈ ರೀತಿಯಲ್ಲಿ ಕೆಲಸಮಾಡುವುದು ಹುಟ್ಟುಗುಣ. ಹುಟ್ಟುಗುಣದ ಪ್ರಾರಂಭವು ಹೇಗೆಯೇ ಇರಲಿ ನಾವು ಮುಖ್ಯವಾಗಿ ಗಮನಿಸಬೇಕಾದುದು ಇದು:— ಶಿಶುವು ಜನಿಸುವಾಗಲೇ ಹುಟ್ಟುಗುಣಾನುಸಾರವಾಗಿ ಪ್ರತಿಕ್ರಿಯೆ ನಡೆಸುವ ಯೋಗ್ಯತೆಯನ್ನು ಹೊಂದಿರುತ್ತದೆ. ಯೋಗ್ಯ ಪ್ರಚೋದಕಾತ್ಮಕವಾದ ಸನ್ನಿವೇಶ, ದೈಹಿಕಸಂಪತ್ತಿ ಇವೆರಡು ದೊರೆತಾಗಲೆಲ್ಲಾ ವರ್ತನೆಯಲ್ಲಿ ಹುಟ್ಟುಗುಣದ ಕೈವಾಡವು ಕಂಡುಬರುತ್ತದೆ. ಆದರೂ ಅಂತಹ ಸಂದರ್ಭಗಳಲ್ಲಿ ಪ್ರತಿಯೊಂದರಲ್ಲಿಯೂ ಹುಟ್ಟುಗುಣಾನುಸಾರವಾಗಿ ವರ್ತನೆಯು ಬದಲಾಯಿಸಲೇಬೇಕೆಂದಲ್ಲ. ಆ ಸಂದರ್ಭದಲ್ಲಿ ಆ ರೀತಿಯಲ್ಲಿ

ಕೆಲಸಮಾಡಬೇಕೆಂಬ ತೀವ್ರವಾದ ಒತ್ತಾಯವು ಮನಸ್ಸಿಗೆ ಬೋಧವಾಗುತ್ತದೆ. ನಾಗರಿಕನ ನಡತೆಯಲ್ಲಿ ಅನೇಕವೇಳೆ ಈ ಒತ್ತಾಯವು ವರ್ತನೆಯಾಗಿ ಪರಿಣಾಮ ವಾಗದೇ ಇರಬಹುದು.

ಇದೆಲ್ಲವೂ ಹುಟ್ಟುಗುಣದ ವರ್ಣನೆ. ಮೆಕ್‌ಡೂಗಲ್ಲಿನ ಅಭಿಪ್ರಾಯವು ಇಲ್ಲಿಗೆ ನಿಲ್ಲಲಿಲ್ಲ. ಪ್ರತಿಸಲವೂ ಹುಟ್ಟುಗುಣಾನುಸಾರವಾಗಿ ವರ್ತನೆಯಲ್ಲಿ ವ್ಯತ್ಯಾಸವನ್ನು ನಡೆಯಿಸಬೇಕೆಂಬ ಮನೋಬೋಧೆಯಾದಾಗಲೆಲ್ಲ, ತದನುಗುಣವಾಗಿ ಭಾವೋ ದ್ರೇಕವೂ ಉಂಟಾಗಿ ಈ ಮನೋಬೋಧೆಯು ಬಲವಾದ ಒತ್ತಾಯವಾಗಿ ಪರಿ ಣಮಿಸುತ್ತದೆ. ಹೀಗೆ ಭಾವವು ಉದ್ರೇಕವಾದಾಗಲೆಲ್ಲ ಮನಸ್ಸಿನ ಮತ್ತು ದೇಹದ ವ್ಯಾಪಾರದಲ್ಲಿ ಅಲ್ಲೋಲಕಲ್ಲೋಲವಾಗುತ್ತದೆ. ಭಾವದ ಉದ್ರೇಕದ ಬಿಸಿಯೇ ಪ್ರಾಣಿಯ ವರ್ತನೆಯಲ್ಲಿ ವ್ಯತ್ಯಾಸವಾಗುವಂತೆ ಮಾಡುವುದು. ಹೀಗೆ ವ್ಯತ್ಯಸ್ತವಾದ ವರ್ತನೆಯು ನಡೆಯುತ್ತಿರುವವರೆಗೂ ಭಾವದ ಬಿಸಿ ಇಳಿದಿರುವುದಿಲ್ಲ. ಶಿಶುವಿಗೆ ಹಸಿವಾದರೆ ಅಳುವುದು. ಈ ಅಳುವೇ ಶಿಶುಗಳ ವರ್ತನೆಯಲ್ಲಿ ಕಂಡುಬರುವ ವ್ಯತ್ಯಾಸ. ಈ ಅಳುವೆಂಬ ಪ್ರತಿಕ್ರಿಯೆಗೂ ಪ್ರತಿಕ್ರಿಯೆಯನ್ನು ಮಾಡಬೇಕೆಂಬ ತೀವ್ರ ಮನೋಬೋಧೆಗೂ — ತದನುಗುಣವಾಗಿ ಕ್ಷುದಾ ಎಂಬ ಭಾವವು ಉದ್ರೇಕವಾಗಿ ಶಿಶುವಿನ ಮನಸ್ಸನ್ನೆಲ್ಲಾ ಆವರಿಸಿಕೊಂಡು ದೈಹಿಕವ್ಯಾಪಾರದಲ್ಲಿ ವ್ಯತ್ಯಾಸವನ್ನು ಉಂಟುಮಾಡುತ್ತದೆ. ಈ ಭಾವದ ಬಿಸಿಯು ಮಗುವು ಅಳುತ್ತಿರುವವರೆಗೂ — ಆ ಅಳುವಿನ ಫಲವಾಗಿ ಆಹಾರವು ದೊರಕುವ ವರೆಗೂ—ಆರದೇ ಇರುತ್ತದೆ. ಯಾವಾಗ ಪ್ರತಿಕ್ರಿಯೆಯು ಗುರಿಯು ಸಾಧಿಸಲ್ಪಡುತ್ತದೆಯೋ ಆಗ ಈ ವರ್ತನೆಯೂ ನಿಲ್ಲುತ್ತದೆ. ಭಾವದ ಬಿಸಿಯೂ ಆರಿ, ಭಾವವೂ ಹೋಗಿ, ಪುನಃ ಮೊದಲಿನಂತೆ ದೇಹ ಮನಸ್ಸಿನ ವ್ಯಾಪಾರವೆಲ್ಲವೂ ಸುಸೂತ್ರವಾಗಿ ನಡೆಯುತ್ತದೆ.

(ಮುಂದುವರಿಯುವುದು.)

ಎಸ್. ಎಸ್. ನಾರಾಯಣಶಾಸ್ತ್ರಿ.

---

Priority claim for the original views expressed in this contribution is laid by the author in 1936, in a short communication to the Indian Science Congress.

# ಭೌತಶಾಸ್ತ್ರದಲ್ಲಿ ಅನಿಶ್ಚಿತತ್ವವಾದ

**(The Theory of Indeterminacy)**

ಪ್ರತಿಯೊಂದು ಕಾರ್ಯಕ್ಕೂ ಒಂದು ಕಾರಣ ಉಂಟು ಎಂಬುದು ಅನುಭವ ಸಿದ್ಧ ವಿಷಯ. ಒಂದು ಕಲ್ಲನ್ನು ಒಂದು ಗಾಜಿನ ಕಿಟಿಕೆಯ ಮೇಲೆ ಎಸೆದರೆ ಗಾಜು ಚೂರು ಚೂರಾಗುವುದು. ಗಾಜು ಚೂರು ಚೂರಾಗುವುದು ಎಂಬ ಕಾರ್ಯಕ್ಕೆ ಕಲ್ಲನ್ನು ಎಸೆದುದೇ ಕಾರಣ. ಕಾರ್ಯವುಂಟಾಗಲು ಕಾರ್ಯಕ್ಕೆ ಪೂರ್ವದಲ್ಲಿ ನಿಯಮವಾಗಿ ಕಾರಣವು ಇದ್ದೇ ಇರಬೇಕು. ಇಷ್ಟು ಮಾತ್ರವೇ ಅಲ್ಲ; ಕಾರಣಕ್ಕೂ ಕಾರ್ಯಕ್ಕೂ ಒಂದು ವಿಧವಾದ ಸಂಬಂಧವೂ ಇರಬೇಕು. ರಾತ್ರಿಗೆ ಹಗಲು ನಿಯತವಾಗಿ ಪೂರ್ವಭಾವಿ. ಅಷ್ಟು ಮಾತ್ರದಿಂದಲೇ ರಾತ್ರಿಗೆ ಹಗಲು ಕಾರಣ ಎಂದು ಹೇಳಲು ಅಗುವುದಿಲ್ಲ. ಎರಡು ವಸ್ತುಸ್ಥಿತಿಗಳಲ್ಲಿ ಒಂದು ನಿಯಮವಾಗಿ ಪೂರ್ವಭಾವಿಯಾಗಿ ಅನಂತರ ಮತ್ತೊಂದು ವಸ್ತುಸ್ಥಿತಿಯು ನಿಯಮವಾಗಿ ಉತ್ಪನ್ನವಾದರೆ ಪೂರ್ವಭಾವಿಯಾದ ವಸ್ತುಸ್ಥಿತಿಯು ಕಾರಣವೆಂದೂ ಉತ್ತರಭಾವಿಯಾದ ವಸ್ತುಸ್ಥಿತಿಯು ಕಾರ್ಯವೆಂದೂ ಕರೆಯಲ್ಪಡುವುವು. ಉತ್ತರಭಾವಿಯಾದ ವಸ್ತುಸ್ಥಿತಿಯು ನಿಯಮವಾಗಿ ಉತ್ಪನ್ನವಾಗಲು ಆ ಎರಡು ವಸ್ತುಸ್ಥಿತಿಗಳಿಗೂ ಒಂದು ಸಹಜವಾದ ಅನಿಮಿತ್ತವಾದ ಸಂಬಂಧವಿರಬೇಕು. ಈ ಸಂಬಂಧವೇ ಕಾರ್ಯಕಾರಣ ಸಂಬಂಧ. ಕಾರ್ಯವನ್ನು ನುಡಿದರೆ ಅದು ಹೇಗೆ ಉಂಟಾಯಿತೆಂದು ಪ್ರಶ್ನೆಯು ತೋರುವುದು. ಹೀಗೆ ತೋರಲು ಕಾರ್ಯಕಾರಣಗಳಿಗಿರುವ ಸ್ವಾಭಾವಿಕ ಸಂಬಂಧದಲ್ಲಿ ಇರುವ ನಂಬಿಕೆಯೇ ಕಾರಣ. ಮಕ್ಕಳು ಹೇಗೆ ಏಕೆ ಎಂದು ಪ್ರಶ್ನಿಸುವುದಕ್ಕೂ ಇದೇ ಕಾರಣ. ವಿಜ್ಞಾನಿಗಳೂ, ತತ್ವಶಾಸ್ತ್ರಜ್ಞರೂ ವಿಚಾರಮಾಡುವುದೂ ಈ ಕಾರಣದಿಂದಲೇ. ಕಾರ್ಯಕಾರಣಗಳಿಗೆ ಸ್ವಾಭಾವಿಕವಾದ ಸಂಬಂಧವು ಇರುವುದೆಂದು ಎಲ್ಲರೂ ತಿಳಿದಿರುವರು. ಕಾರಣ ಸಂಪೂರ್ಣವಾಗಿ ಸಿದ್ಧವಾದರೆ ಕಾರ್ಯವು ಸಿದ್ಧಿಸಲೇಬೇಕು. ಕಲ್ಲನ್ನು ಗಾಜಿನಮೇಲೆ ಎಸೆದರೆ ಗಾಜು ಚೂರಾಗುವುದು ನಿಶ್ಚಯವೇ ಸರಿ. ಅದು ಚೂರಾಗುವುದನ್ನು ಪ್ರತಿಬಂಧಿಸಲು ಸಾಧ್ಯವಲ್ಲ. ಪ್ರತಿಬಂಧವಿದ್ದರೆ ಕಾರಣ ಸಂಪೂರ್ಣವಲ್ಲ ಎಂದು ತಿಳಿಯಬೇಕು. ಆದುದರಿಂದ ಕಾರಣದ ಸಂಪೂರ್ಣ ಜ್ಞಾನವು ಉಂಟಾದರೆ ಕಾರ್ಯದ ಜ್ಞಾನ ತಾನಾಗಿಯೇ ಉಂಟಾಗುವುದು. ಎಂದರೆ ಈಗ ನಡೆದ ವ್ಯಾಪಾರದ ಜ್ಞಾನವು ಮುಂದೆ ನಡೆಯುವ ವ್ಯಾಪಾರದ ಜ್ಞಾನಕ್ಕೆ ಸಾಧನೆ ಎಂದ ಹಾಗೆ ಆಯಿತು.

ಕಾರ್ಯಕಾರಣಸಂಬಂಧವನ್ನು ಬೇರೆ ರೀತಿಯಲ್ಲಿಯೂ ಅರ್ಥಮಾಡಿಕೊಳ್ಳ ಬಹುದು. ಒಂದು ವಸ್ತುವಿನ ಈಗಿನ ಸ್ಥಿತಿಯನ್ನು ತಿಳಿದರೆ ಅದರ ಮುಂದಿನ ಸ್ಥಿತಿ ಹೇಗಿರುವುದು ಎಂದು ಭವಿಷ್ಯ ಹೇಳಬಹುದು. ಕಾರ್ಯವು ಕಾರಣದಿಂದ ನಿರ್ಧರ ವಾಗಿರುವುದು. ವಸ್ತುವಿನ ಮುಂದಿನ ಸ್ಥಿತಿ ಅದರ ಈಗಿನ ಸ್ಥಿತಿಯಲ್ಲಿ ಅಡಗಿ ಕೊಂಡಿರುವುದು. ಆ ವಸ್ತುವಿನ ಸ್ಥಿತಿ ಮುಂದೆ ಹೇಗೆಹೇಗೆ ಇರುವುದೆಂದು ಈಗಲೇ ನಾವು ಹೇಳಬಹುದು. ಹೀಗೆ ಅದರ ಮುಂದಿನ ಚರಿತ್ರೆ ಈಗಲೇ ಬರೆದಿಟ್ಟಿದೆ.

ಕಾರಣ ಸಂಪೂರ್ಣವಾಗಿ ಸಿದ್ಧವಾಗಿದ್ದರೆ ಕಾರ್ಯ ಹುಟ್ಟುವುದು ಖಂಡಿತ ಎಂಬುದು ಕಾರ್ಯಕಾರಣವಾದದ ತಿರುಳು. ಯಾವುದು ಇದ್ದರೆ, ನಡೆದರೆ ಮಾತ್ರ ಇನ್ನೊಂದು ಇದ್ದೀತೊ ನಡೆದೀತೊ ಯಾವುದು ಇಲ್ಲದಿದ್ದರೆ ಆ ಇನ್ನೊಂದು ಇರದೊ ನಡೆಯಲಾರದೊ ಅದಕ್ಕೆ ಕಾರಣ ಎನ್ನುವುದು ವಾಡಿಕೆ. ವಿಜ್ಞಾನದ ಒಂದು ಪ್ರಭೇದವಾದ ಭೌತಶಾಸ್ತ್ರದಲ್ಲಿ ಕೂಡ ಕಾರ್ಯಕಾರಣವಾದವು ಬಹಳವಾಗಿ ವ್ಯಾಪಿಸಿತ್ತು. ಸಮಸ್ತ ಭೌತವ್ಯಾಪಾರಗಳೂ ಈ ನಿಯಮವನ್ನು ಅವಲಂಬಿಸಿರುತ್ತ ವೆಂದು ಭೌತಶಾಸ್ತ್ರ ತಿಳಿದಿತ್ತು. ಕ್ರಿ.ಶ. ೧೭ನೆಯ ಶತಮಾನದಲ್ಲಿ ಸರ್ ಐಸಾಕ್ ನ್ಯೂಟನ್ ಎಂಬ ಇಂಗ್ಲೆಂಡ್ ದೇಶದ ಪ್ರಸಿದ್ಧ ಭೌತವಿಜ್ಞಾನಿ "ಸಾರ್ವತ್ರಿಕ ಆಕರ್ಷಣ ನಿಯಮ" ಎಂಬ ನಿಯಮವನ್ನು ಕಂಡುಹಿಡಿದ ಮೇಲೆ ಕಾರ್ಯಕಾರಣ ವಾದದ ವ್ಯಾಪ್ತಿ ಭೌತಶಾಸ್ತ್ರದಲ್ಲಿ ಪರಮಾವಧಿಯನ್ನು ಮುಟ್ಟಿತು. ಪ್ರಪಂಚದಲ್ಲಿ ಪ್ರತಿಯೊಂದು ಪದಾರ್ಥವೂ ಇತರ ಪದಾರ್ಥಗಳನ್ನು ಆಕರ್ಷಿಸುವುದು ಎಂಬುದೇ ಈ ನಿಯಮ. ಸೂರ್ಯನ ಸುತ್ತ ಭೂಮಿಯೇ ಮೊದಲಾದ ಗ್ರಹಗಳು ಸುತ್ತಲೂ ಮತ್ತು ಪದಾರ್ಥಗಳು ಭೂಮಿಯ ಕಡೆ ಬೀಳಲೂ ಪ್ರಕೃತಿಯಲ್ಲಿನ ಈ ನಿಯಮವೇ ಕಾರಣ. ಭೂಮಿ ಸೂರ್ಯನ ಸುತ್ತ ಸುತ್ತುವುದು ಎಂಬ ಕಾರ್ಯಕ್ಕೆ ಸೂರ್ಯನ ಆಕರ್ಷಣಶಕ್ತಿ ಎಂಬುದು ಕಾರಣ. ಕಾರ್ಯಕಾರಣಸಂಬಂಧವು ಸ್ವಾಭಾವಿಕ ವಾದುದರಿಂದ ಭೂಮಿಯು ಸೂರ್ಯನ ಸುತ್ತಲೂ ತಿರುಗಲೇಬೇಕು ; ಗತ್ಯಂತರವಿಲ್ಲ. ಭೂಮಿ ಈಗ ಎಲ್ಲಿದೆ ಎಷ್ಟು ವೇಗದಿಂದ ಓಡುತ್ತಿದೆ ಎಂಬುದನ್ನು ಗೊತ್ತುಮಾಡಿದರೆ ಮುಂದೆ ಅದು ಎಲ್ಲಿರುವುದು ಎಷ್ಟು ವೇಗದಿಂದ ಓಡುತ್ತಿರುವುದು ಎಂಬುದನ್ನು ನಿರ್ವಿವಾದವಾಗಿ ನಿಶ್ಚಯಮಾಡಬಹುದು. ಭೂಮಿ ಮತ್ತು ಸೂರ್ಯ ಇವುಗಳ ಮಧ್ಯದಲ್ಲಿ ನೇರವಾಗಿ ಚಂದ್ರನು ಬಂದರೆ ಆಗ ಸೂರ್ಯಗ್ರಹಣವಾಗುವುದು. ಭೂಮಿ, ಚಂದ್ರ ಇವುಗಳ ಈಗಿನ ಗತಿಯಿಂದ ಮುಂದೆ ಯಾವಾಗ ಸೂರ್ಯಗ್ರಹಣ ವಾಗುವುದೆಂದು ಹೇಳಬಹುದು. ಕ್ರಿ.ಶ. 1999 ನೆಯ ಆಗಸ್ಟ್ ತಿಂಗಳಲ್ಲಿ ಒಂದು ಪೂರ್ಣ ಗ್ರಾಸ ಸೂರ್ಯಗ್ರಹಣವು ಆಗುವುದೆಂದು ನಾವು ಈಗಲೇ ಹೇಳಬಹುದು.

ಕ್ರಿ.ಶ. 19ನೆಯ ಶತಮಾನದಲ್ಲಿ ಕಾರ್ಯಕಾರಣವಾದದ ವ್ಯಾಪ್ತಿ ಭೌತ ಶಾಸ್ತ್ರದಲ್ಲಿ ಕಡಮೆಯಾಗಲು ಪ್ರಾರಂಭವಾಯಿತು. ಈ ವಾದದಲ್ಲಿ ಭೌತಶಾಸ್ತ್ರಜ್ಞರಿಗೆ ನಂಬಿಕೆ ಸಡಿಲವಾಗುವ ಹಲವು ಸಂದರ್ಭಗಳು ಒದಗಿದುವು. ಎಲ್ಲಪದಾರ್ಥಗಳೂ ಪರಮಾಣುಗಳಿಂದ ಆಗಿವೆ. ಪರಮಾಣುಸಮೂಹಗಳೇ ಅಣುಗಳು. ಈ ಅಣುಗಳ ಚಲನೆಯಿಂದ ಪದಾರ್ಥದಲ್ಲಿ ಕೆಲವು ಧರ್ಮಗಳು ಕಂಡುಬರುವುವು. ಪದಾರ್ಥ ಗಳಲ್ಲಿರುವ ಉಷ್ಣವೆಂಬುದು ಈ ಅಣುಗಳ ಚಲನೆಯಿಂದ ಉಂಟಾದ ಶಕ್ತಿ. ಪದಾರ್ಥದ ಅತ್ಯಂತ ಸೂಕ್ಷ್ಮವಾದ ಭಾಗದಲ್ಲಿಯೂ ಅನೇಕ ಅಣುಗಳಿರುವುವು. ಆದರೆ ಪ್ರತಿಯೊಂದು ಅಣುವಿನ ಚಲನೆಯನ್ನೂ ತಿಳಿಯಲು ಸಾಧ್ಯವಿಲ್ಲ. ಸಾಮೂ ಹಿಕವಾದ ಅನೇಕ ಅಣುಗಳಲ್ಲಿ ಸಾಮಾನ್ಯವಾಗಿ ಅವು ಹೇಗೆ ಚಲಿಸುವುವೆಂದು ಮಾತ್ರ ಹೇಳಲು ಸಾಧ್ಯ. ಪ್ರತಿಯೊಂದು ಅಣುವಿನ ಚಲನೆಯನ್ನೂ ನಿರ್ಧರಮಾಡಲು ಅವಕಾಶವಿಲ್ಲ. ಅವುಗಳ ಭವಿಷ್ಯ ಅನಿರ್ದಿಷ್ಟ. ಆದುದರಿಂದ ಈ ವಸ್ತುವಿನ ಈಗಿನ ಸ್ಥಿತಿಯಿಂದ ಮುಂದಿನ ಸ್ಥಿತಿ ಪ್ರಾಯಶಃ ಹೇಗಿರುವುದೆಂದು ಸಾಮೂಹಿಕ ದೃಷ್ಟಿ ಯಿಂದ ಹೇಳಲು ಸಾಧ್ಯವಿದ್ದರೂ ಒಂದು ಅಣುವಿನ ವಿಷಯದಲ್ಲಿ ಹೇಳಲು ಸಾಧ್ಯ ವಿಲ್ಲ. ಇದರಿಂದ ಕಾರ್ಯಕಾರಣವಾದಕ್ಕೆ ಒಂದು ರೀತಿಯಾದ ಭಂಗವುಂಟಾದಂತೆ ಆಯಿತು. ಏಕೆಂದರೆ ಸಾಮೂಹಿಕ ದೃಷ್ಟಿಯಿಂದ ಕಾರ್ಯಕಾರಣವಾದವು ಸಂಭಾ ವಿತವೇ ಹೊರತು ನಿಶ್ಚಿತವಲ್ಲ. ಈ ವಿಷಯದಲ್ಲಿ ಒಂದು ಉದಾಹರಣೆ ಕೊಡಬಹುದು. ನೀರನ್ನು ಕಾಯಿಸಲು ಅದನ್ನು ಬೆಂಕಿಯ ಮೇಲೆ ಇಡಬೇಕು. ಶಾಖ ಬೆಂಕಿಯಿಂದ ನೀರಿಗೆ ಹೋಗುವುದು. ನೀರು ಕಾಯುವುದು ಎಂಬ ಕಾರ್ಯ ಬೆಂಕಿಯಿಂದ ಬಂದ ಶಾಖವೆಂಬ ಕಾರಣದಿಂದ ಉಂಟಾಗುವುದು. ಆದರೆ ಶಾಖ ಬೆಂಕಿಯಿಂದ ನೀರಿಗೆ ಹೋಗಿಯೇಹೋಗುವುದು ಎಂಬ ನಿಯಮವಿಲ್ಲ. ಬೆಂಕಿಯಲ್ಲಿರುವ ವೇಗದಿಂದ ಚಲಿಸುವ ಅಣುಗಳು ನೀರಿಗೆ ಸೋಕದೆ ನೀರಿನಲ್ಲಿರುವ ವೇಗದಿಂದ ಚಲಿಸುವ ಅಣುಗಳು ಬೆಂಕಿಗೆ ಸೋಕಿದರೆ ತಣ್ಣಗಿರುವ ನೀರಿನಿಂದ ಬಿಸಿಯಾಗಿರುವ ಬೆಂಕಿಯೂ ಕಾಯ ಬಹುದು. ಆದರೆ ನೀರಿನಿಂದ ಬೆಂಕಿಯು ಕಾಯುವ ಸಂದರ್ಭಕ್ಕಿಂತಲೂ ಬೆಂಕಿಯಿಂದ ನೀರು ಕಾಯುವ ಸಂದರ್ಭ ಹೆಚ್ಚು ಸಂಭಾವಿತ. ನಾಲ್ಕು ಕಡೆಯೂ ಗೋಡೆ ಹಾಕಿರುವ ಮೈದಾನದಲ್ಲಿ ಜನಸಂದಣಿ ಸೇರಿರುವಾಗ ಮೈದಾನದ ಮಧ್ಯದಲ್ಲಿ ಗುಂಡನ್ನು ಹಾರಿಸಿದರೆ ಜನರು ದಿಕ್ಕಾಪಾಲಾಗಿ ಓಡುವರು. ಗುಂಪಿನಲ್ಲಿದ್ದ ಯಾವನೋ ಒಬ್ಬ ಮನುಷ್ಯನು ಯಾವ ದಿಕ್ಕಿಗೆ ಓಡುವನೆಂದು ಹೇಳಲು ಸಾಧ್ಯ ವಿಲ್ಲ. ಆದರೆ ಸಾಮೂಹಿಕ ದೃಷ್ಟಿಯಿಂದ ಗುಂಪಿನ ಬಹುಜನರು ಹೆಬ್ಬಾಗಿಲಿನ ಕಡೆ ಓಡುವರೆಂದು ಹೇಳಬಹುದು. ಹೀಗೆಯೇ ಅಣುಗಳ ಚಲನೆಯ ವಿಷಯದಲ್ಲಿಯೂ

ಸಾಮೂಹಿಕ ದೃಷ್ಟಿಯಿಂದ ಕಾರ್ಯಕಾರಣದ ಸಂಭಾವನೆ ಸಿದ್ಧವಾಗುವುದು. ಕ್ರಿ.ಶ. ೧೯ನೆಯ ಶತಮಾನದ ಅಂತ್ಯಭಾಗದಲ್ಲಿ ಕೆಲವು ಪದಾರ್ಥಗಳ ಪರಮಾಣು ಗಳಿಂದ ನೂತನವಾದ ಕೆಲವು ರಶ್ಮಿಗಳು ಬರುವುವೆಂದು ಕಂಡಿತು. 'ರೇಡಿಯಂ' ಎಂಬ ವಸ್ತುವಿನ ಪರಮಾಣುವಿನಿಂದ ಈ ರಶ್ಮಿಗಳು ಬರುವುವು. ರಶ್ಮಿಗಳ ಬದಲು ಪರಮಾಣುವಿನ ಮಧ್ಯದಲ್ಲಿರುವ ವಿದ್ಯುತ್ಕಣವು ಒಡೆಯುವುದೇ ಕಾರಣ. ಪರ ಮಾಣುಗಳ ಸಮೂಹದಲ್ಲಿ ಯಾವ ಪರಮಾಣು ಯಾವಾಗ ಒಡೆಯುವುದೆಂದು ಹೇಳಲು ಸಾಧ್ಯವಿಲ್ಲ. ಅದರಲ್ಲಿ ಕಾರ್ಯಕಾರಣ ಸಂಬಂಧ ಕಂಡುಬಂದಿಲ್ಲ. ಆದರೆ ಸಮೂಹದಲ್ಲಿ ಅನೇಕ ಪರಮಾಣುಗಳು ಪ್ರಾಯಶಃ ಯಾವಾಗ ಒಡೆಯುವುವು ಎಂಬುದನ್ನು ನಿಶ್ಚಯಮಾಡಲು ಅವಕಾಶವಿರುವುದು. ಹೀಗೆ ಕಾರ್ಯಕಾರಣವಾದದ ನಿಶ್ಚಯತ್ವದಲ್ಲಿ ನಂಬಿಕೆ ಬಹಳ ಮಟ್ಟಿಗೆ ಕಡಿಮೆಯಾಯಿತು.

ಆದರೆ ಕ್ರಿ.ಶ. ೧೯೨೭ ರಲ್ಲಿ ಹೈಸೆನ್‌ಬರ್ಗ್ ಎಂಬ ಜರ್ಮನ್ ಭೌತವಿಜ್ಞಾನಿ ಈ ವಿಷಯದಲ್ಲಿ ಹೊಸ ಪ್ರಕಾಶವನ್ನು ಬೀರಿದನು. ಒಂದು ವಸ್ತುವಿನ ಈಗಿನ ಸ್ಥಿತಿ ನಿಶ್ಚಿತವಾಗಿ ತಿಳಿದಿದ್ದರೆ ಅದರ ಮುಂದಿನ ಸ್ಥಿತಿ ಹೇಗಿರುವುದೆಂದು ಕಾರ್ಯ ಕಾರಣ ಸಂಬಂಧದಿಂದ ನಿರ್ಧರಿಸಬಹುದು. ಆದರೆ ಈಗಿನ ಸ್ಥಿತಿಯನ್ನು ನಿಶ್ಚಿತವಾಗಿ ತಿಳಿಯಲು ಸಾಧ್ಯವೇ ಇಲ್ಲದಿರುವಾಗ ಮುಂದಿನ ಸ್ಥಿತಿಯನ್ನು ನಿಶ್ಚಯಿಸಲು ಹೇಗೆ ತಾನೆ ಸಾಧ್ಯ ಎಂಬುದೇ ಈತನ ವಾದ. ಪರಮಾಣುವಿನಲ್ಲಿ ವಿದ್ಯುತ್ತಿನ ಅಣುವಿರು ವುದು. ಒಂದು ವಿದ್ಯುದಣುವನ್ನು ದೃಷ್ಟಿಯಲ್ಲಿಟ್ಟು ಅದರ ಈಗಿನ ಸ್ಥಿತಿಯನ್ನು ತಿಳಿಯಲು ಪ್ರಯತ್ನಪಟ್ಟೆವೆಂದು ತಿಳಿಯೋಣ. ವಿದ್ಯುದಣುವಿನ ಸ್ಥಳ ಮತ್ತು ವೇಗ ವನ್ನು ಈಗ ನಿರ್ಧರಿಸಿದರೆ ಮುಂದೆ ಅದರ ಸ್ಥಳ ಮತ್ತು ವೇಗವನ್ನು ನಿಶ್ಚಯಮಾಡ ಬಹುದು. ವಿದ್ಯುದಣುವಿನ ಸ್ಥಳವನ್ನು ನಿಶ್ಚಯಿಸಲು ಅದರ ಮೇಲೆ ಬೆಳಕನ್ನು ಬೀರಬೇಕು. ಬೆಳಕು ತೀಕ್ಷ್ಣವಾದಷ್ಟೂ ವಿದ್ಯುದಣು ಸ್ಪಷ್ಟವಾಗಿ ಕಾಣುವುದು. ಅದರಿಂದ ಅದರ ಸ್ಥಳವನ್ನು ಹೆಚ್ಚು ಜಾಗರೂಕತೆಯಿಂದ ಗುರುತಿಸಬಹುದು. ಆದರೆ ಬೆಳಕು ವಿದ್ಯು ದಣುವಿನ ಮೇಲೆ ಬಿದ್ದರೆ ವಿದ್ಯುದಣುವಿನ ವೇಗ ಬದಲಾಯಿಸುವುದು. ಬೆಳಕು ಸಹ ಒಂದು ರೀತಿಯಾದ ಅಣು. ಬೆಳಕಿನ ಅಣು ವಿದ್ಯುದಣುವಿನ ಮೇಲೆ ಬಿದ್ದರೆ, ಓಡುತ್ತಿರುವ ಗೋಲಿಯನ್ನು ಮತ್ತೊಂದು ಗೋಲಿಯಿಂದ ಹೊಡೆದರೆ ಅದರ ವೇಗ ಬದಲಾಯಿಸುವಂತೆ, ವಿದ್ಯುದಣುವಿನ ವೇಗವೂ ಬದಲಾಯಿಸುವುದು. ಆದುದರಿಂದ ನಾವು ನಿಶ್ಚಯಮಾಡುವ ವೇಗವು ಬದಲಾವಣೆ ಹೊಂದಿದ ವೇಗವೇ ಹೊರತು ವಿದ್ಯುದಣುವಿನ ಹಿಂದಿನ ವೇಗವಲ್ಲ. ಬೆಳಕಿನ ತೀಕ್ಷ್ಣತೆ ಹೆಚ್ಚಿದಷ್ಟೂ ವೇಗ ಹೆಚ್ಚಾಗಿ ಬದಲಾಯಿಸುವುದು. ಆದುದರಿಂದ ವಿದ್ಯುದಣುವಿನ ಸ್ಥಳದ

ವಿಷಯದಲ್ಲಿ ಜಾಗರೂಕತೆ ಹೆಚ್ಚಿದಷ್ಟೂ ಆದರ ವೇಗದ ವಿಷಯದಲ್ಲಿ ಸಂಶಯಭಾಗ ಹೆಚ್ಚುವುದು. ವೇಗದ ಸಂಶಯ ಕಡಿಮೆಯಾದರೆ ಸ್ಥಳದ ವಿಷಯದಲ್ಲಿ ನಿಶ್ಚಯತ್ವ ಕಡಿಮೆಯಾಗುವುದು. ಆದುದರಿಂದ ವಿದ್ಯುದಣುವಿನ ಸ್ಥಳ ಮತ್ತು ವೇಗ ಎಂಬ ಈಗಿನ ಅವಸ್ಥೆಯಲ್ಲಿ ನಿಶ್ಚಿತತೆ ಅಪೂರ್ಣ. ಅವರ ಮುಂದಿನ ಅವಸ್ಥೆ ಸಹ ಹೀಗೆಯೇ ಸ್ವಲ್ಪ ಅನಿಶ್ಚಿತತೆ ಇದೆ. ಇದೇ ಅನಿಶ್ಚಿತತ್ವ (Indeterminacy) ವಾದ.

ಇಲ್ಲಿ ಒಂದಂಶವನ್ನು ಜ್ಞಾಪಕದಲ್ಲಿಡಬೇಕು. ಯಾವ ಪರಿಮಾಣವನ್ನು ಅಳೆಯಲೂ ಒಂದು ಉಪಕರಣ ಅಥವಾ ಯಂತ್ರಬೇಕು. ದೂರವನ್ನು ಅಳೆಯಲು ಗಜದ ಕಡ್ಡಿಬೇಕು. ಯಂತ್ರ ಸೂಕ್ಷ್ಮವಾದಷ್ಟೂ ಅಳತೆಯಲ್ಲಿ ನಿಶ್ಚಯತ್ವ ಹೆಚ್ಚುವುದು. ಆದರೆ ಯಂತ್ರ ಸೂಕ್ಷ್ಮವಾಗಲು ಒಂದು ಎಲ್ಲೆಯಿದೆ. ನಾವು ಅಳೆದ ಪರಿಮಾಣ ಆ ಎಲ್ಲೆಯನ್ನು ಮೀರಲಾರದು. ಆದರೆ ವಿದ್ಯುದಣುವಿನ ದೃಷ್ಟಾಂತದಲ್ಲಿ ಹಿಂದೆ ಹೇಳಿದ ಎಲ್ಲೆ ಯಂತ್ರದಿಂದ ಬಂದಿರುವುದಲ್ಲ. ವಸ್ತುಗಳ ಸ್ವಭಾವದಲ್ಲಿಯೇ ಅಡಕವಾಗಿರುವುದು. ಯಾವ ಪರಿಮಾಣವನ್ನು ಹೇಗೆ ಅಳೆದರೂ ಅಳೆಯುವುದರಿಂದಲೇ ಅದು ಬದಲಾವಣೆ ಹೊಂದುವುದು. ಅಳೆಯುವ ಪರಿಮಾಣವನ್ನು ಬದಲಾಯಿಸದಂತೆ ಅಳೆಯುವುದೇ ಅಸಾಧ್ಯ. ಒಬ್ಬ ಕುರುಡ ಮನುಷ್ಯನಿಗೆ ಕೊಳದ ನೀರು ನಿಶ್ಚಲವಾಗಿದೆ ಎಂದು ತಿಳಿಸಲು ಕೊಳದ ನೀರಿನ ಮೇಲೆ ಬೆರಳನ್ನು ಇಡುವಂತೆ ಹೇಳಬೇಕು. ನೀರು ಅಲುಗಾಡದಿದ್ದರೆ ಅದು ನಿಶ್ಚಲವಾಗಿದೆಯೆಂದು ಅವನು ತಿಳಿಯುವನು. ಆದರೆ ತನ್ನ ಬೆರಳನ್ನು ನೀರಿನಮೇಲೆ ಇಡುವುದರಿಂದಲೇ ನೀರು ಸ್ವಲ್ಪ ಚಲಿಸುವುದು. ನೀರ ನಿಶ್ಚಲತೆಯನ್ನು ತಿಳಿಯಲು ಕುರುಡನಿಗೆ ಅದನ್ನು ಅಲುಗಿಸದೆ ಆಗುವುದಿಲ್ಲ. ಹಾಗೆಯೇ ವಿದ್ಯುದಣುವಿನ ವೇಗವನ್ನು ತಿಳಿಯಲು ಅದನ್ನು ಬದಲಾಯಿಸದೆ ಇರಲು ಶಕ್ಯವಿಲ್ಲ.

ಹೈಸೆನ್‌ಬರ್ಗ್ ಅವರ ಅನಿಶ್ಚಿತತ್ವಸಿದ್ಧಾಂತ ಕಾರ್ಯಕಾರಣವಾದದ ವಿಷಯದಲ್ಲಿ ಭೌತಶಾಸ್ತ್ರಜ್ಞರಲ್ಲಿ ಭಿನ್ನಭಿನ್ನ ಮತಗಳನ್ನು ಉಂಟುಮಾಡಿದೆ. ಈ ಅನಿಶ್ಚಿತತ್ವ ಸಿದ್ಧಾಂತ ಕಾರ್ಯಕಾರಣವಾದವನ್ನು ನಂಬಲಸಾಧ್ಯವಾಗುವಂತೆ ಮಾಡಿದೆ ಎಂದು ಸರ್ ಆರ್ಥರ್ ಎಡ್ಡಿಂಗ್‌ಟನ್ ಎಂಬ ವೈಜ್ಞಾನಿಕರ ಅಭಿಪ್ರಾಯ. ಆದರೆ ಈ ಸಿದ್ಧಾಂತಕ್ಕೆ ಕಾರ್ಯಕಾರಣವಾದವನ್ನು ಅಲ್ಲಗಳೆಯಲು ಸಾಧ್ಯವಿಲ್ಲ ಎಂದು ಮ್ಯಾಕ್ಸ್‌ಪ್ಲಾಂಕ್ ಎಂಬ ವೈಜ್ಞಾನಿಕರು ಹೇಳಿರುವರು. ಎಡ್ಡಿಂಗ್‌ಟನ್ ಅವರ ವಾದಸರಣಿ ಹೀಗಿದೆ:— ವಿದ್ಯುದಣುವಿನ ಈಗಿನ ಸ್ಥಿತಿ ಅವರ ಮುಂದಿನ ಸ್ಥಿತಿಯನ್ನು ನಿರ್ದಿಷ್ಟಮಾಡಿದೆ ಎಂದು ಕಾರ್ಯಕಾರಣವಾದ ಹೇಳುವುದು. ಎಂದರೆ, ಅದರ ಭವಿಷ್ಯ ಈಗಲೇ ನಿರ್ಧರವಾಗಿದೆ ಎಂದ ಹಾಗೆ ಆಯಿತು. ಹೈಸೆನ್‌ಬರ್ಗ್

ಅವರ ಸಿದ್ಧಾಂತವನ್ನು ಇವಕ್ಕೆ ಜೋಡಿಸಿದರೆ ವಿದ್ಯುದಣುವಿನ ಮುಂದಿನ ಸ್ಥಿತಿ ಈಗಲೇ ನಿಶ್ಚಿತವಾಗಿದ್ದರೂ ಅದು ನಮಗೆ ಗೊತ್ತಾಗದಂತೆ ಪ್ರಕೃತಿ ಅಡ್ಡಿಮಾಡುವುದೆಂದು ಹೇಳಬೇಕಾಗುವುದು. ಅದರ ಬದಲು ವಿದ್ಯುದಣುವಿನ ಮುಂದಿನ ಸ್ಥಿತಿಯು ನಿಶ್ಚಿತವಾಗಿಯೇ ಇಲ್ಲ ಎಂದು ನಂಬಿದರೆ ಪ್ರಕೃತಿ ಮರೆಮಾಚಬೇಕಾದ ಪ್ರಸಂಗವೇ ಇರುವುದಿಲ್ಲ. ಇಷ್ಟುಮಾತ್ರದಿಂದ ಕಾರ್ಯಕಾರಣ ಸಂಬಂಧವೆಂಬುದಿಲ್ಲ ಎಂದು ಹೇಳಿದಹಾಗಾಗಲಿಲ್ಲ. ಕಾರ್ಯಕಾರಣ ಸಂಬಂಧವೆಂಬುದು ಇದೆ ಎನ್ನುವವರಿಗೆ ಮಾತ್ರ ಆಧಾರವಿಲ್ಲ ಎಂದು ಹೇಳಿದ ಹಾಗಾಯಿತು. ಆದುದರಿಂದ ಪ್ರಕೃತಿಯ ವ್ಯಾಪಾರಗಳಲ್ಲಿ ಅನಿಶ್ಚಿತ ಭವಿಷ್ಯದ ಅಂಶ ಇರುವುದೆಂದು ಹೇಳುವುದೇ ಸಾಧುವಾದುದು. ಕಾರ್ಯಕಾರಣ ಸಂಬಂಧದಲ್ಲಿ ಅನುಭವ ಇಲ್ಲವೆಂದೂ ಸಿದ್ಧವಾಗುವುದು. ವಿದ್ಯುದಣುವಿನ ಭವಿಷ್ಯವು ಅನಿರ್ಧರಿತವಾಗಿದ್ದರೆ ಅದಕ್ಕೆ ಒಂದುರೀತಿ ಯಾವ ಸ್ವಾತಂತ್ರ್ಯ ಇರುವುದಿಲ್ಲವೆ? ಎಂದು ಪ್ರಶ್ನೆಮಾಡಬಹುದು. ಚೇತನನಲ್ಲಿ ಆ ಬಗೆಯ ಸ್ವಾತಂತ್ರ್ಯ ಕಂಡುಬರುವುದು. ಮುಂದಿನ ಕ್ಷಣದಲ್ಲಿ ಹೋಗಬೇಕಾದ ಮಾರ್ಗಗಳು ಅನೇಕವಾಗಿದ್ದರೆ ಚೇತನನು ತನ್ನ ಸ್ವಂತ ಇಚ್ಛೆಯಿಂದ ಯಾವುದೋ ಒಂದು ಮಾರ್ಗದಲ್ಲಿ ಹೋಗುವನು. ಆದರೆ ಈ ರೀತಿಯಾದ ಸ್ವಾತಂತ್ರ್ಯವೂ ಅಚೇತನವಾದ ವಿದ್ಯುದಣುವಿನಲ್ಲಿದೆ ಎಂದು ಮಾತ್ರ ಹೇಳಲು ಎಳ್ಳಷ್ಟೂ ಅವಕಾಶವಿಲ್ಲ ಎಂಬುದು ಎಡ್ಡಿಂಗ್‌ಟನ್ ಅವರ ವಾದ.

ಪ್ರೊ. ಮ್ಯಾಕ್ಸ್ ಪ್ಲಾಂಕ್ ಅವರು ಅನಿಶ್ಚಿತತ್ವ ಸಿದ್ಧಾಂತ ಕಾರ್ಯಕಾರಣವನ್ನು ನಿರಾಕರಿಸಲಾರದೆಂದು ವಾದಿಸಿರುವರು. ವಸ್ತುಸ್ಥಿತಿಯ ಭವಿಷ್ಯವನ್ನು ಹೇಳುವುದೇ ಕಾರ್ಯಕಾರಣವಾದದ ತಿರುಳು ಎಂದು ಹಿಂದೆಯೇ ನಿರೂಪಿಸಿದೆ. ಆದರೆ ಭವಿಷ್ಯ ಹೇಳಲು ಈಗಿನ ಸ್ಥಿತಿಯನ್ನು ನಿರ್ಧರಿಸಬಲ್ಲ ಯಂತ್ರಗಳು ಬೇಕು. ಆದರೆ ಬುದ್ಧಿಶಕ್ತಿಯಿಂದಲೇ ಈಗಿನ ಸ್ಥಿತಿಯನ್ನು ನಾವು ನಿರ್ಧರಿಸಿದರೆ ಮುಂದಿನ ಸ್ಥಿತಿಯೂ ನಿಶ್ಚಿತವೆಂದು ಹೇಳಲು ಏನೂ ಅಡ್ಡಿ ಇರುವುದಿಲ್ಲ. ಪ್ರಪಂಚದಲ್ಲಿ ಎಲ್ಲ ಪರಿಮಾಣಗಳೂ ಯಂತ್ರಗಳಿಂದಲೇ ಅಳೆಯಲ್ಪಡುವುವಾದರೂ ಪರಿಮಾಣಗಳನ್ನು ಬುದ್ಧಿಶಕ್ತಿಯಿಂದಲೇ ತಿಳಿಯಲು ಸಾಧ್ಯ. ಹಾಗೆ ತಿಳಿದ ಅಂಶದಲ್ಲಿ ಯಂತ್ರದಿಂದ ಬಂದ ದೋಷ ಇರುವುದಿಲ್ಲವಾದುದರಿಂದ ಅದು ನಿಶ್ಚಿತವಾದದ್ದೇ ಸರಿ. ಬುದ್ಧಿಶಕ್ತಿಯಿಂದ ಗೃಹೀತವಾದ ವಿಷಯದಲ್ಲಿ ಕಾರ್ಯಕಾರಣ ವಾದವನ್ನು ಪ್ರತಿರೋಧಿಸುವ ಯಾವ ಸಂದರ್ಭವೂ ಇರುವುದಿಲ್ಲ. ಅಲ್ಲದೆ ಭವಿಷ್ಯವನ್ನು ಹೇಳುವಾಗ ಅದನ್ನು ಹೇಳುವ ವ್ಯಕ್ತಿಯ ಯೋಗ್ಯತೆಯ ಮೇಲೆ ಭವಿಷ್ಯಕ್ಕೆ ಬೆಲೆ. ಹವದ ವಿಷಯದಲ್ಲಿ ಭವಿಷ್ಯ ಹೇಳುವಾಗ ಗಾಳಿಯ ಗುಣಗಳನ್ನು ತಿಳಿಯದ ಮನುಷ್ಯನಿಗಿಂತಲೂ, ಸ್ವಲ್ಪಮಟ್ಟಿ

ಗಾದರೂ ತಿಳಿದಿರುವ ರೈತನು ಹೇಳುವ ಭವಿಷ್ಯ ಹೆಚ್ಚು ನಂಬಿಕೆಗೆ ಅರ್ಹವಾದುದು. ವಾಯುಗುಣವನ್ನೇ ಕುರಿತು ಬಹಳವಾಗಿ ಪರಿಶೀಲನೆ ಮಾಡಿದ ವೈಜ್ಞಾನಿಕನು ಹೇಳುವ ಭವಿಷ್ಯ ರೈತನು ಹೇಳಿದುದಕ್ಕಿಂತಲೂ ಹೆಚ್ಚು ವಿಶ್ವಾಸಕ್ಕೆ ಪಾತ್ರವಾದ್ದು. ಹಾಗೆಯೇ ಪ್ರಪಂಚದ ಸಮಸ್ತ ವ್ಯಾಪಾರಗಳನ್ನೂ ಸಮಸ್ತ ವಸ್ತುಗಳ ಗುಣವನ್ನೂ ಗ್ರಹಣಮಾಡುವ ಒಂದು ಪರಮಚೇತನವಿದೆ ಎಂದು ನಂಬಿದರೆ ಆ ಚೇತನವು ಹೇಳಿದ ಭವಿಷ್ಯ ಎಂದಿಗಾದರೂ ನಡೆಯದೆ ಇರುವುದೆ? ಉಪಕರಣ ಮತ್ತು ಯಂತ್ರ ಗಳಿಂದ ಉಂಟಾದ ದೋಷ ಆ ಚೇತನವನ್ನು ಬಾಧಿಸಲಾರವು. ಆದುದರಿಂದ ಕಾರ್ಯ ಕಾರಣವಾದದ ಪರಮಾವಧಿಯಲ್ಲಿ ಭೂತಭವಿಷ್ಯದ್ವರ್ತಮಾನವೆಲ್ಲವನ್ನೂ ಗ್ರಹಿಸುವ ಒಬ್ಬ ಪರಮಚೇತನನು ಇರುವನು ಎಂಬುದೇ ಆಗಿದೆ. ಕಾರ್ಯಕಾರಣ ವಾದವನ್ನು ಸ್ಥಾಪಿಸಲು ಯಾವ ಪ್ರಮಾಣವಿಲ್ಲದಿದ್ದರೂ ಅದನ್ನು ನಿರಾಕರಿಸಲೂ ಯಾವ ಪ್ರಮಾಣವೂ ಇರುವುದಿಲ್ಲ. ಅದರ ಆಧಾರದಿಂದಲೇ ವಿಚಾರಶಾಸ್ತ್ರಗಳು ಬೆಳವಣಿಗೆ ಹೊಂದಿರುವುವು. ಅವು ಮುಂದೆ ಬೆಳವಣಿಗೆ ಹೊಂದುವುವೆಂಬುದಕ್ಕೆ ಕಾರ್ಯ ಕಾರಣವಾದದಲ್ಲಿರುವ ನಂಬಿಕೆಯೇ ಆಧಾರ.

ಬಿ. ಎ. ಕೃಷ್ಣಸ್ವಾಮಿರಾವ್.

---

# ನಾಳಿನ ವಿದ್ಯಾಭ್ಯಾಸ ಮತ್ತು ಪ್ರಪಂಚದ ಶಾಂತಿ

ಬೇರೆ ಕಾರ್ಯಂ ತಗದೆ ಸಾಹಸಿಗನಾಳ್ಗೆ?
ಬೇರೆ ಭೂಷಣಮ್ ಇರದೆ ಮಾನವನ ತೋಳ್ಗೆ?
ಓ ಪೊಲ್ಲಯುದ್ಧಮೇ,
ಎಂದು ನಿಲ್ವೆಯ್!
ಓ ತಾಯೆ ಶಾಂತಿಯೇ
ಎಂದು ಗೆಲ್ವೆಯ್!

—ಅಶ್ವತ್ಥಾಮನ್.

[ಈ ಯುದ್ಧವಾದರೂ ಕಡೆಯ ಯುದ್ಧವಾಗಿ ಪರಿಣಮಿಸಿ ಜಗತ್ತಿನಲ್ಲಿ ಶಾಂತಿ ನೆಲೆಗೊಳ್ಳಬೇಕಾದರೆ ಯುದ್ಧ ಮುಗಿದ ಕೂಡಲೆ ಎಲ್ಲೆಡೆಗಳಲ್ಲೂ ಮನಸ್ಸು ಸುಧಾರಿತವಾಗಬೇಕು. ಯುದ್ಧದ ಕಾರಣಗಳನ್ನು ಕಿತ್ತೊಗೆದು, ರಾಷ್ಟ್ರ ರಾಷ್ಟ್ರಗಳಲ್ಲಿ ಸೌಹಾರ್ದವನ್ನುಂಟುಮಾಡುವ ಶಕ್ತಿ ಸುವ್ಯವಸ್ಥಿತವಾದ ಶಿಕ್ಷಣಕ್ಕೆ ಮಾತ್ರವುಂಟು. ಅಂತರರಾಷ್ಟ್ರೀಯ ಪುನರ್ರಚನೆಯಲ್ಲಿ ಶಿಕ್ಷಣದ ಸ್ಥಾನವೇನು, ಬೇರೆ ಬೇರೆ ರಾಜ್ಯಗಳಲ್ಲಿ, ಮುಖ್ಯವಾಗಿ ಜರ್ಮನಿಯಲ್ಲಿ ಯಾವ ನೀತಿಯನ್ನು ಅನುಸರಿಸಬೇಕು—ಈ ಎಲ್ಲ ಸಮಸ್ಯೆಗಳನ್ನು ಕುರಿತು ಹೊರದೇಶಗಳಲ್ಲಿ ಅಪಾರವಾದ ಚರ್ಚೆ ನಡೆಯುತ್ತಿದೆ. ಚರ್ಚೆಯ ಸ್ವಲ್ಪಭಾಗವನ್ನು ಈ ಲೇಖನದಲ್ಲಿ ಸಂಗ್ರಹಿಸಿ ಕೊಡಲಾಗಿದೆ.]

"ಯುದ್ಧವನ್ನು ಗೆದ್ದರೆ ಸಾಲದು. ಶಾಂತಿಯನ್ನೂ ಗೆಲ್ಲಬೇಕು." ಎಂಬ ಮಾತು ಎಲ್ಲೆಲ್ಲೂ ಕೇಳಿಬರುತ್ತಿದೆ. ಶಾಂತಿಯೂ ಯುದ್ಧದ ಒಂದು ಭಾಗ; ಯುದ್ಧದ ಕಡೆಯ ಅಂಕ. ಅದರಿಂದ ನಡೆದುಹೋದ ಹತ್ಯಾಕಾಂಡ ಅನಿವಾರ್ಯವಾಗಿತ್ತೆಂಬ ಸಮರ್ಥನೆ ದೊರೆಯಬಹುದು ಎಂಬ ಅಂಶವನ್ನು ಮಾತ್ರ ರಾಷ್ಟ್ರಗಳೂ ರಾಜಕೀಯ ಮುಖಂಡರೂ ಇನ್ನೂ ಅರಿತಿಲ್ಲ. ಶಾಂತಿಯ ವ್ಯವಸ್ಥೆ ಹೇಗಿರಬೇಕೆಂದು ಈಗಿನಿಂದ ಯೋಚಿಸುತ್ತ ಹೋಗಬೇಕೆ? ಯುದ್ಧ ಮುಗಿದ ಕೂಡಲೆ ಅದರ ಯೋಚನೆ ಮಾಡಬೇಕೆ? ಯುದ್ಧ ಮುಗಿದ ಮೇಲೆ ಕೆಲಕಾಲ ದಣಿವಾರಿಸಿಕೊಂಡು ಅನಂತರ ಆ ಯೋಚನೆಗಳನ್ನು ಮಾಡಬೇಕೆ? ಈ ವಿಷಯಗಳನ್ನು ಕೂಡ ರಾಷ್ಟ್ರಗಳ ಭವಿಷ್ಯದ ವಿಧಾತರು ಇತ್ಯರ್ಥಮಾಡಿದಂತೆ ಕಾಣುವುದಿಲ್ಲ. "ನಾಲ್ಕು ಸ್ವಾತಂತ್ರ್ಯಗಳು"[1], ಅಟ್ಲಾಂಟಿಕ್ ಘೋಷಣೆಗಳು ಹೊರಬಿದ್ದಿರಬಹುದು. ಆದರೆ ಅವುಗಳ ವ್ಯಾಪ್ತಿಯ ಬಗ್ಗೆ ಅದನ್ನು ಹೊರಡಿಸಿದವರೇ ನಿರ್ಣಯಮಾಡಿಕೊಂಡಿಲ್ಲ. ಆದುದರಿಂದಲೇ ಶ್ರೀಮತಿ ಪರ್ಲ್‌ಬಕ್ ಎಂಬ ಹಿರಿಯ ಸಾಹಿತಿ ಹೇಳಿರುವುದು: ರೂಸ್‌ವೆಲ್ಟರ

[1] ವಿನಾಯಕನ ಸಂಚಿಕೆಯಲ್ಲಿ ಇದರ ಪರಿಚಯವನ್ನು ಮಾಡಿಕೊಟ್ಟಿದೆ.

ನಾಲ್ಕು ಸ್ವಾತಂತ್ರ್ಯಗಳು ಸಾಲವು. ಅವುಗಳ ಜತೆಗೆ ಐದನೆಯ ಸ್ವಾತಂತ್ರ್ಯವೊಂದು ಸೇರಬೇಕು —“ ಸ್ವಾತಂತ್ರ್ಯ ಪಡೆಯಲು ಸ್ವಾತಂತ್ರ್ಯ ”, ಎಂಬುದು. ಸ್ಟಾಲಿನರ ಯುದ್ಧಧ್ಯೇಯಗಳ ಘೋಷಣೆಯಲ್ಲಿ ಈ ಮಿಕ್ಕೆರಡು ಘೋಷಣೆಗಳಿಗಿಂತ ಹೆಚ್ಚು ನಿಶ್ಚಿತತೆ ಕಾಣುತ್ತದಾದರೂ, ಮುಂದಿನ ಅಂತರರಾಷ್ಟ್ರೀಯ ವ್ಯವಸ್ಥೆಯಲ್ಲಿ ರಷ್ಯದ ಪಾತ್ರವೇನೋ ಹೇಳುವುದಕ್ಕೆ ಸಾಧ್ಯವಿಲ್ಲ. “ ರಷ್ಯದ ಒಳಗಿನ ಪುನರ್ರಚನೆಯ ವ್ಯವಸ್ಥೆಯೆಲ್ಲವನ್ನೂ ಈಗಾಗಲೇ ಗೊತ್ತುಮಾಡಿದ್ದೇವೆ. ನಮಗೆ ಹೊಸ ಧ್ಯೇಯಗಳ ಆವಶ್ಯಕತೆ ಇಲ್ಲ ” ಎಂದು ಸ್ಟಾಲಿನ್ ಹೇಳಿರುವುದು ಜ್ಞಾಪಕವಿರಬಹುದು.

ಯುದ್ಧಮುಗಿದ ಮೇಲೆ ಪ್ರತಿಯೊಂದೂ ಹೀಗೆಯೇ ನಡೆಯುತ್ತದೆ, ಅಥವಾ ನಡೆಯಬೇಕು ಎಂದು ಹೇಳಬಲ್ಲ ಸ್ಥಿತಿಗೆ ನಾವಿನ್ನೂ ಬಂದಿಲ್ಲ. ಎಷ್ಟೊಂದು ಹೊಸ ತೊಡಕುಗಳು ತಲೆಹಾಕಲಿಷೆಯೋ ಯಾರು ಬಲ್ಲರು ? ವಿಜಯ ಯಾವಾಗ ದೊರೆಯುವುದು ಎಂಬುದು ಖಚಿತವಾಗಿಲ್ಲದೆ ಹೋದರೂ, ಯಾರಿಗೆ ದೊರೆಯುವುದು ಎಂಬುದು ಈಗಾಗಲೇ ಖಚಿತವಾದಂತೆಯೇ.

ರಾಜಕಾರಣಿಗಳ ವೃಂದದಲ್ಲಿರುವಷ್ಟು ಅಸ್ಪಷ್ಟತೆ, ಅದೃಷ್ಟವಶಾತ್, ಮಿಕ್ಕ ವೃಂದಗಳಲ್ಲಿಲ್ಲ. ಶಾಂತಿಗೆ ನಾವು ಸಿದ್ಧರಾಗಿರಬೇಕು, ಅದು ಬರುವ ವೇಳೆಗೆ ಕಣ್ಣು ಕಣ್ಣು ಬಿಡುವಂತಾಗಬಾರದು ಎಂಬ ಭಾವನೆ ಎಲ್ಲ ದೇಶಗಳ ಪ್ರಾಜ್ಞರಲ್ಲೂ ಬಂದಿದೆ, ಬರುತ್ತಿದೆ. ಈಗಿನಿಂದ ಸರಿಯಾಗಿ ಆಲೋಚನೆ ಮಾಡಿದರೆ ಮಾತ್ರ ಶಾಶ್ವತ ಶಾಂತಿಯನ್ನು ಪಡೆಯಲು ಸಾಧ್ಯ ಎಂಬುದು ಅವರಿಗೆ ಮಂದಟ್ಟಾಗಿದೆ. ಅನೇಕರು ಯುದ್ಧಾನಂತರದ ಶಿಕ್ಷಣದ ವಿಷಯವನ್ನು ಗಾಢವಾಗಿ ಪರಿಶೀಲಿಸುತ್ತಿದ್ದಾರೆ. ಇಂಗ್ಲೆಂಡ್ ಅಮೆರಿಕಾಗಳಲ್ಲಿ ಈ ವಿಷಯವಾಗಿ ನೂರಾರು ಲೇಖನಗಳು, ಹತ್ತಾರು ಪುಸ್ತಕಗಳು ಹೊರಬಿದ್ದಿವೆ. ಈ ವರೆಗೆ ಬಂದಿರುವ ಸಲಹೆಗಳನ್ನು ಎರಡು ಬಗೆಗಳಾಗಿ ವಿಂಗಡಿಸಬಹುದು :— (೧) ಪ್ರತಿ ರಾಷ್ಟ್ರದ ವಿದ್ಯಾಪದ್ಧತಿಗಳ ಸುಧಾರಣೆ. (೨) ಶಾಶ್ವತಶಾಂತಿಗೆ ಸಾಧಕವಾಗುವಂಥ ಅಂತರ್ರಾಷ್ಟ್ರೀಯ ವಿದ್ಯಾಭ್ಯಾಸದ ಯೋಜನೆಗಳು.

(೧) **ಒಳ ಸುಧಾರಣೆ:** “ ಈ ಯುದ್ಧ ಒಂದು ಮಹಾಕ್ರಾಂತಿ. ಈವರೆಗೆ ನಾವು ಯಾವುದನ್ನು ಸಮರ್ಥವಾದುದು ಸಮರ್ಪಕವಾದುದು ಎಂದು ಭಾವಿಸುತ್ತಿದ್ದೆವೋ ಅವೆಲ್ಲವೂ ಎಷ್ಟು ಶಿಥಿಲ, ಎಷ್ಟು ನಿರರ್ಥಕ ಎಂಬುದನ್ನು ಮಿಕ್ಕ ಮಹಾಕ್ರಾಂತಿಗಳಂತೆ ಈ ಕ್ರಾಂತಿಯೂ ತೋರಿಸಿಕೊಟ್ಟಿದೆ ”[1]. ಈ ಬಗೆಯ ಪ್ರಳಯಗಳಿಂದ

[1] ಎಚ್. ಜಿ. ಲಾಸ್ಕಿ “ ಅಧಿಕಾರಿಗಳ ಶಿಕ್ಷಣ ” “ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ ” ಏಪ್ರಿಲ್, ೧೯೪೩.

ನಮ್ಮ ಹಿಂದಿನ ಕಾರ್ಯನೀತಿಗಳನ್ನು ತಿದ್ದಿಕೊಳ್ಳಬಹುದು, ಮುಂದಿನ ನೀತಿಯನ್ನು ನಿರ್ಧರಿಸುವ ಶಕ್ತಿಗಳನ್ನು ಪರಿಶೀಲಿಸಬಹುದು. ಜರ್ಮನಿಯ ಹೊರತು ಯಾವ ರಾಷ್ಟ್ರವೂ ಯುದ್ಧಕ್ಕೆ ಸಿದ್ಧವಾಗಿರಲಿಲ್ಲ. ಮಿತ್ರರಾಷ್ಟ್ರಗಳು ಯುದ್ಧಘೋಷಿಸಿದಾಗಲೂ ಅನೇಕ ಜೀವನವ್ಯಾಪಾರಗಳು ಹಿಂದಿನಂತೆಯೇ ನಡೆದುಕೊಂಡು ಹೋಗುತ್ತಿದ್ದುವು. ವಿದ್ಯಾಸಂಸ್ಥೆಗಳಲ್ಲಿ ಯುದ್ಧದ ಆವಶ್ಯಕತೆಗಳಿಗೆ ಹೊಂದಿಕೊಳ್ಳುವಂಥ ಬಹಳ ಮಾರ್ಪಾಡುಗಳಾಗಬೇಕೆಂದು ಕ್ರಮೇಣ ಎಲ್ಲರಿಗೂ ತೋರಿಬಂತು. ಅಮೆರಿಕದಲ್ಲಿ ವಿದ್ಯಾರ್ಥಿಗಳನೇಕರು ಸೈನ್ಯಕ್ಕೆ ಸೇರಲು ನುಗ್ಗಿದರು. ಅವರಲ್ಲಿ ಶೇಕಡ ೫೦ ಜನಕ್ಕೆ ತಕ್ಕ ದೇಹದಾರ್ಢ್ಯವಿರಲಿಲ್ಲ. ದೇಹಶಿಕ್ಷಣಕ್ಕೆ ಕೊಡಬೇಕಾದ ಪ್ರಾಮುಖ್ಯವನ್ನು ಕೊಡಲಿಲ್ಲವೆಂಬುದು ಆಗ ಅಮೆರಿಕದವರಿಗೆ ಅನುಭವವಾಯಿತು. ಶಾಲೆಗಳಲ್ಲಿ ಅಂಗಸಾಧನೆಗೆ ತಕ್ಕ ಸ್ಥಾನಕೊಡಬೇಕೆಂದು ಚಳುವಳಿ ಮೊದಲಾಯಿತು. ಹಾಗೆಯೇ ವೃತ್ತಿಶಿಕ್ಷಣದಲ್ಲೂ[1] ಇಂಗ್ಲೆಂಡಿನಲ್ಲಿ ಯಂತ್ರಗಳ ನಿರ್ವಹಣವನ್ನು ಬಲ್ಲವರ ಸಂಖ್ಯೆ ಬಹು ಸ್ವಲ್ಪವಿತ್ತು. ಯುದ್ಧಕಾಲದಲ್ಲಿ ಅನೇಕರಿಗೆ ಶಸ್ತ್ರಾಭ್ಯಾಸ ಬೇಕಾಯಿತು. ಹಳೆಯ ಪದ್ಧತಿಗಳ ಗೊಡ್ಡುತನ ಬಯಲಿಗೆ ಬಿತ್ತು. ಶಿಕ್ಷಣಶಾಸ್ತ್ರಪ್ರವೀಣರು ಅನೇಕ ಸುಧಾರಣೆಗಳನ್ನು ಮೊದಲಿಂದ ಸೂಚಿಸುತ್ತಿದ್ದರು. ಸರಕಾರಗಳವರು ಅದಕ್ಕೆ ತಕ್ಕಗಮನ ಕೊಡುತ್ತಿರಲಿಲ್ಲ. ಈ ಯುದ್ಧದ ನಿಮಿತ್ತವಾಗಿಯಾದರೂ ಆಯಾ ಸರಕಾರಗಳು ತಾವಾಗಿ ಸುಧಾರಣಾ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಯಿತು. ಅವುಗಳ ಬಗ್ಗೆ ಸಲಹೆ ಪಡೆದುಕೊಳ್ಳಬೇಕಾಯಿತು. ದೇಶದ ಎಲ್ಲ ಮಕ್ಕಳೂ ಶಾಲೆಗಳಲ್ಲಿ ಓದುತ್ತಿದ್ದಾರೆಯೆ? ಅವರಿಗೆ ತಕ್ಕಷ್ಟು ಶಾಲೆಗಳಿವೆಯೆ? ತಕ್ಕಂಥ ಶಾಲೆಗಳಿವೆಯೆ? ಶಾಲೆಯ ಕಟ್ಟಡಗಳು ಸಮರ್ಪಕವಾಗಿವೆಯೆ? ಮಕ್ಕಳಿಗೆ ಮನೆಗಳಲ್ಲಿ ತಕ್ಕ ಪೋಷಣೆ ದೊರೆಯುತ್ತಿದೆಯೆ? ಅವರ ಆಹಾರ ಹೇಗಿದೆ? ಅವರ ದೇಹದ ಬೆಳವಣಿಗೆ ಸಮರ್ಪಕವಾಗಿದೆಯೆ? ಬಲಯುತವಾದ ಯುವಕ ಜನಾಂಗ ಬರುತ್ತಿದೆಯೆ? ಶಾಲೆಗಳಲ್ಲಿ ದೇಹದಾರ್ಢ್ಯಕ್ಕೆ ಕೊಡಬೇಕಾದ ಲಕ್ಷ್ಯಕೊಡಲಾಗುತ್ತಿದೆಯೆ? ಮಕ್ಕಳು ಶುಚಿಯಾದ ಪದ್ಧತಿಗಳನ್ನು ಕಲಿಯುತ್ತಿದ್ದಾರೆಯೆ? ಅವರ ಶೀಲಶಿಕ್ಷಣ ಹೇಗಿದೆ? ಮಾಧ್ಯಮಿಕ ಶಾಲೆಗಳಲ್ಲೂ ಪ್ರೌಢಶಾಲೆಗಳಲ್ಲೂ ಬೋಧಿಸುವ ಪಾಠಗಳು ಹೇಗಿವೆ? ಯುವಕರ ಮನಸ್ಸು, ಶೀಲ ಇವುಗಳ ಅಭಿವೃದ್ಧಿಗೆ ಅವು ಸಾಧಕವಾಗಿದೆಯೆ? ಎಂಥ ಎಡರುಗಳನ್ನಾಗಲಿ ಎದುರಿಸುವ ಧೈರ್ಯಸಾಹಸ ಸಾಮರ್ಥ್ಯಗಳು ಅವರಿಗಿದೆಯೆ? ಅವರಿಗೆ ಮಿಲಿಟರಿ ಶಿಕ್ಷಣ ಆಗಿದೆಯೆ? ಆಗಬೇಡವೆ? ವೃತ್ತಿಶಿಕ್ಷಣದ

[1] "ವೃತ್ತಿಶಿಕ್ಷಣದಲ್ಲಿ ಸಮರ್ಪಕವಾದ ಒಂದು ಯೋಜನೆ ಅಗತ್ಯ" ಎಂಬುದೇ ಒಂದು ಪುಸ್ತಕದ ಹೆಸರು.

ವ್ಯವಸ್ಥೆ ಸಮಂಜಸವಾಗಿದೆಯೆ? ಪುಸ್ತಕದ ವಿಜ್ಞಾನ, ಅಥವಾ ಚರಿತ್ರೆ, ವೇದಾಂತ, ಸಮಾಜಶಾಸ್ತ್ರ ಇವುಗಳ ಓದು ಸಾಕೆ? ತಮ್ಮ ಜೀವನವನ್ನೆಲ್ಲ ಸಮಾಜದ ಏಳಿಗೆಗೆ ವಿನಿಯೋಗಿಸುವ ಬುದ್ಧಿ ಅವರಿಗೆ ಬಂದಿದೆಯೆ? ಹೆಣ್ಣುಮಕ್ಕಳ ವಿದ್ಯಾಭ್ಯಾಸ ಹೇಗಿರಬೇಕು? ಕಾರ್ಮಿಕರ ಮಕ್ಕಳಿಗೆ ಹೇಗೆ ಶಿಕ್ಷಣಕೊಡಬೇಕು? ವಯಸ್ಕರ ಶಿಕ್ಷಣದ ವ್ಯಾಪ್ತಿಯೇನು? ವಿಶ್ವವಿದ್ಯಾಲಯಗಳು ಹೀಗೇ ಇರಬೇಕೆ? ಈಗ ಎಲ್ಲ ಅಧ್ಯಾಪಕರಿಗೆ ತಕ್ಕಷ್ಟು ಸಿದ್ಧತೆಯಿದೆಯೆ? ಉಪಾಧ್ಯಾಯವೃತ್ತಿಗೆ ಯಾವ ಸ್ಥಾನ ಮಾನಗಳು ನ್ಯಾಯವಾಗಿ ಸಲ್ಲಬೇಕೊ ಅವು ಸಂದಿವೆಯೆ? ಈ ಪ್ರಶ್ನೆಗಳೂ, ಇನ್ನೂ ಎಷ್ಟೋ ಪ್ರಶ್ನೆಗಳೂ ಅನೇಕರ ಮನಸ್ಸನ್ನು ಬಾಧಿಸತೊಡಗಿವೆ. ಇಂಗ್ಲೆಂಡಿನಲ್ಲಿ, ರಾಷ್ಟ್ರೀಯ ಅಧ್ಯಾಪಕರ ಸಂಘ, ಕಾರ್ಮಿಕಶಿಕ್ಷಣ ಸಂಘ, ಟ್ರೇಡ್ ಯೂನಿಯನ್ ಸಂಘ, ಅಂತರ ವಿಶ್ವವಿದ್ಯಾಲಯಗಳ ಸಂಘ, ಕನ್‌ಸರ್ವೇಟಿವ್ ಪಕ್ಷ, ವಿದ್ಯಾಭಿವೃದ್ಧಿ ಸಭೆ, ಮೊದಲಾದ ಎಷ್ಟೋ ಸಂಸ್ಥೆಗಳವರು ಈ ವಿಷಯಗಳ ವಿಮರ್ಶೆಯನ್ನು ಕೂಲಂಕಷವಾಗಿ ಮಾಡುತ್ತಿದ್ದಾರೆ. ತಮ್ಮ ಸಲಹೆಗಳನ್ನು ಆಗಾಗ ಪುಸ್ತಕಗಳ ರೂಪದಲ್ಲಿ ಪ್ರಕಟಿಸುತ್ತಿದ್ದಾರೆ. "ಧನಿಕರ ಮಕ್ಕಳ ವಿದ್ಯಾಭ್ಯಾಸಕ್ಕೂ ಬಡವರ ಮಕ್ಕಳ ವಿದ್ಯಾಭ್ಯಾಸಕ್ಕೂ ವ್ಯತ್ಯಾಸವಿರಬಾರದು. ಅವರ ಶಾಲೆಯ ಕಟ್ಟಡಗಳು ಅರಮನೆಗಳಾಗಿರಬಾರದು, ಇವರು ಕೊಟ್ಟಿಗೆಗಳಲ್ಲಿ ಓದುವಂತಾಗಬಾರದು. ಚಿಕ್ಕಂದಿನಿಂದಲೇ ಈ ತಾರತಮ್ಯಕ್ಕೆ ತುತ್ತಾದರೆ ಮುಂದೆ ಬಹಳ ಅಪಾಯವಾದೀತು. ಇದನ್ನು ಯುದ್ಧವಾದ ಮೇಲಾದರೂ ತಿದ್ದಬೇಕು" ಎಂದು ರಾಷ್ಟ್ರೀಯ ಅಧ್ಯಾಪಕ ಸಂಘದವರು ತಮ್ಮ ಪುಸ್ತಕದಲ್ಲಿ ಹೇಳಿದ್ದಾರೆ.

"ಈಗಿನ ಯುವಕರಿಗೆ ದೊರೆತಿರುವ ಶಿಕ್ಷಣ ತೀರ ಅಸಮರ್ಪಕವಾದುದು, ನಾವೇ ಅದಕ್ಕೆ ಕಾರಣರು, ಅವರಿಗೆ ನಾವು ಕೊಡಬೇಕಾದುದನ್ನು ಕೊಟ್ಟಿಲ್ಲ" ಎಂಬ ಭಾವನೆ ಅಮೆರಿಕದಲ್ಲೂ ಬಲವಾಗಿವೆ. ದೇಶದಾದ್ಯಂತವೂ ಅಧ್ಯಾಪಕರ ಸಭೆ ಸಮ್ಮೇಳನಗಳು ಸೇರಿ ಶಿಕ್ಷಣಕ್ರಮದಲ್ಲಿನ ಹುಳುಕುಗಳನ್ನು ಎತ್ತಿತೋರಿಸಿ, ಅವನ್ನು ನಿವಾರಿಸಲು ಯೋಜನೆಗಳನ್ನು ತಯಾರಿಸುತ್ತಿದ್ದಾರೆ.

ಬ್ರಿಟಿಷ್ ಸರ್ಕಾರವೂ ಸುಮ್ಮನೆ ಕುಳಿತಿಲ್ಲ. ಮಾಧ್ಯಮಿಕ ವಿದ್ಯಾಭ್ಯಾಸದ ಸ್ಥಿತಿಗತಿಗಳನ್ನು ಪರೀಕ್ಷಿಸಿ ಸುಧಾರಣೆಗಳನ್ನು ಸೂಚಿಸಲು ನಾರ್‌ವುಡ್ ಸಮಿತಿಯನ್ನು ನಿಯಮಿಸಿತು. ವ್ಯವಸಾಯದ ಶಿಕ್ಷಣ ಹೇಗೆ ನಡೆಯಬೇಕೆಂಬುದನ್ನು ಪರಿಶೀಲಿಸಲು ಲಕ್ಸ್‌ಮೂರ್ ಸಮಿತಿಯನ್ನು ನಿಯಮಿಸಿತು. ಶಿಕ್ಷಣ ಸುಧಾರಣೆಗಳನ್ನೊಳಗೊಂಡ ಮಸೂದೆಯನ್ನು ಬ್ರಿಟಿಷ್ ವಿದ್ಯಾಮಂತ್ರಿ ಮಿ|| ಆರ್. ಎ. ಬಟ್ಲರು ಪಾರ್ಲಿಮೆಂಟ್ ಮುಂದೆ ತರಲಿದ್ದಾರೆ. ಅದರ ಸಂದರ್ಭದಲ್ಲಿ ಬ್ರಿಟಿಷ್ ಸರ್ಕಾರ

ದವರು ಒಂದು ಶ್ವೇತಪತ್ರ ಹೊರಡಿಸಿ ತಾವು ರೂಢಿಗೆ ತರಬೇಕೆಂದಿರುವ ಸುಧಾರಣೆಗಳ ಪರಿಚಯವನ್ನು ಕೊಟ್ಟಿದ್ದಾರೆ. "ಬ್ರಿಟನ್ನಿನ ಯಾವ ಮಗುವಿಗೂ ವಿದ್ಯಾಭ್ಯಾಸವಿಲ್ಲದಂತಾಗಬಾರದು; ಸಾರ್ವಜನಿಕ ವಿದ್ಯಾಭ್ಯಾಸವು ಸೀಬೆಹಣ್ಣು ಕಚ್ಚುವ ಸಾಧಾರಣ ಪೋರನಿಗೂ ದೊರೆಯುವಂತಾಗಬೇಕೆಂಬ ಅರಿವು ಈಗ ರಾಷ್ಟ್ರಕ್ಕುಂಟಾಗಿದೆ. ಅರೆಬರೆ ಏರ್ಪಾಡುಗಳನ್ನು ಮಾಡದಿರಬೇಕೆಂಬುದೇ ಸರಕಾರದ ಉದ್ದೇಶ." ಎಂಬುದಾಗಿ ಅದರಲ್ಲಿ ಮಿ|| ಬಟ್ಲರರು ತಿಳಿಸಿದ್ದಾರೆ. ಧನಿಕರ ಪುತ್ರರಿಗಾಗಿ ನಡೆಯುವ ಪಬ್ಲಿಕ್ ಸ್ಕೂಲ್ ಎಂಬ ಶಾಲೆಗಳು ಸರ್ಕಾರದ ಅಧೀನದಲ್ಲಿಲ್ಲ. ಧನಿಕ ಬಡವ ಎಂಬ ಭೇದವನ್ನು ತೊಡೆಯುವುದಕ್ಕಾಗಿ ಅವನ್ನು ಸರ್ಕಾರದ ಆಡಳಿತಕ್ಕೇ ತೆಗೆದುಕೊಳ್ಳುವ ಯೋಜನೆಯಿದೆ. ಯುದ್ಧ ಮುಗಿದ ಮೇಲೆ ಇಂಗ್ಲೆಂಡಿನ ಶಿಕ್ಷಣದ ಸ್ವರೂಪವೇ ಮಾರ್ಪಡುತ್ತದೆ.

ಬಡವರ ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರ ಹೆಚ್ಚು ಹೆಚ್ಚು ಆಸ್ಥೆಯಿಂದ ದುಡಿಯಬೇಕು ಎಂಬುದಾಗಿ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನವರೂ, ಕಾರ್ಮಿಕ ಶಿಕ್ಷಣ ಸಂಘದವರೂ ಒತ್ತಾಯಪಡಿಸುತ್ತಿದ್ದಾರೆ.

(೨) **ಶಾಂತಿಯ ತಳಹದಿ:** ಆದರೆ ಒಂದು ರಾಜ್ಯದಲ್ಲಿ ಶಿಕ್ಷಣಕ್ರಮ ಉತ್ತಮಗೊಂಡರೆ ಅಥವಾ ಪರಿಪೂರ್ಣತೆ ಹೊಂದಿದರೆ ಸಾಲದು. ಜಗತ್ತಿನಲ್ಲಿ ಶಾಶ್ವತ ಶಾಂತಿ ನೆಲಸಬೇಕಾದರೆ ಲೋಕವ್ಯಾಪ್ತಿಯುಳ್ಳ ಒಂದು ಬಗೆಯ ಶಿಕ್ಷಣಕ್ರಮ ಏರ್ಪಡಬೇಕು. ಎಲ್ಲ ರಾಷ್ಟ್ರಗಳೂ ಆ ಒಂದು ಧ್ಯೇಯಕ್ಕಾಗಿ ಶ್ರಮಿಸುವಂತಾಗಬೇಕು; ಎಲ್ಲ ಜನಾಂಗಗಳ ಮಕ್ಕಳೂ ಸೌಹಾರ್ದವೊಂದೇ ಜೀವನದ ನಿಯಮ ಎಂಬುದನ್ನು ಕಂಡುಕೊಳ್ಳುವಂತೆ ಆಗಬೇಕು. "ಸುವ್ಯವಸ್ಥಿತ ಶಿಕ್ಷಣದಿಂದಲೇ ಲೋಕಕ್ಕೆ ಮೋಕ್ಷ" ಎಂಬುದನ್ನು ದೊಡ್ಡ ಪಂಡಿತರೆಲ್ಲರೂ ಪದೇ ಪದೇ ಸಾರುತ್ತಲಿದ್ದಾರೆ. ಆದರೆ ಈ ವಿದ್ಯಾಭ್ಯಾಸದ ಯೋಜನೆಯನ್ನು ಯಾವಾಗ ಸಿದ್ಧಮಾಡುವುದು? ಯಾವಾಗ ಕಾರ್ಯರೂಪಕ್ಕೆ ತರುವುದು? "ನ್ಯಾಯಪೂರ್ಣವಾದ ಸಮಾಜದ ಸೃಷ್ಟಿಗಾಗಿ ಶ್ರಮಿಸುತ್ತಿರುವಾಗ ಅಂಥ ಸಮಾಜಕ್ಕೆ ಜನರನ್ನು ಹೊಂದಿಸುವ ಪ್ರಯತ್ನವನ್ನು ಹಿಂಬದಿಗೆ ತಳ್ಳಲಾಗದು. ವಿದ್ಯಾಭ್ಯಾಸದ ಪುನರುಜ್ಜೀವನ, ರಕ್ಷಣೆ, ಅಭಿವೃದ್ಧಿಗಳು ಯುದ್ಧಾನಂತರ ಪ್ರಪಂಚದ ಆಗುಹೋಗುಗಳನ್ನು ಗೊತ್ತುಪಡಿಸುವುದರಲ್ಲಿ ಪ್ರಥಮ ಕಾರ್ಯಗಳು ಎಂದು ಮನನ ಮಾಡಿಕೊಳ್ಳಬೇಕು. ಕೇವಲ ಯುದ್ಧವನ್ನು ಗೆಲ್ಲುವುದಕ್ಕಿಂತ ಹಿರಿದಾದ ಧ್ಯೇಯವೊಂದು ಎಲ್ಲ ಮಿತ್ರರಾಷ್ಟ್ರಗಳ ಜನರ ಮನಸ್ಸುಗಳನ್ನೂ, ಎದೆಗಳನ್ನೂ ಹುರಿದುಂಬಿಸಿದ ಹೊರತು, ಪ್ರಪಂಚ ಮತ್ತೊಮ್ಮೆ ಜಗಳದ ಹಾದಿ ಹಿಡಿಯಬಹುದು."

ಎಂಬುದಾಗಿ ಗಿಲ್ಬರ್ಟ್ ಮರ್ರೇ ಸಮಿತಿಯವರು[1] ಪಶ್ಚಿಮದಲ್ಲಿ ಹೇಳುತ್ತಿದ್ದರೆ, ದೂರಪ್ರಾಚ್ಯದಲ್ಲಿ ಚೀನೀ ದಂಡನಾಯಕ ಚಿಯಾಂಗ್ ಕೈಷೇಕರು "ನಮಗೆ ಒಪ್ಪುವ ಬಾಳಹಾದಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಯುದ್ಧರಂಗದಲ್ಲಿ ನಾವು ಕಾದಾಡುತ್ತಿರುವಾಗ, ನಾವು ಮನೆಯಲ್ಲಿ ತೆಪ್ಪಗೆ ಕುಳಿತಿರುವುದು ಅರ್ಥ ಶೂನ್ಯ" ಎಂದು ನಮ್ಮನ್ನು ಎಚ್ಚರಿಸುತ್ತಿದ್ದಾರೆ. "ಹೋರಾಟದ ಸಮಾಪ್ತಿಯಾದ ನಿಮಿಷವೇ ನೂತನ ಶಕ್ತಿಯೊಂದರ ರಚನೆ ಪ್ರಾರಂಭವಾಗದಿದ್ದರೆ ಹೊಸ ಯುದ್ಧ ವೊಂದನ್ನು ಘೋಷಿಸಿದಂತೆಯೇ ಸರಿ."[2] ಹೋರಾಟವಾಗುತ್ತಿದ್ದಂತೆ ಕೂಡ ಈ ಹೊಸ ವಿದ್ಯಾಭ್ಯಾಸದ ದೃಷ್ಟಾಂತಗಳು ಕಾಣಬೇಕು. ಪುರೋಗಾಮಿದೃಷ್ಟಿಯುಳ್ಳವ ರೆಲ್ಲರೂ ಇವನ್ನೇ ಕುರಿತು ಚಿಂತಿಸುತ್ತಿದ್ದಾರೆ. ಅಂತರರಾಷ್ಟ್ರೀಯ ಯುವಕಮಂಡಲಿ, ಅಂತರರಾಷ್ಟ್ರೀಯ ವಿದ್ಯಾರ್ಥಿ ಮಂಡಲಿ, ಜಿನೀವಾದ ಅಂತರರಾಷ್ಟ್ರೀಯ ಶಿಕ್ಷಣ ಕಛೇರಿ, ಮಿಗಿಲಾಗಿ, ಸಕಲ ಮಿತ್ರರಾಷ್ಟ್ರಗಳ ವಿಶ್ವವಿದ್ಯಾಲಯ ಅಧ್ಯಾಪಕ ಪ್ರೊಫೆಸರುಗಳ ಸಂಘ ಇವರೆಲ್ಲರೂ ಶ್ರಮಿಸುತ್ತಿದ್ದಾರೆ. "ನಾವೆಷ್ಟು ಮಾತನಾಡಿ ದರೂ ಫಲವಿಲ್ಲ. ಮಿತ್ರರಾಷ್ಟ್ರಗಳ ಸರ್ಕಾರಗಳವರು ಈ ವಿಷಯಗಳಲ್ಲಿ ಕೂಡಲೇ ಆಸಕ್ತಿ ವಹಿಸಬೇಕು" ಎಂದು ಜಿನೀವಾದ ಅಂತರರಾಷ್ಟ್ರೀಯ ಶಿಕ್ಷಣ ಕಚೇರಿಯ ಡೈರೆಕ್ಟರು ೧೯೪೧-೪೨ನೆಯ ತಮ್ಮ ವರದಿಯಲ್ಲಿ ಹೇಳಿಕೊಂಡಿದ್ದಾರೆ. ಸರ್ಕಾರಗಳೂ ಕಣ್ಣುಮುಚ್ಚಿಕೊಂಡಿಲ್ಲ. ಮಿತ್ರರಾಷ್ಟ್ರಗಳ ವಿದ್ಯಾಮಂತ್ರಿಗಳು ಐದು ಸಲ ಸಭೆ ಸೇರಿದ್ದಾರೆ. ಐದನೆಯ ಸಮ್ಮೇಳನವು ಮಿ|| ಆರ್. ಎ. ಬಟ್ಲರರ ಅಧ್ಯಕ್ಷತೆಯಲ್ಲಿ ಇದೇ ವರ್ಷ ಜುಲೈ ೨೭ರಲ್ಲಿ ಸೇರಿದಾಗ ಅನೇಕ ಮುಖ್ಯವಾದ ಸಲಹೆಗಳ ಪರಿಶೀಲನೆ ನಡೆಯಿತು.[3] ಇವುಗಳಲ್ಲಿ ಮುಖ್ಯವಾದುದೆಂದರೆ ಲಂಡನ್ನಿನ ಇಂಟರ್‌ನ್ಯಾಷನಲ್ ಅಸೋಸಿಯೇಷನ್ ಮತ್ತು ಕೌನ್‌ಸಿಲ್ ಆಫ್ ಎಜುಕೇಷನ್ ಇನ್ ವರ್ಲ್ಡ್ ಸಿಟಿಜನ್‌ಷಿಪ್ ಇವರ ಸಂಯುಕ್ತ ಸಮಿತಿಯ ವರದಿ. ಈ ಸಮಿತಿಗೆ ವಿಖ್ಯಾತ ಪಂಡಿತರಾದ ಡಾ|| ಗಿಲ್ಬರ್ಟ್ ಮರ್ರೇಯವರು ಅಧ್ಯಕ್ಷರು. ಚೀನಾ, ಸಂಯುಕ್ತ ಸಂಸ್ಥಾನಗಳು, ಗ್ರೀಸ್, ಫ್ರಾನ್ಸ್ ಮುಂತಾದ ಹನ್ನೆರಡು ವಿವಿಧ ರಾಷ್ಟ್ರಗಳ ಪ್ರತಿನಿಧಿಗಳು ಈ ಸಮಿತಿಯಲ್ಲಿದ್ದಾರೆ. ಇವರ ವರದಿಯಲ್ಲಿ ಮೂರು ಮುಖ್ಯ ವಿಭಾಗ ಗಳಿವೆ. ಮೊದಲನೆಯ ಭಾಗದಲ್ಲಿ ನಾಜಿಗಳು ವಿದ್ಯಾಸಂಸ್ಥೆಗಳ ಮೇಲೆ ಎಸಗಿರುವ ದೌರ್ಜನ್ಯದ ಪ್ರಾಮುಖ್ಯ, ಪರಿಮಾಣಗಳನ್ನು ವಿವರಿಸಿ ಅವನ್ನು ಪುನರುದ್ಧಾರಮಾಡಲು

[1] ಈ ಸಮಿತಿಯ ವಿಷಯ ಮುಂದೆ ಹೇಳಿದೆ.

[2] ಡಾ|| ಇ. ಎ. ಗಟ್‌ಕೈಂಡ್ "*Principles of National Planning.*"

[3] ಆರನೆಯ ಸಮ್ಮೇಳನ ಅಕ್ಟೋಬರಿನಲ್ಲಿ ಸೇರಬೇಕೆಂದು ಗೊತ್ತಾಗಿತ್ತು.

ಕಾರ್ಯಕ್ರಮವನ್ನು ಸೂಚಿಸಲಾಗಿದೆ. ಜರ್ಮನಿಯಲ್ಲಿ ಪುನರ್ವಿದ್ಯಾಭ್ಯಾಸದ ಭವಿಷ್ಯವನ್ನೂ, ಅದರ ತತ್ವಗಳನ್ನೂ ಎರಡನೆಯ ಭಾಗದಲ್ಲಿ ಪರೀಕ್ಷಿಸಲಾಗಿದೆ. ಮೂರನೆಯ ಭಾಗದಲ್ಲಿ, ಯುದ್ಧಾನಂತರದ ವ್ಯವಸ್ಥೆಗೆ ಶಿಕ್ಷಣವೇ ಹೇಗೆ ತಳಹದಿಯಾಗಿರಬೇಕು, ಅಟ್ಲಾಂಟಿಕ್ ಚಾರ್‌ಟರಿನ ಧ್ಯೇಯಗಳು ಮಣ್ಣುಪಾಲಾಗದಿರಲು ಬೇಕಾಗುವ ಶಿಕ್ಷಣದ ಉದ್ಧಾರವನ್ನು ಸಾಧಿಸಲು ಯಾವ ರೀತಿಯ ಸುಧಾರಣೆಗಳು ಅಗತ್ಯ, ಯಾವ ರೀತಿಯ ವಿಸ್ತರಣ ಆವಶ್ಯಕ ಎಂಬುದನ್ನು ವಿಶದವಾಗಿ ವಿಮರ್ಶಿಸಲಾಗಿದೆ. ಈ ಸಮಿತಿಯ ಸಲಹೆಗಳನ್ನು ಮುಂದೆ ಕೊಡಲಾಗುವುದು.

ಹೀಗೆ ವಿಶ್ವವ್ಯಾಪಿಯಾದ ವಿದ್ಯಾಭ್ಯಾಸದ ಕೊನೆಯ ಗುರಿ ಒಂದೇ ಆದರೂ ಈ ಕೂಡಲೇ ಎಲ್ಲಾ ದೇಶಗಳಲ್ಲೂ ಒಂದೇ ಕಾರ್ಯಕ್ರಮವನ್ನು ಕೈಗೊಳ್ಳುವುದು ಸಾಧ್ಯವಲ್ಲ, ಸಾಧುವಲ್ಲ. ಏಕೆಂದರೆ ಬೇರೆ ಬೇರೆ ರಾಷ್ಟ್ರಗಳ ಶಿಕ್ಷಣದ ಮಟ್ಟ ಬೇರೆ ಬೇರೆ; ಅವರ ರಾಜಕೀಯ ಸ್ಥಾನಮಾನಗಳೂ ಬೇರೆ ಬೇರೆ. ಯುದ್ಧ ಮುಗಿದ ಕೂಡಲೆ ವಿದ್ಯಾಭ್ಯಾಸದ ದೃಷ್ಟಿಯಿಂದ ಪ್ರಪಂಚವನ್ನು ಐದು ಭಾಗಗಳಾಗಿ ವಿಂಗಡಿಸಬಹುದು.

(೧) ಅಕ್ಷರಾಷ್ಟ್ರಗಳು, ಅಥವಾ ಇನ್ನೂ ಹೆಚ್ಚು ಖಚಿತವಾಗಿ ಹೇಳಬೇಕಾದರೆ, ಈವರೆಗೂ ಅಕ್ಷರಾಷ್ಟ್ರಗಳೆನಿಸಿದ್ದ ರಾಜ್ಯಗಳು, (೨) ಆಕ್ರಮಿತ ರಾಷ್ಟ್ರಗಳು, (೩) ಇಂಗ್ಲಿಷ್ ಮಾತನಾಡುವ ರಾಷ್ಟ್ರಗಳು, (೪) ರಷ್ಯಾ ಮತ್ತು ಚೀನಾ, (೫) ಇಂಡಿಯಾ ಮತ್ತು ಇತರ ಕಾಲೊನಿಗಳು. ಈ ಎಲ್ಲ ಭಾಗಗಳಲ್ಲಿ ಅನುಸರಿಸುವ ಶಿಕ್ಷಣದ ಕಾರ್ಯಕ್ರಮಗಳಲ್ಲಿ ಒಂದೇ ರಸ ಹರಿಯುತ್ತಿರಬೇಕಾದರೂ ಬೇರೆ ಬೇರೆ ವಿಧಾನಗಳಲ್ಲಿ ಕೆಲಸದ ಪ್ರಾರಂಭ ಮಾಡಬೇಕಾಗುತ್ತದೆ. ಶಿಕ್ಷಣಶಾಸ್ತ್ರ ಪ್ರವೀಣರೂ ಪಂಡಿತರೂ ಈ ವಿಷಯವನ್ನು ಕುರಿತು ಬರೆದಿರುವುದನ್ನು ಇಲ್ಲಿ ಸಂಗ್ರಹವಾಗಿ ಪರಿಶೀಲಿಸೋಣ.

(೧) **ಜರ್ಮನಿ ಮತ್ತು ಇತರ ಅಕ್ಷರಾಷ್ಟ್ರಗಳು :** ಕಳೆದ ಅರ್ಧಶತಮಾನದಿಂದಲೂ ಜರ್ಮನಿಯೇ ಪ್ರಪಂಚದ ಆಧಿವ್ಯಾಧಿಗಳಿಗೆಲ್ಲ ಕಾರಣವಾಗಿದೆ. ಈ ಯುದ್ಧ ಮುಗಿದ ಮೇಲೆ ಮಿತ್ರಸೈನ್ಯಗಳು ಜರ್ಮನಿಯನ್ನು ಆಕ್ರಮಿಸಿಕೊಂಡು ಹಲವು ವರ್ಷಗಳು ರಾಜ್ಯಭಾರ ನಡೆಸಬೇಕೆ? ಅಲ್ಲಿನವರ ತಪ್ಪಿತಕ್ಕಾಗಿ ಅವರ ಮೇಲೆ ವರ್ಸೇಲ್ಸ್‌ನಲ್ಲಿ ಮಾಡಿದಂತೆ ಅಗಾಧವಾದ ಶಿಕ್ಷೆಗಳನ್ನೂ ದಂಡಗಳನ್ನೂ ಹೊರಿಸಬೇಕೆ? ಔದಾರ್ಯ ತೋರಿಸಿ, ಯಾವ ಶಿಕ್ಷೆಯನ್ನೂ ವಿಧಿಸದೆ, ಯೋಗ್ಯವಾದ ಪ್ರಜಾಪ್ರಭುತ್ವವೊಂದು ಅಲ್ಲಿ ಸ್ಥಾಪಿತವಾಗುವಂತೆ ಸಹಾಯಮಾಡಿ ಅಂತರರಾಷ್ಟ್ರೀಯ ಯೋಜನೆಗಳಲ್ಲಿ ಅವರ ಸಹಕಾರ, ವಿಶ್ವಾಸಗಳನ್ನು ಗಳಿಸಬೇಕೆ?— ಈ ರಾಜಕೀಯ ಪ್ರಶ್ನೆಗಳು ಈ ವರೆಗೂ ತೀರ್ಮಾನವಾಗಿಲ್ಲ.

ಆದರೆ ಜರ್ಮನಿಯಲ್ಲಿ ಅನುಸರಿಸಬೇಕಾದ ಶಿಕ್ಷಣ ನೀತಿಯ ಬಗ್ಗೆ ಇಷ್ಟೊಂದು

ಅನಿಶ್ಚಿತತೆಯಾಗಲಿ, ಭಿನ್ನಾಭಿಪ್ರಾಯವಾಗಲಿ ಇಲ್ಲ. ಅಖಿಲ ಮಿತ್ರರಾಷ್ಟ್ರಗಳ ವಿಷಯ ಸಂಗ್ರಾಹಕ ಸಮಿತಿಯೊಂದು ಅಕ್ಷರಾಷ್ಟ್ರಗಳವರು ಜರ್ಮನಿಯಲ್ಲೂ ಆಕ್ರಮಿತರಾಷ್ಟ್ರಗಳಲ್ಲೂ ಶಿಕ್ಷಣಕ್ರಮದಲ್ಲಿ ತೋರಿಸಿರುವ ಹಿಂಸೆಯನ್ನು ಪರೀಕ್ಷಿಸಿ ಒಂದು ವರದಿಯನ್ನೊಪ್ಪಿಸಿದೆ. ನಾಜೀಶಿಕ್ಷಣ ತೀರ ವಿಲಕ್ಷಣವಾದುದು. ಮಗು ಹುಟ್ಟಿದಾಗಿನಿಂದ ಅದಕ್ಕೆ ತಪ್ಪುಭಾವನೆಗಳನ್ನೇ ತುಂಬಿ ಅದನ್ನು "ಹೊರದೇಶಗಳ ವಿಷಯವಾಗಿ ಸರಿಯಾದ ತಿಳಿವಳಿಕೆ ಏನೇನೂ ಇಲ್ಲದಂತೆ ಮಾಡಿದ್ದಾರೆ." ವಿದ್ಯಾವಂತನೆನಿಸಿದ ಜರ್ಮನ್ ಯುವಕನಿಗೆ ಎಷ್ಟು ವಿಷಯಗಳಲ್ಲಿ ಸಂಪೂರ್ಣ ಅಜ್ಞಾನವೆಂಬುದನ್ನು ನೆನಸಿದರೆ ಮೈಜುಮ್ಮೆನ್ನುತ್ತದೆ ಎಂದು ಪ್ರೊ|| ಕಾರ್ ಅವರು ಹೇಳಿದ್ದಾರೆ. ಜರ್ಮನಿಯು ಮತ್ತೆ ಎಲ್ಲ ರಾಷ್ಟ್ರಗಳ ಜತೆಯಲ್ಲಿ ಸಮಾನಸ್ಥಾನ, ಪಾಲುಗಾರಿಕೆಗಳನ್ನು ಹೊರಬೇಕಾದರೆ, ವಯಸ್ಕರೆಲ್ಲರಿಗೂ ಪುನರ್ವಿದ್ಯಾಭ್ಯಾಸ ನಡೆಯಬೇಕು, ಚಿಕ್ಕವರಿಗೆ ಸರಿಯಾದ ರೀತಿಯಲ್ಲಿ ಶಿಕ್ಷಣಕೊಡಬೇಕು. ಗಿಲ್‌ಬರ್ಟ್ ಮರ್ರೇ ಸಮಿತಿಯವರು ಈ ಸಮಸ್ಯೆಗೆ ತಮ್ಮ ಸಂಪೂರ್ಣ ಲಕ್ಷ್ಯವನ್ನಿತ್ತು ಅನೇಕ ಸಲಹೆಗಳನ್ನು ಮಾಡಿದ್ದಾರೆ :— "[1]ಜರ್ಮನಿಯ ಪುನರ್ವ್ಯವಸ್ಥೆ ಸಾಧ್ಯವಾಗಬೇಕಾದರೆ ನಾಜೀ ಸಂಸ್ಥೆಯನ್ನು ಕೂಡಲೆ ನಿರ್ನಾಮ ಮಾಡಬೇಕು, ಜರ್ಮನ್ ಸೈನ್ಯವನ್ನು ಮುರಿಯಬೇಕು, ಸೋಲಿನ ಅರ್ಥ ಜರ್ಮನರ ಮನಸ್ಸಿಗೆ ತಟ್ಟುವಂತೆ ಮಾಡಬೇಕು. ಹಾಗೆಂದ ಮಾತ್ರಕ್ಕೆ ಮಿತ್ರರಾಷ್ಟ್ರಗಳು ಅಲ್ಲಿ ನಿರಂಕುಶಾಧಿಪತ್ಯ ನಡೆಸಬೇಕೆಂದಲ್ಲ. ಜರ್ಮನರು ಮತ್ತೆ ತಮ್ಮ ರಾಷ್ಟ್ರಗೌರವವನ್ನು ಪಡೆಯಲು ಗೆದ್ದವರು ಸಹಾಯಮಾಡಬೇಕು. ಜರ್ಮನಿಯನ್ನು ಶಸ್ತ್ರರಹಿತವಾಗಿ ಮಾಡುವುದು ಎಷ್ಟು ಮುಖ್ಯವೋ, ಅಲ್ಲಿನವರ ನೈತಿಕ ಹಾಗೂ ಧಾರ್ಮಿಕ ಪುನರುಜ್ಜೀವನ ಸಾಧ್ಯವಾಗುವಂತೆ ಮಾಡುವುದೂ ಅಷ್ಟೇ ಮುಖ್ಯ. ಸದಾಕಾಲ ಅವರನ್ನು ತುಳಿದಿಟ್ಟಿರುತ್ತೇವೆನ್ನುವುದಕ್ಕಿಂತ ದೊಡ್ಡ ತಪ್ಪು ಇರಲಾರದು. ಯಾವ ದೇಶದಲ್ಲಾಗಲಿ ನಿಜವಾದ ಶಿಕ್ಷಣ ನಡೆಯಬೇಕಾದರೆ ಅಲ್ಲಿನವರಿಂದಲೇ ಸಾಧ್ಯ. ಹೊರಗಿನವರು ಅದನ್ನು ಹೊರಿಸಬಾರದು. ಪುನರ್ವಿದ್ಯಾಭ್ಯಾಸಕ್ಕೆ ಬೇಕಾದ ಅವಕಾಶಗಳನ್ನು ಕಲ್ಪಿಸಿಕೊಡಬೇಕಾದುದು ಗೆದ್ದವರ ಕೆಲಸ.

ಪ್ರಾರಂಭದಲ್ಲಿ ಮಿತ್ರರಾಷ್ಟ್ರಗಳವರು ಒಬ್ಬ ಹೈ ಕಮಿಷನರ್ ಮೂಲಕ ಜರ್ಮನಿಯ ವಿದ್ಯಾಭ್ಯಾಸದ ಮೇಲೆ ಹತೋಟಿಯನ್ನಿಟ್ಟುಕೊಂಡಿರಬೇಕು. ಮೊದಲೇ ಆತನನ್ನು ಆರಿಸಿಕೊಂಡಿದ್ದು ಯುದ್ಧ ಮುಗಿದ ಕೂಡಲೇ ಆತನು ತನ್ನ ಕೆಲಸವನ್ನು ಆರಂಭಿಸುವಂತಾಗಬೇಕು. ಈತನ ಸಹಾಯಕ್ಕೆ ಮಿತ್ರರಾಷ್ಟ್ರಗಳ ಮತ್ತು ತಟಸ್ಥ ರಾಷ್ಟ್ರಗಳ ಪ್ರತಿನಿಧಿಗಳನ್ನೂ ಒಳಗೊಂಡ ಒಂದು ಸಮಿತಿಯಿರಬೇಕು. ಈ ಸಮಿತಿ

[1] ಇವುಗಳ ಸಂಕ್ಷಿಪ್ತ ವರದಿ ೧೪ನೆಯ ಆಗಸ್ಟಿನ 'ನೇಚರ್' ಪತ್ರಿಕೆಯಲ್ಲಿದೆ.

ಯವರು ಜರ್ಮನಿಯ ಶಿಕ್ಷಣಪದ್ಧತಿಯನ್ನು ಆಮೂಲಾಗ್ರವಾಗಿ ಶೋಧಿಸಿ ಯಾವುದನ್ನು ತಿದ್ದಬೇಕು, ಯಾವುದನ್ನು ಉಳಿಸಿಕೊಳ್ಳಬಹುದು ಎಂದು ವರದಿಮಾಡಬೇಕು. ಜರ್ಮನರ ಕೈಗೇ ತಮ್ಮ ವಿದ್ಯಾಭ್ಯಾಸದ ಮೇಲ್ವಿಚಾರಣೆ ವಹಿಸಿಕೊಡಬಹುದೆಂದು ಎಂದು ಆತನ ಮನಸ್ಸಿಗೆ ತೋರುವುದೋ ಅಲ್ಲಿಯವರೆಗೂ ಈ ಹೈ ಕಮಿಷನರ್ ಅಧಿಕಾರದಲ್ಲಿರತಕ್ಕದು. ಜರ್ಮನಿಯಲ್ಲಿ ಈಗಿರುವ ಎಲ್ಲ ಅಧ್ಯಾಪಕರೂ ನಾಜಿಗಳಲ್ಲ. ನಾಜೀ ಆಳಿಕೆಗೆ ಹೃತ್ಪೂರ್ವಕ ಬೆಂಬಲವನ್ನು ಯಾರು ಕೊಟ್ಟಿದ್ದರೋ, ಅಥವಾ, ಹಿಟ್ಲರನು ಅಧಿಕಾರಕ್ಕೆ ಬರುವುದಕ್ಕೆ ಮೊದಲಿನಿಂದ ಯಾರು ನಾಜೀ ತತ್ತ್ವಕ್ಕೆ ಮಾರುಹೋಗಿದ್ದರೋ ಅಂತಹ ಅಧ್ಯಾಪಕರನ್ನು ನಿರ್ದಾಕ್ಷಿಣ್ಯವಾಗಿ ತೆಗೆದುಹಾಕಬೇಕು. ನಾಜೀ ವಿರೋಧಿಗಳಾದ ಉಪಾಧ್ಯಾಯರಿಗೆ ಎಲ್ಲ ಉತ್ತೇಜನವನ್ನೂ ಕೊಡಬೇಕು. ಹಾಗೆಯೇ ನಾಜೀ ಆಡಳಿತದಲ್ಲಿ ಮುಖ್ಯಸ್ಥಾನ ವಹಿಸಿದ್ದ ಪಠ್ಯಪುಸ್ತಕಗಳನ್ನು ತೊಡೆದುಹಾಕಬೇಕು. ಅವಕ್ಕೆ ಬದಲಾಗಿ ಬೇಕಾಗುವಂಥ ಪಠ್ಯಪುಸ್ತಕಗಳನ್ನು ಈಗಿನಿಂದ ತಯಾರಿಸಿಟ್ಟುಕೊಂಡಿರಬೇಕು. ಜರ್ಮನಿಯಿಂದ ಗಡೀಪಾರಾಗಿ ಬಂದಿರುವಂಥವರಿಗೆ ಈ ಕೆಲಸವನ್ನು ಒಪ್ಪಿಸಿ, ಪುಸ್ತಕಗಳನ್ನು ಬರೆಯುವಂತೆ ಅವರನ್ನು ಪ್ರೋತ್ಸಾಹಿಸಬೇಕು. ಆದರೆ ಪ್ರತಿಯೊಂದು ಪುಸ್ತಕದ ಯುಕ್ತಾಯುಕ್ತತೆಯನ್ನೂ ಮಿತ್ರರಾಷ್ಟ್ರಗಳವರು ಬಹಳ ಜಾಗರೂಕತೆಯಿಂದ ಪರೀಕ್ಷಿಸಬೇಕು.

ಹಿಟ್ಲರ್ ಆಧಿಪತ್ಯಕ್ಕೆ ಜರ್ಮನಿಯಲ್ಲಿ ಇಷ್ಟೊಂದು ಬೆಂಬಲ ಸಿಕ್ಕಿದುದು ಆತನೇರ್ಪಡಿಸಿದ "ಜುಗೆಂಡ್" ಎಂಬ ಯುವಕಸಂಸ್ಥೆಗಳಿಂದ. ಕಳೆದ ಯುದ್ಧದ ಫಲವಾಗಿ ಅಧಃಪಾತಾಳಕ್ಕೆ ಇಳಿದಿದ್ದ ಜರ್ಮನ್ ಯುವಕರಿಗೆ ಹೊಸದೊಂದು ನಂಬಿಕೆ (ಅದೆಷ್ಟೇ ದುಷ್ಟವಾದುದಾಗಲಿ) ತಂದುಕೊಟ್ಟಿದ್ದುದೆಂದರೆ "ಜುಗೆಂಡ್"ಗಳು. ಯುದ್ಧಾನಂತರ ಜರ್ಮನಿಯಲ್ಲಿ ಜುಗೆಂಡ್‌ಗಳನ್ನು ಉಳಿಸಲು ಸಾಧ್ಯವಿಲ್ಲ; ಅವುಗಳ ಅಂಗಾಂಗಗಳಲ್ಲೂ ನಾಜೀತತ್ತ್ವ ತುಂಬಿದೆ.[1] ಅವನ್ನು ತೊಡೆದುಹಾಕಿದ-

---

[1] ಜರ್ಮನ್ ಯುವಕಸಂಸ್ಥೆಗಳಿಗೆಲ್ಲ ಈ ಮೂರು ಅಂಶಗಳು ತಳಹದಿ :—

೧. ಜರ್ಮನರದು ಆರ್ಯರಕ್ತ, ಸ್ವಚ್ಛರಕ್ತ. ಮಿಕ್ಕೆಲ್ಲ ಜನಾಂಗಗಳಿಗಿಂತಲೂ ಎಲ್ಲ ವಿಧಗಳಲ್ಲೂ ಇವರು ಶ್ರೇಷ್ಠರು.

೨. ಇತರ ಎಲ್ಲ ಜನಾಂಗಗಳೂ ಕೀಳು. ಯೆಹೂದ್ಯರೂ ಕರಿಯಜನರೂ ಬದುಕಲು ಕೂಡ ಅನರ್ಹರು.

೩. ಈ ಕೀಳುಜನಾಂಗಗಳ ಮೇಲೆ ರಾಜ್ಯಭಾರ ನಡೆಸುವುದಕ್ಕಾಗಿಯೇ ದೇವರು ಜರ್ಮನರನ್ನು ಸೃಷ್ಟಿಸಿರುವುದು. ಆದುದರಿಂದ ರಾಜ್ಯಾಕ್ರಮಣ, ಯುದ್ಧ, ಇವು ಜರ್ಮನರ ಕರ್ತವ್ಯ; ಅವರ ಧರ್ಮ.

ಇದೇ ನಾಜೀತತ್ತ್ವದ ತಿರುಳು. ಹೀಗೆ ನಾಜೀತತ್ತ್ವ ಪರಜನಾಂಗದ್ವೇಷದ ಅಡಿಪಾಯದ ಮೇಲೆ ನಿಂತಿರುವುದರಿಂದಲೇ ಅವರನ್ನು ವಿರೋಧಿಸಿ ಹೋರಾಡುವುದು ಧರ್ಮ ಯುದ್ಧವಾಗುತ್ತದೆ.

ನಂತರ, ಯುವಕರ ಶಕ್ತಿಯನ್ನು ನಮ್ಮ ಕಡೆ ಒಲಿಸಿಕೊಳ್ಳಲು ಮತ್ತೊಂದು ಯುವಕ ಸಂಸ್ಥೆಯನ್ನು ಕಟ್ಟಬೇಕು. ಎಲ್ಲ ಯುವಕರನ್ನೂ ತನ್ನ ಕಡೆ ಸೆಳೆದುಕೊಂಡು ಅವರ ಶಕ್ತಿಯನ್ನೆಲ್ಲ ಮಾನವಜನಾಂಗದ ಶ್ರೇಯಸ್ಸಿಗಾಗಿ ವಿನಿಯೋಗಗೊಳಿಸುವಂಥ ತತ್ತ್ವ ಅದರೊಳಗಿರಬೇಕು. ಪ್ರೊ|| ಕಾರ್ ಅವರು ಹೇಳಿರುವಂತೆ ಜರ್ಮನ್ ಜನರಿಗೆ ನೂತನ ಯೂರೋಪೊಂದರ ನಿರ್ಮಾಣದಲ್ಲಿ ಮಿಕ್ಕ ಜನಾಂಗಗಳ ಆಸಕ್ತಿಗೆ ಸಮಾನವಾದ ಆಸಕ್ತಿ ಹುಟ್ಟಿಸುವುದಷ್ಟೇ ಅಲ್ಲದೆ, ಅಂಥುದೇ ನೈತಿಕ ಗುರಿಯನ್ನು ಕೊಡಬೇಕು.

(೨) **ಆಕ್ರಮಿತ ರಾಷ್ಟ್ರಗಳು:** ಫ್ರಾನ್ಸ್, ಹಾಲೆಂಡ್, ಬೆಲ್ಜಿಯಂ, ಆಸ್ಟ್ರಿಯಾ, ಜೆಕೋಸ್ಲೋವಾಕಿಯಾ ಮುಂತಾದ ಆಕ್ರಮಿತ ರಾಷ್ಟ್ರಗಳ ಸಮಸ್ಯೆ ಅಷ್ಟು ಕಠಿಣವಾದುದಲ್ಲ. ಯುದ್ಧಕ್ಕೆ ಮುಂಚೆ ಅಲ್ಲಿದ್ದ ಸರ್ಕಾರಗಳೇ ಮತ್ತೆ ಹಿಂತಿರುಗುವುದರಲ್ಲಿ ಹೆಚ್ಚು ಸಂದೇಹವಿಲ್ಲ(?). ಆದುದರಿಂದ ಹಿಂದಿನ ಶಿಕ್ಷಣಕ್ರಮವೇ ಮತ್ತೆ ರೂಢಿಗೆ ಬರಬಹುದು. ಆದರೆ ಮಾಡಬೇಕಾದ ಸುಧಾರಣೆಗಳು ಅನೇಕವಿರುತ್ತದೆ. ಪ್ರಾಯಶಃ ಈ ಎಲ್ಲ ರಾಷ್ಟ್ರಗಳ ವಿದ್ಯಾಂಗಗಳನ್ನೂ ಒಂದು ಅಂತರರಾಷ್ಟ್ರೀಯ ಶಿಕ್ಷಣಮಂಡಲಿಯ ಅಧೀನದಲ್ಲಿಡಬೇಕಾದೀತು. ಈ ರಾಷ್ಟ್ರಗಳು ತಮ್ಮ ಸಂಕುಚಿತ ರಾಷ್ಟ್ರೀಯತ್ವವನ್ನು ಬಿಟ್ಟು ಮಿಕ್ಕೆಲ್ಲ ರಾಷ್ಟ್ರಗಳೊಡನೆ ಬೆರೆಯಬೇಕಾದೀತು.

ಜರ್ಮನಿಯು ಈ ರಾಷ್ಟ್ರಗಳನ್ನು ಆಕ್ರಮಿಸಿದ ಮೇಲೆ ತನ್ನ ಶಿಕ್ಷಣಕ್ರಮಗಳನ್ನು ಅಲ್ಲೂ ಕಡ್ಡಾಯವಾಗಿ ಜಾರಿಗೆ ತಂದಿತು. ಆದರೆ ಇದು ಹೆಚ್ಚು ಫಲಕಾರಿಯಾದಂತಿಲ್ಲ. ಈ ವಿಷಯದಿಂದ ನಮಗೆ ಇನ್ನೊಂದು ಶಂಕೆ ಬರುತ್ತದೆ. ತಮ್ಮ ಪುನರ್ವಿದ್ಯಾಭ್ಯಾಸದಲ್ಲಿ ಜರ್ಮನರಿಗೇ ಉತ್ಸಾಹ ಹುಟ್ಟುವಂತೆ, ಅವರೇ ಅದರ ಹೊರೆ ಹೊರುವಂತೆ ಮಿತ್ರರಾಷ್ಟ್ರಗಳು ಮಾಡದೆ, ತಮ್ಮ ಅಭೀಷ್ಟವನ್ನು ಬಲಾತ್ಕಾರದಿಂದ ಅವರ ಮೇಲೆ ಹೊರಿಸಹೋದರೆ ಆ ಅಭೀಷ್ಟಗಳು ಎಷ್ಟೇ ಧರ್ಮಯುತವಾಗಿದ್ದರೂ ಅವು ಫಲಕಾರಿಯಾಗುವುವೆ? ಇದು ಒಂದು ದೊಡ್ಡ ಸಮಸ್ಯೆ. ಗಿಲ್ಬರ್ಟ್ ಮರ್‍ರೇ ಸಮಿತಿಯವರು ಇದನ್ನೂ ಪರಿಶೀಲಿಸಿದ್ದಾರೆ.

ಈ ರಾಷ್ಟ್ರಗಳ ಸರಕಾರಗಳು ಈಗ ಬೇರೆ ದೇಶಗಳಲ್ಲಿ ಕೆಲಸಮಾಡುತ್ತಿವೆ. ಅಲ್ಲಿನ ಪ್ರಜೆಗಳನೇಕರೂ ಹೊರದೇಶಗಳಲ್ಲಿದ್ದಾರೆ. ಅವರೂ ಆ ಸರಕಾರಗಳೂ ಸೇರಿ ಈಗಿನಿಂದ ವಿಜಯದ ಕಾಲಕ್ಕಾಗಿ ಸಿದ್ಧರಾಗುತ್ತಿದ್ದಾರೆ. ಉದಾಹರಣೆಗೆ ಗ್ರೀಸಿನ ಸರಕಾರದವರು ಗಡೀಪಾರಾದ ಗ್ರೀಕ್ ಯುವಕರಿಗಾಗಿ ಲಂಡನಿನಲ್ಲಿ ಟ್ರೇನಿಂಗ್ ಕಾಲೇಜನ್ನು ಸ್ಥಾಪಿಸಿದ್ದಾರೆ.

(೩) **ಇಂಗ್ಲಿಷ್ ಮಾತನಾಡುವ ರಾಜ್ಯಗಳು:** ಈ ಯುದ್ಧದಿಂದ ಅಮೆರಿಕಕ್ಕೂ ಇಂಗ್ಲೆಂಡಿಗೂ ಹತ್ತಿರದ ಸಂಬಂಧ ಉಂಟಾಯಿತು. ಇಂಗ್ಲೆಂಡನ್ನು

ಕಾಪಾಡಿದುದು ಅಮೆರಿಕವೇ ಎಂಬ ಭಾವನೆ ಬ್ರಿಟಿಷರಲ್ಲಿ ಬೆಳೆಯುತ್ತ ಬಂದಿದೆ. ೧೭೭೬ ರಲ್ಲಿ ಇಂಗ್ಲೆಂಡಿನ ಅಧೀನತೆಯಿಂದ ಅಮೆರಿಕ ಬೇರೆಯಾದಂದಿನಿಂದ ಆ ಎರಡು ರಾಷ್ಟ್ರಗಳಿಗೂ ಇಷ್ಟೊಂದು ಬಾಂಧವ್ಯವಿರಲಿಲ್ಲ. "ಯುದ್ಧದಲ್ಲಿ ಮಿತ್ರರಾದವರು ಶಾಂತಿಯಲ್ಲಿಯೂ ಮಿತ್ರರಾಗಿಯೇ ಉಳಿಯಬೇಕು. ಹಾಗಿದ್ದರೆ ಮಾತ್ರ ಪ್ರಪಂಚ ದಲ್ಲಿ ಮಾನವ ಜನಾಂಗವು ತನ್ನ ಪೂರ್ಣ ಗೌರವವನ್ನು ಸಂಪಾದಿಸಲು ಸಾಧ್ಯ"[1] ಎಂಬ ಭಾವನೆಗೆ ಅಮೆರಿಕದ ಮೂಲೆ ಮೂಲೆಯಲ್ಲೂ ಸಮರ್ಥನೆ ದೊರೆಯುತ್ತಿದೆ. ಇಂಗ್ಲೆಂಡ್ ಅಮೆರಿಕಾ ಇವೆರಡೂ ಒಂದುಗೂಡಿ ಒಂದೇ ರಾಜ್ಯ ಏಕಾಗಬಾರದು ಎಂಬ ಮಾತು ಕೂಡ ಅಲ್ಲಲ್ಲಿ ಕೇಳಿಬರುತ್ತಿದೆ.[2]

ಇಷ್ಟಾದರೆ ಸಾಕೆ? ಇಂಗ್ಲೆಂಡ್ ಅಮೆರಿಕಾ ಇವೆರಡು ರಾಷ್ಟ್ರಗಳು ಒಟ್ಟಿಗೆ ನಿಂತು ಒಂದು ನೀತಿಯನ್ನು ಅನುಸರಿಸಿದ ಮಾತ್ರಕ್ಕೆ ಜಗತ್ತಿಗೆ ಶಾಶ್ವತ ಶಾಂತಿ ದೊರೆಯುತ್ತದೆ ಎಂದು ಒಪ್ಪಲು ಸಾಧ್ಯವೆ? ಮಿಕ್ಕ ರಾಷ್ಟ್ರಗಳ ಮಾತೇನು? ಯುದ್ಧದಲ್ಲಿ ಶತ್ರುಗಳಾಗಿದ್ದವರು, ಮಿತ್ರರಾಗಿದ್ದ ಮಿಕ್ಕವರು, ಇವರುಗಳ ಸ್ಥಾನ ಮಾನಗಳೇನು? ಈ ಪ್ರಶ್ನೆಗಳಿಗೆ ಗಿಲ್ಬರ್ಟ್ ಮರ್ರೇ ಸಮಿತಿಯುವರು ಉತ್ತರ ಕೊಟ್ಟಿಲ್ಲ. ಕೊಡಲು ಸಾಧ್ಯವೂ ಇಲ್ಲ. ರಾಜಕಾರಣವೇತ್ತರು ತೀರ್ಮಾನಿಸಬೇಕಾದ ವಿಷಯ ಗಳನ್ನು ಶಿಕ್ಷಣ ಶಾಸ್ತ್ರ ನಿಪುಣರು ತೀರ್ಮಾನಿಸುವ ಹಾಗಿಲ್ಲ.

ಗಿಲ್ಬರ್ಟ್ ಮರ್ರೆ ಸಮಿತಿಯವರು ಒಂದು ಸತ್ಯವಾದ ಸಂಗತಿಯನ್ನು ಬಹಳ ಸಂಗ್ರಹವಾಗಿಯೂ ಸುಂದರವಾಗಿಯೂ ಹೇಳಿದ್ದಾರೆ: "The re-education of Germany is possible if we are prepared to re-educate ourselves"— ನಮ್ಮ ಪುನರ್ವಿದ್ಯಾಭ್ಯಾಸಕ್ಕೆ ನಾವು ಒಡಂಬಡುವುದಾದರೆ ಮಾತ್ರ ಜರ್ಮನಿಯ ಪುನರ್ವಿದ್ಯಾಭ್ಯಾಸ ಸಾಧ್ಯ." ಇದು ಬಹಳ ಮುಖ್ಯವಾದ ಅಂಶ. ಸಾಧಾರಣವಾಗಿ ಒಂದು ಯುದ್ಧದ ವಿಜಯವೇ ಮತ್ತೊಂದು ಯುದ್ಧಕ್ಕೆ ಕಾರಣ. ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬೇಕು, ಪ್ರತೀಕಾರ ತೆಗೆದುಕೊಳ್ಳಬೇಕು ಎಂಬ ಮನೋ ವರ್ತನೆಯನ್ನು ಬಿಟ್ಟರೆ ಈ ಯುದ್ಧವೇ ಕೊನೆಯ ಯುದ್ಧವಾಗಬಹುದು. ಶಿಕ್ಷಣ ಶಾಸ್ತ್ರದಲ್ಲಿ ಹಗಲಿರುಳೂ ಶ್ರಮಿಸುತ್ತಿರುವವರಿಗೆ ಅತ್ಯಂತ ದೊಡ್ಡ ಸಮಸ್ಯೆಯೆಂದರೆ ಈ "ದ್ವೇಷ ಪ್ರಕೃತಿ." ಇದರ ಫಲಗಳೇನೆಂದು ಅವರು ನೋಡಿದ್ದಾರೆ, ಅವುಗಳನ್ನು ಅನುಭವಿಸುತ್ತಿದ್ದಾರೆ. ಈ ಸಲವಾದರೂ ದೇಶದ ಯುವಕರಿಗೆ, ಬಾಲಕ ಬಾಲಕಿಯರಿಗೆ ಈ ಪ್ರತೀಕಾರದ ತೃಷ್ಣೆ ಉಂಟಾಗದಿರಲೆಂದು ಅವರು ದುಡಿಯುತ್ತಿದ್ದಾರೆ.

---

[1] ಪ್ರೊ|| ಐ. ಎಲ್. ಕ್ಯಾಂಡೆಲ್. [2] ಪ್ರೊ|| ರೈಯಾನ್. ಯುದ್ಧಾನಂತರ ವ್ಯವಸ್ಥೆಗೆ ಸಂಬಂಧಪಟ್ಟ ೭೭ ಪ್ರಶ್ನೆಗಳ ಪಟ್ಟಿ ಮಾರ್ಚಿ ತಿಂಗಳ "Clearing House" ಅಲ್ಲಿದೆ.

"ಸೈನಿಕರಿಗೆ ಹೇಗೋ ಏನೋ, ಶಾಲೆಗಳಲ್ಲೂ ಎಳೆಯ ಮಕ್ಕಳಲ್ಲೂ ಪ್ರತೀಕಾರ ಮನೋಭಾವಕ್ಕೆ ಸ್ಥಾನವಿರಬಾರದು. ಸ್ವಾತಂತ್ರ್ಯದ ಪ್ರೀತಿ ಹೇಳಿಕೊಡಿ, ಧರ್ಮ ಪ್ರೇಮವನ್ನು ಬೋಧಿಸಿ, ಅನ್ಯಾಯ ಗುಲಾಮಗಿರಿಗಳನ್ನು ಎದುರಿಸುವುದನ್ನು ಬೇಕಾದ ಹಾಗೆ ಹೇಳಿಕೊಡಿ, ಆದರೆ ಪ್ರತೀಕಾರ ಮನೋಭಾವವನ್ನು ಮಾತ್ರ ಹೇಳಿಕೊಡಬೇಡಿ" ಎಂಬುದಾಗಿ ಅಮೆರಿಕಾ ಸರಕಾರದ ವಿದ್ಯಾ ಇಲಾಖೆಯ ಪತ್ರಿಕೆ ಹೇಳಿದೆ.

ಸರಿಯಾದ ಎಚ್ಚರಿಕೆಯಿಲ್ಲದಿದ್ದರೆ ಈ ಪ್ರತೀಕಾರ ಪ್ರಕೃತಿಯ ಹಾಲಾಹಲದಿಂದ ಮತ್ತೊಂದು ಪ್ರಳಯ ಒದಗುತ್ತದೆ. ಈ ಅಂಶವನ್ನು ವಿವರಿಸುತ್ತ ಗಿಲ್ಬರ್ಟ್ ಮರ್ರೇ ಸಮಿತಿಯವರು, "ಸ್ವತಂತ್ರವಾಗಿ ಸುಖದಿಂದ ಜೀವಿಸುವ ಹಕ್ಕು ಪ್ರತಿ ಜರ್ಮನನಿಗೂ ಇದೆ ಎಂಬುದು ಸ್ಥಾಪನೆಯಾಗಬೇಕು. ಪ್ರಜಾಪ್ರಭುತ್ವ ಧ್ಯೇಯಗಳಿಗನುಸಾರ ವಾಗಿ ರಚಿಸಿದಂಥ ಸ್ವಾತಂತ್ರ್ಯಪ್ರೇಮಿ ಸರಕಾರವು ಅಲ್ಲಿ ಏರ್ಪಡುವಂತೆ ನೋಡಿ ಕೊಳ್ಳುವ ಜವಾಬ್ದಾರಿ ಗೆದ್ದವರದು" ಎಂಬುದಾಗಿ ಬರೆದಿದ್ದಾರೆ.

ಆದುದರಿಂದ ಇಂಗ್ಲಿಷ್ ಮಾತನಾಡುವ ರಾಷ್ಟ್ರಗಳ ಮುಂದಿರುವ ದೊಡ್ಡ ಸಮಸ್ಯೆಯಿದು: ಅಲ್ಲಿನ ಜನರು ವಿಜಯದಿಂದ ಉನ್ಮತ್ತರಾಗಿ ಬಿಡಬಾರದು; ಅಥವಾ ವೈರಿಗಳಾಗಿದ್ದವರ ಮೇಲೆ ಪ್ರತೀಕಾರವನ್ನೇ ಕೋರುತ್ತ ನಡೆಯಬಾರದು; ಯುದ್ಧ ಮುಗಿದ ಮೇಲೆ ಎಲ್ಲ ರಾಷ್ಟ್ರಗಳೊಡನೆ ಸೇರಿ ತಮ್ಮ ಹೊಣೆಯನ್ನು ತಾವು ಹೊರಲು ಸಿದ್ಧರಾಗಿರಬೇಕು. ಇದು ಸಾಧ್ಯವಾಗಬೇಕಾದರೆ ಅಲ್ಲಿನ ಆಂತ ರಿಕ ಶಿಕ್ಷಣ ಪದ್ಧತಿಯು ಬಹಳ ಬದಲಾವಣೆಗೊಳ್ಳಬೇಕಾಗುತ್ತದೆ. ಈ ರಾಷ್ಟ್ರಗಳು ಎಲ್ಲಕ್ಕಿಂತ ಮೊದಲು ತಮ್ಮನ್ನು ತಾವು ತಿದ್ದಿಕೊಳ್ಳಬೇಕಾಗುತ್ತದೆ.

(೪) **ರಷ್ಯಾ, ಚೀನಾ:** ರಷ್ಯಾಕ್ಕೂ ಚೀನಾಕ್ಕೂ ಹೋಲಿಕೆ ಸ್ವಲ್ಪವೇ ಆದರೂ ಅವೆರಡನ್ನೂ ಒಟ್ಟಿಗೆ ಸೇರಿಸುವುದು ವಾಡಿಕೆ. ರಷ್ಯಾದ ಶಿಕ್ಷಣಕ್ರಮ ಮಿಕ್ಕೆಲ್ಲ ದೇಶಗಳ ಶಿಕ್ಷಣಕ್ರಮಕ್ಕಿಂತಲೂ ಹೆಚ್ಚು ಸಮರ್ಪಕವಾಗಿದೆ. ಈ ಅರ್ಥ ದಲ್ಲಿ ನೋಡುವುದಾದರೆ, ಯುದ್ಧಾನಂತರ ಅದನ್ನು ಪುನರ್ವ್ಯವಸ್ಥೆಗೊಳಿಸುವ ಅಗ ತ್ಯವೇ ಇರಲಾರದು. ಆದರೆ ರಷ್ಯಕ್ಕೆ ದೊಡ್ಡದೊಂದು ಪ್ರಶ್ನೆಯಿದೆ: ವಿದ್ಯಾಸಂಸ್ಥೆ ಗಳಿಗೆ ಯುದ್ಧದಿಂದಾಗಿರುವ ಅಪಾರ ನಷ್ಟವನ್ನು ಸರಿಹೊಂದಿಸಿಕೊಳ್ಳುವುದು. ಇದೇ ಪ್ರಶ್ನೆ ಚೀನದ ಮುಂದೆಯೂ ಇದೆ. ಪ್ರಚಂಡವಾದ ಮಾರ್ಪಾಡುಗಳಾಗಬೇಕಾ ದರೆ ಆಂದೋಲನ ಕಾಲಗಳಲ್ಲೇ ಎಂಬುದು ಚೀನದ ಈಚಿನ ಚರಿತ್ರೆಯಿಂದ ವೇದ್ಯವಾಗುತ್ತದೆ. ಯುದ್ಧದ ಈ ಆರು ವರ್ಷಗಳಲ್ಲಿ ಆ ನಾಡಿನಂತೆಯೇ ಅಲ್ಲಿನ ಶಿಕ್ಷಣಕ್ರಮವೂ ಮಾರ್ಪಾಡುಹೊಂದಿದೆ. ಇದರಲ್ಲಿ ಬಹಳ ಆಶ್ಚರ್ಯವನ್ನುಂಟು

ಮಾಡುವ ಅಂಶವೆಂದರೆ ಅಲ್ಲಿನ ಅಕ್ಷರಪ್ರಚಾರಕಾರ್ಯ. ೧೯೩೭ರಲ್ಲಿ ಶೇಕಡ ೭೫ ಇದ್ದ ನಿರಕ್ಷರಸ್ಥರ ಸಂಖ್ಯೆ, ೧೯೪೨ರಲ್ಲಿ ಶೇಕಡ ೩೬ಕ್ಕೆ ಇಳಿಯಿತು.[1] ಎಂದರೆ ಓದುಬರಹ ಬಲ್ಲವರ ಸಂಖ್ಯೆ ಎರಡೂವರೆಯಷ್ಟಾದಂತಾಯಿತು, ಅಕ್ಷರ ಪ್ರಚಾರವೊಂದೇ ಅಲ್ಲ. ಎಲ್ಲ ಬಗೆಯ ಶಿಕ್ಷಣದಲ್ಲೂ ಚೀಣ ಆಶ್ಚರ್ಯಕರವಾಗಿ ಮುಂದುವರೆದಿದೆ.

(೫) **ಇಂಡಿಯಾ ಮತ್ತು ಇತರ ಕಾಲೊನಿಗಳು :** ಚೀಣದ ಮಾದರಿಯಿಂದ ಈಗ ವಸಾಹತುಗಳಾಗಿರುವ ರಾಷ್ಟ್ರಗಳಿಗೆ ಭಾರಿಯ ಆತ್ಮವಿಶ್ವಾಸ ಬಂದಿದೆ. ಯುದ್ಧವಾದ ಮೇಲೂ ಅವುಗಳನ್ನು ವಸಾಹತುಗಳನ್ನಾಗಿಯೇ ಇಟ್ಟುಕೊಂಡಿರಬೇಕೋ ಅಥವಾ ಅವುಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಬೇಕೋ ಎಂಬ ವಿಷಯದಲ್ಲಿ ಅವುಗಳ ಸ್ವಾಮಿಗಳೆನಿಸಿದವರು ಸಂಪೂರ್ಣವಾಗಿ ನಿಶ್ಚಯಮಾಡಿಕೊಂಡಿಲ್ಲದಿದ್ದರೂ, ಅವುಗಳ ಸ್ಥಾನಮಾನಗಳಲ್ಲಿ ಬದಲಾವಣೆಗಳಾಗುವುದು ಸ್ವತಸ್ಸಿದ್ಧ. ಭಾರತದ ಭವಿಷ್ಯ ಹೀಗೇ ಇರುವುದು ಎಂಬುದನ್ನು ಯಾರೂ ಹೇಳಲಾರರು. ತತ್ಪರಿಣಾಮವಾಗಿ ಯಾವ ಶಿಕ್ಷಣಕ್ರಮವನ್ನೂ ಈಗಲೇ ಹಾಕುವುದು ಸಾಧ್ಯವಿಲ್ಲ. ಏಕೆಂದರೆ ಒಂದು ದೇಶದ ಶಿಕ್ಷಣಪದ್ಧತಿ ಅಲ್ಲಿನ ಸರ್ಕಾರವನ್ನವಲಂಬಿಸಿರುತ್ತದೆ. ಆದರೆ ಮಾಡಬೇಕಾದ ಕೆಲಸಗಳ ವಿಷಯದಲ್ಲಿ ಭಿನ್ನಾಭಿಪ್ರಾಯ ಲೇಶವೂ ಇಲ್ಲ. ನಿರಕ್ಷರತೆ ನಿಶ್ಶೇಷವಾಗಿ ಅಳಿಯಬೇಕು. ದೇಶದಾದ್ಯಂತವೂ ವಯಸ್ಕರ ಶಿಕ್ಷಣ ಏರ್ಪಡಬೇಕು. ವೃತ್ತಿಶಿಕ್ಷಣಕ್ಕೆ ಸರ್ವಸೌಲಭ್ಯಗಳನ್ನೂ ಮಾಡಿಕೊಡಬೇಕು. ಶಿಕ್ಷಣಖಾತೆಗಳು ಕೇವಲ ಹೊರದೇಶದ ಮಾದರಿಗಳ ನೆರಳಿನಂತಿರದೆ ದೇಶದ ಸಂಸ್ಕೃತಿಯನ್ನು ಸೂಸುವ ಅಂಗಗಳಾಗಿರಬೇಕು. ಮಾತೃಭಾಷೆಗಳಿಗೆ ಮೊದಲ ಮನ್ನಣೆ ದೊರೆಯಬೇಕು. ಸಮಾಜದ ಏಳಿಗೆಯೇ ಶಿಕ್ಷಣದ ಗುರಿಯಾಗಿರಬೇಕು. ವಸಾಹತುಗಳಲ್ಲಿ ಮಾಡಬೇಕಾದ ಕೆಲಸ ಹೇರಳವಾಗಿದೆ. ಶಿಕ್ಷಣಕಾರ್ಯ ಒಂದರಲ್ಲೇ ಹತ್ತಾರು ವರ್ಷಗಳ ಕೆಲಸವಿದೆ.

ಇಂಡಿಯಾ ಸರ್ಕಾರದ ಶಿಕ್ಷಣಖಾತೆಯ ಡೈರೆಕ್ಟರಾದ ಸರ್ ಜಾನ್ ಸಾರ್ಜೆಂಟರು ಯುದ್ಧಾನಂತರದ ಶಿಕ್ಷಣದ ಬಗ್ಗೆ ಅನೇಕ ಸಲಹೆಗಳನ್ನೊಳಗೊಂಡ ಒಂದು ವರದಿಯನ್ನು ಪ್ರಕಟಿಸಿದ್ದಾರೆ. ದೇಶದ ಎಲ್ಲ ಕಡೆಗಳ ಉಪಾಧ್ಯಾಯ ಸಂಘಗಳವರೂ ಆಂತರಿಕ ಸುಧಾರಣೆಗಳಾಗಬೇಕೆಂದೂ, ಶಿಕ್ಷಕವೃತ್ತಿಗೆ ಹೆಚ್ಚಿನ ಗೌರವ ದೊರೆಯಬೇಕೆಂದೂ ಒತ್ತಾಯಮಾಡುತ್ತಿದ್ದಾರೆ. ಚೀಣದಲ್ಲಿ ಯುದ್ಧ

---

[1] ಚೀನದ ಉಪವಿದ್ಯಾಮಂತ್ರಿ ಡಾ|| ವೈ. ಎಚ್. ಕು ಅವರು ಮದ್ರಾಸಿನ ಸಭೆಯಲ್ಲಿ ಮಾತನಾಡುತ್ತ ಒದಗಿಸಿದ ಸಂಖ್ಯೆಗಳು.

ನಡೆಯುತ್ತಿದ್ದಂತೆಯೇ, ನವಚೇತನವನ್ನು ಹೊಂದಿದ ವಿದ್ಯಾಂಗದ ನಿರ್ಮಾಣ ವಾಯಿತು. ಭಾರತದ ವಿದ್ಯಾಂಗದಲ್ಲಿಯಾದರೋ ಈ ಮೂರು ವರ್ಷಗಳಿಂದಲೂ ಮುಖ್ಯವಾದ ಬದಲಾವಣೆಯೊಂದೂ ಕಂಡುಬರುವುದಿಲ್ಲ.

**ಅಂತರರಾಷ್ಟ್ರೀಯ ತಳಹದಿ:** ಅಲ್ಲೊಂದು ರಾಷ್ಟ್ರ ಇಲ್ಲೊಂದು ರಾಷ್ಟ್ರ ಪ್ರಗತಿಗಾಮಿಯಾದ ಶಿಕ್ಷಣಕ್ರಮವನ್ನು ಅನುಸರಿಸಿದರೆ ಸಾಲದು. ಎಲ್ಲ ರಾಜ್ಯಗಳೂ ಸಹೋದರರಂತೆ ಶಾಂತಿಪಥದಲ್ಲಿ ನಡೆದು ಹೋಗಬೇಕು. ಗಿಲ್‌ಬರ್ಟ್ ಮರ್‍ರೇ ಸಮಿತಿಯವರು ಇದಕ್ಕೂ ತಕ್ಕ ವಿಧಾನಗಳನ್ನು ಸೂಚಿಸಿರುವರು. ಅಲ್ಲದೆ ಅಂತರರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಕುರಿತು ವಿಸ್ತಾರವಾದ ಇನ್ನೊಂದು ವರದಿಯನ್ನು ತಯಾರಿಸುತ್ತಿದ್ದಾರೆ. ಈಗಿನ ವರದಿಯಲ್ಲಿ ಅವರು ಹೇಳಿರುವ ಅಂಶ ಗಳನ್ನು ಮಿತ್ರಸರ್ಕಾರಗಳು ಈಗಾಗಲೆ ಒಪ್ಪಿಕೊಂಡು ಅದರಂತೆ ನಡೆದುಕೊಂಡಿದ್ದರೆ ಅವರ ಪಕ್ಷಕ್ಕೆ ಇನ್ನೂ ಹೆಚ್ಚಿನ ಸಮರ್ಥನೆ ದೊರೆಯುತ್ತಿತ್ತು; ಅವರ ಘೋಷಣೆ ಗಳಲ್ಲಿ ಎಲ್ಲರಿಗೂ ಹೆಚ್ಚಿನ ವಿಶ್ವಾಸ ಉಂಟಾಗುತ್ತಿತ್ತು. ಸಲಹೆಗಳಿವು: "ಶಿಕ್ಷಣ ಪುನರ್‍ರಚನೆಯು ಮಿತ್ರರಾಷ್ಟ್ರಗಳವರೆಲ್ಲರ ಸಂಯುಕ್ತ ಪ್ರಯತ್ನವಾಗಿರಬೇಕು. ಯುದ್ಧ ಮುಗಿದ ಮೇಲಿನ ಪ್ರಥಮ ಕಾರ್ಯಗಳಲ್ಲಿ ಇದು ಒಂದಾಗಿರಬೇಕು. ಶಿಕ್ಷಣ ಪುನರ್‍ರಚನೆಗಾಗಿ ಮಿತ್ರರಾಷ್ಟ್ರಗಳ ಕಚೇರಿಯೊಂದು ಸ್ಥಾಪನೆಯಾಗಬೇಕು. ಯಾವ ದೊಡ್ಡ ರಾಷ್ಟ್ರವೂ ಈ ಕಾರ್ಯದಲ್ಲಿ ಭಾಗವಹಿಸದೆ ಹೊರಗೆ ನಿಲ್ಲುವಂತಾಗ ಕೂಡದು. ಇಂಥ ಅಗಾಧವಾದ ಸಮಸ್ಯೆಗಳನ್ನು ಯಾವ ರಾಷ್ಟ್ರವೂ ಒಂಟೊಂಟಿ ಯಾಗಿ ಪರಿಹರಿಸಲಾರದು. ಈ ಸಂಸ್ಥೆಯವರು ಅಗತ್ಯವಾದ ಯೋಜನೆಗಳನ್ನು ಈಗಿನಿಂದ ತಯಾರಿಸಬೇಕು. ಸಣ್ಣರಾಷ್ಟ್ರಗಳವರಿಗೆ ಶಿಕ್ಷಣ ಪುನರ್ವ್ಯವಸ್ಥೆಗೆ ಸಾಕಾ ದಷ್ಟು ಹಣ ಸಿಗದೆಹೋದರೆ, ಈ ಸಂಸ್ಥೆಯವರು ಅದನ್ನು ಒದಗಿಸುವಂತಿರಬೇಕು."

"ಎಲ್ಲ ದೇಶಗಳ ಪಠ್ಯಪುಸ್ತಕಗಳಲ್ಲೂ ಅನೇಕ ಮಾರ್ಪಾಡುಗಳಾಗಬೇಕು. ನಾವೆಲ್ಲರೂ ಪ್ರಪಂಚದ ಪ್ರಜೆಗಳು ಎಂಬ ಭಾವನೆ ಮಕ್ಕಳಲ್ಲಿ ಈಗಿನಿಂದ ಬೆಳೆದು ಬರಬೇಕು. ದೇಶದ ಚರಿತ್ರೆಯನ್ನೂ, ಪ್ರಪಂಚದ ಚರಿತ್ರೆಯನ್ನೂ ಒಂದೇ ಪುಸ್ತಕ ದಲ್ಲಿ ಸೇರಿಸಿ ಬೋಧಿಸಬೇಕು. ವಿಜ್ಞಾನ ಓದುವವರಿಗೆ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಇವುಗಳನ್ನೂ, ಚರಿತ್ರೆ ಕಲೆ ಮುಂತಾದವನ್ನು ಓದುವವರಿಗೆ ವಿಜ್ಞಾನವನ್ನೂ ಕಲಿಸಿ ಜ್ಞಾನವೆಲ್ಲ ಒಂದು ಎಂಬ ಭಾವನೆಯನ್ನು ಬೆಳೆಸಬೇಕು. ಉಪಾಧ್ಯಾಯರು ಗಳಿಗಾಗಿ ಅಂತರರಾಷ್ಟ್ರೀಯ ಶಿಬಿರಗಳನ್ನು ಏರ್ಪಡಿಸಬೇಕು. ಎಲ್ಲೆಡೆಗಳಲ್ಲೂ ಅವರ ಸ್ಥಾನಮಾನಗಳು ಹೆಚ್ಚಬೇಕು."

"ಲಂಡನಿನಲ್ಲಿ ಅಂತರರಾಷ್ಟ್ರೀಯ ವಿಶ್ವವಿದ್ಯಾಲಯವೊಂದನ್ನು ಏರ್ಪಡಿಸ

ಬೇಕು. ಈ ವಿಶ್ವವಿದ್ಯಾಲಯದಲ್ಲಿ ಎಲ್ಲ ಶಾಸ್ತ್ರಗಳಲ್ಲೂ ಶಿಕ್ಷಣಕೊಡಬೇಕು. ಅಲ್ಲದೆ ಶಿಕ್ಷಣಕ್ರಮಗಳಿಗೆ ವಿಶೇಷ ಗಮನಕೊಡಬೇಕು.

ಈ ಸಲಹೆಯನ್ನು ಸಕಲ ಮಿತ್ರರಾಷ್ಟ್ರಗಳ ವಿಶ್ವವಿದ್ಯಾಲಯಗಳ ಅಧ್ಯಾಪಕ ಸಂಘದವರು ಒಪ್ಪಬೇಕು. ಇದರ ಜತೆಗೆ, ವಿವಿಧ ವಿಶ್ವವಿದ್ಯಾಲಯಗಳಲ್ಲಿ ಸೌಹಾರ್ದ ಸಹವರ್ತನೆಯನ್ನು ಹೆಚ್ಚಿಸುವುದಕ್ಕೋಸ್ಕರ ಅಂತರರಾಷ್ಟ್ರೀಯ ವಿಶ್ವ ವಿದ್ಯಾಲಯಗಳ ಸಂಸ್ಥೆಯನ್ನು ಸ್ಥಾಪಿಸಬೇಕು, ಈ ಸಂಸ್ಥೆ ಎಲ್ಲ ವಿಶ್ವವಿದ್ಯಾಲಯ ಗಳಲ್ಲೂ ಸಾಧ್ಯವಾದ ಮಟ್ಟಿಗೆ ಒಂದೇ ಬಗೆಯ ಪಾಠಕ್ರಮವಿರುವಂತೆ ನೋಡಿಕೊಳ್ಳ ಬೇಕು, ತಮ್ಮ ತಮ್ಮ ಪ್ರೊಫೆಸರುಗಳನ್ನು ಪರಸ್ಪರ ವಿನಿಮಯಮಾಡಿಕೊಳ್ಳುವಂತೆ ನೋಡಿಕೊಳ್ಳಬೇಕು ಎಂದು ಸಲಹೆಯಿತ್ತಿದೆ. ಈ ಸಂಸ್ಥೆಗೆ ಮುಖ್ಯವಾದ ಇನ್ನೊಂದು ಕೆಲಸವೆಂದರೆ, ಜರ್ಮನ್ ವಿಶ್ವವಿದ್ಯಾಲಯಗಳ ಪುನರ್ನಿರ್ಮಾಣಕ್ಕೆ ನೆರವಾಗುವುದು. ಎಲ್ಲ ದೇಶಗಳಲ್ಲೂ ಸರಿಯಾದ ಬಗೆಯ ಸಾಹಿತ್ಯ ಬೆಳೆಯುವಂತೆ ನೋಡಿಕೊಳ್ಳಲು ಒಂದು ಸಮಿತಿ (Permanent Committee for Comparative Literature) ನೇಮಕವಾಗಬೇಕೆಂದು ಮತ್ತೊಂದು ಸಲಹೆ ಬಂದಿದೆ. ವಿವಿಧ ಪುಸ್ತಕಭಂಡಾರಗಳ ಉದ್ಧಾರಕ್ಕಾಗಿ ಒಂದು ಯೋಜನೆಯನ್ನು ಡಾ|| ಅರ್ನೆಸ್ಟ್ ಬಾರ್ಕರ್ ಅವರ ಅಧ್ಯಕ್ಷತೆ ಯಲ್ಲಿ ಒಂದು ಸಮಿತಿಯು ತಯಾರಿಸಿದೆ. ಮಿತ್ರರಾಷ್ಟ್ರಗಳ ವಿದ್ಯಾಮಂತ್ರಿಗಳ ಐದನೆಯ ಸಮ್ಮೇಳನದಲ್ಲಿ ಈ ಯೋಜನೆಯು ಅಂಗೀಕಾರವಾಯಿತು.

**ವಯಸ್ಕರ ಶಿಕ್ಷಣ:** ಯುದ್ಧಾನಂತರದ ಪ್ರಪಂಚದಲ್ಲಿ ವಯಸ್ಕರ ಶಿಕ್ಷಣ ಬಹಳ ಪ್ರಮುಖಪಾತ್ರ ವಹಿಸುತ್ತದೆ. "ಶೈಶವಸ್ಥಿತಿಯಲ್ಲಿದ್ದ ವಯಸ್ಕರ ಶಿಕ್ಷಣ ಯುದ್ಧದ ದೆಸೆಯಿಂದ ಪ್ರಾಪ್ತವಯಸ್ಕವಾಯಿತು. ವಯಸ್ಕರ ಶಿಕ್ಷಣವೆಂದರೇನು? ಎಲ್ಲರಿಗೂ ಬರಿಯ ಅಕ್ಷರ ಕಲಿಸುವುದು ಮಾತ್ರವಲ್ಲ. ನಿಜವಾದ ಜ್ಞಾನವು, ಗಂಡಸು ಹೆಂಗಸೆಂಬ ಭೇದವಿಲ್ಲದೆ ಎಲ್ಲರಿಗೂ ದೊರೆಯುವಂತಾಗಬೇಕು. ಯುದ್ಧದ ಹಾಗೂ ಶಾಂತಿಯ ಆಗುಹೋಗುಗಳೆಲ್ಲವೂ ಜಗತ್ತಿನ ಜನಸಾಮಾನ್ಯರಿಗೆ ತಿಳಿದಿರಬೇಕು. ಅವರು ಅದರಲ್ಲಿ ಭಾಗವಹಿಸಬೇಕು. ಜಗತ್ತಿನ ಭವಿಷ್ಯ ಈ ಬಗೆಯ ಶಿಕ್ಷಣದಲ್ಲಿದೆ" ಎಂದು ಪ್ರೊ|| ಎನ್. ಎಲ್. ಎಂಗ್ಲ್‌ಹಾರ್ಟ್ರವರು ಹೇಳಿದ್ದಾರೆ. ಗೆದ್ದವರು, ಸೋತವರು, ತಟಸ್ಥರಾಗಿದ್ದವರು, ಎಂಬ ತಾರತಮ್ಯವಿಲ್ಲದೆ ಪ್ರತಿಯೊಂದು ರಾಷ್ಟ್ರಕ್ಕೂ ತಿಳಿವಳಿಕೆಯಿಂದ ಕೂಡಿದ ವಯಸ್ಕ ಶಿಕ್ಷಣ ಬೇಕೇ ಬೇಕು.

**ಯುವಕರ ಸ್ಥಾನ:** ಯುದ್ಧದ ಯಾವ ರೂಪವಿಶೇಷವನ್ನು ಪರಿಶೀಲಿಸ ಬೇಕಾದರೂ, ಮುಂದಿನ ಜಗತ್ತಿನಲ್ಲಿ ಯುವಕರ ಸ್ಥಾನವೇನು ಎಂಬ ಪ್ರಶ್ನೆಯನ್ನು ಕುರಿತು ಯೋಚಿಸಲೇ ಬೇಕು. ಯುದ್ಧವನ್ನು ನಿಜವಾಗಿ ಗೆಲ್ಲುವವರು ಅವರು

ನೆತ್ತರನ್ನು ಚೆಲ್ಲುವವರು ಅವರು. ತಮ್ಮ ವಿದ್ಯೆಯನ್ನು ತ್ಯಾಗಮಾಡಿ ರಣರಂಗಕ್ಕೆ ಧುಮುಕುವವರು ಅವರು. ಮುಂದಿನ ವಿದ್ಯಾವ್ಯವಸ್ಥೆಯಲ್ಲಿ ಅವರಿಗೆ ಏನು ಸ್ಥಾನ? ಕಳೆದ ಯುದ್ಧದಲ್ಲಿ ಯುವಕರು ಎಷ್ಟೋ ಸೇವೆ ಸಲ್ಲಿಸಿದರು. ಆದರೆ ಯುದ್ಧ ಮುಗಿದ ಮೇಲೆ "ಶಾಂತಿ"ಯ ಕಾಲದಲ್ಲಿ ಪಡಬಾರದ ಕಷ್ಟಗಳನ್ನು ಪಟ್ಟವರೂ ಅವರೇ. ನಿರುದ್ಯೋಗದ ಕರಾಳ ರಕ್ಕಸಿಯ ಹಿಡಿತಕ್ಕೆ ಸಿಕ್ಕಿ ಪರಾವಲಂಬನೆಯ ಯಾತನೆಯನ್ನು ಪಡಬೇಕಾದವರೂ ಅವರೇ. ಆ ಬಗೆಯ ಸಮಸ್ಯೆಗಳು ಈ ಸಲ ಬಾರದಿರಲೆಂದು ದೇಶಗಳ ಮುಖಂಡರುಗಳು ಪ್ರಯತ್ನಮಾಡುತ್ತಿದ್ದಾರೆ. ಯುವಕರಾದರೂ ಜವಾಬ್ದಾರಿಯ ಕೆಲಸಗಳನ್ನೆಲ್ಲ 'ಹಿರಿಯರ' ಕೈಗೆ ಒಪ್ಪಿಸಿಬಿಟ್ಟು ಹೋದಸಲದಂತೆ ತೆಪ್ಪಗೆ ಕುಳಿತುಕೊಳ್ಳುವವರಲ್ಲ. "ಪ್ರಜಾಪ್ರಭುತ್ವಾನುಸಾರವಾದ ಶಿಕ್ಷಣಕ್ರಮಗಳಿಗೆ ನಾವು ನಮ್ಮ ಜೀವನವನ್ನು ಅರ್ಪಿಸುವುದಕ್ಕೆ ಸಿದ್ಧರಾಗಿದ್ದೇವೆ" ಎಂಬುದಾಗಿ ಅಂತರರಾಷ್ಟ್ರೀಯ ಯುವಕಮಂಡಲಿಯವರು ತಮ್ಮ ಲಂಡನ್ ಸಮ್ಮೇಳನದಲ್ಲಿ (೧೯೪೨ನೆಯ ನೊವೆಂಬರ್ ೧೪, ೧೫) ತೀರ್ಮಾನಿಸಿದರು. ಅವರು ಮತ್ತೊಂದು ಮುಖ್ಯವಾದ ನಿರ್ಣಯವನ್ನು ಮಾಡಿದ್ದಾರೆ:[1] "ಉದ್ಯೋಗ, ವಿಶ್ರಾಂತಿ, ವಿನೋದ, ವಿದ್ಯಾಭ್ಯಾಸ, ಆರೋಗ್ಯ,—ಯುವಕರ ಈ ಹಕ್ಕುಗಳನ್ನು ಎಲ್ಲ ರಾಷ್ಟ್ರಗಳೂ ಕೂಡಲೇ ಅಂಗೀಕರಿಸಬೇಕು. ಹಾಗಾದರೆ ಮಾತ್ರ ಯುವಕರು ಪೂರ್ಣೋತ್ಸಾಹದಿಂದ ಫ್ಯಾಸಿಸಮ್ಮಿನೊಡನೆ ಹೋರಾಟ ನಡೆಸಬಲ್ಲರು."

"ಯುದ್ಧವನ್ನು ಗೆಲ್ಲುವುದು ಮಾತ್ರವಲ್ಲ, ಶಾಂತಿಯನ್ನೂ ಗೆಲ್ಲಬೇಕು ಎಂದು ಒತ್ತಿ ಒತ್ತಿ ಹೇಳಿ. ಹಿರಿಯರನ್ನು ಒತ್ತಾಯಪಡಿಸಿ. ಹಾಗಾದರೆ ಮಾತ್ರ ಯುವಕ ಜನಾಂಗದ ಭವಿಷ್ಯವು ಗೌರವದಿಂದಕೂಡಿರಲು ಸಾಧ್ಯ" ಎಂಬುದಾಗಿ ಅಂತರ ರಾಷ್ಟ್ರೀಯ ವಿದ್ಯಾರ್ಥಿ ಸಮ್ಮೇಳನದಲ್ಲಿ ಭಾಷಣಮಾಡುತ್ತ ಡಾ|| ಬೆನಿಷ್‌ರವರು ತಿಳಿಸಿದರು. ಯುವಕರೇನೋ ಹಾಗೆಯೇ ಹಟ ಹಿಡಿದಿದ್ದಾರೆ. ಹಿರಿಯರೇನು ಮಾಡುವರೂ ನೋಡಬೇಕು.

ಎಚ್. ವೈ. ಶಾರದಾಪ್ರಸಾದ್.

---

[1] "ಶಿಕ್ಷಣ, ಪ್ರಜಾಪ್ರಭುತ್ವ"—ಪ್ರೊ|| ಎಸ್. ಎಲ್. ಎಂಗ್ಲ್‌ಹಾರ್ಟ್, "ಟೀಚರ್ಸ್ ಕಾಲೇಜ್ ರಿಕಾರ್ಡ್" ೧೯೪೨, ಡಿಸೆಂಬರ್ ಸಂಚಿಕೆ.

# ಸಗೋತ್ರವಿವಾಹ

ಜೀವರಾಶಿಯ ಅನೇಕ ವರ್ಗಗಳಲ್ಲಿ ಸ್ತ್ರೀಪುರುಷರೆಂಬ ಜಾತಿಭೇದವಿರುವುದು. ಈ ಜಾತಿಗಳು ಒಂದನ್ನೊಂದು ಆಶಿಸಿ ಪರಸ್ಪರ ಸಮೀಪ ಬಾಂಧವ್ಯವನ್ನು ಬೆಳಸುವುದೂ, ಇದರಿಂದ ಪ್ರಜೋತ್ಪತ್ತಿಯಾಗುವುದೂ ಸ್ವಾಭಾವಿಕ. ಇಂತಹ ಪರಸ್ಪರ ಆಶೆಯು ತಿರ್ಯಗ್ಜಂತುಗಳಲ್ಲಿ ಸಾಮಾನ್ಯವಾಗಿ ಯಾವ ನಿಯಮಕ್ಕೂ ಒಳಪಡದಿದ್ದರೂ, ಮಾನವರಾಶಿಯಲ್ಲಿ ಎಲ್ಲ ಸಂದರ್ಭಗಳಲ್ಲೂ ಜಾತಿಭೇದವನ್ನು ಮಾತ್ರ ಆಶ್ರಯಿಸಿಲ್ಲ. ಅಂದರೆ ಸ್ತ್ರೀಪುರುಷರಾಗಿದ್ದರೂ ಇಬ್ಬರು ವ್ಯಕ್ತಿಗಳು ಮತ್ತಾವುದನ್ನೂ ಲೆಕ್ಕಿಸದೆ ಒಬ್ಬರನ್ನೊಬ್ಬರು ಪ್ರೀತಿಸುವುದಿಲ್ಲ. ಹೀಗೆ ಸಂಬಂಧವನ್ನು ಬೆಳಸುವ ವ್ಯಕ್ತಿಗಳಿಗೆ ಅದಕ್ಕೆ ಮೊದಲೇ ಇನ್ನಾವ ವಿಧವಾದ ಸಮೀಪಸಂಬಂಧವೂ ಇಲ್ಲದಿದ್ದರೆ ಮುಂದೆ ಹುಟ್ಟಬಹುದಾದ ಮಕ್ಕಳಲ್ಲಿ ಆರೋಗ್ಯ, ಶಕ್ತಿವಿಶೇಷಗಳು ಗೋಚರವಾಗುವುವೆಂದೂ, ಸಂಬಂಧವನ್ನು ಬೆಳಸುವ ವ್ಯಕ್ತಿಗಳಿಗೆ ಹೆಚ್ಚು ಸುಖಕ್ಕೆ ಅವಕಾಶವಿರುವುದೆಂದೂ ಬಹಳ ಹಿಂದೆಯೇ ಮನದಟ್ಟಾದಂತೆ ತೋರುವುದು. ಇದಲ್ಲದೆ ಸಮಾಜದಲ್ಲಿ ಮತದ ಆಧಾರದಿಂದಲೊ ಇತರ ಕಾರಣಗಳಿಂದಲೊ ಪ್ರಚಾರದಲ್ಲಿದ್ದ ಪ್ರಭೇದಗಳೂ ಇಂತಹ ಸಂಬಂಧಗಳ ಕೆಲವು ನಿಯಮಗಳಿಗೆ ಕಾರಣವಾದವು. ಇಂತಹ ನಿಯಮಗಳನ್ನೆಲ್ಲ ಗಮನಿಸಿ ಕ್ರಮಪಡಿಸಿದುದರ ಪರಿಣಾಮವೇ ವಿವಾಹಪದ್ಧತಿ. ಇದು ಮಾನವನ ಮೇಲ್ಮೆ.

ವಿವಾಹ ಪದ್ಧತಿಯು ಎಲ್ಲ ದೇಶಗಳಲ್ಲೂ ಎಲ್ಲ ಕೋಮುಗಳಲ್ಲೂ ಯಾವಾಗಲೂ ಒಂದೇ ಸಮನಾಗಿಲ್ಲ. ಭಾರತಭೂಮಿಯಲ್ಲೂ ಇದಕ್ಕೆ ಪ್ರಮಾಣ ಗ್ರಂಥಗಳಾದ ಸ್ಮೃತಿಗಳಲ್ಲಿ ಕಾಲಭೇದದಿಂದ ಇದು ವ್ಯತ್ಯಸ್ತವಾಗಿರುವುದಕ್ಕೆ ಆಧಾರಗಳು ಸಿಕ್ಕುವವು. ಒಟ್ಟಿನಲ್ಲಿ ಸ್ವಲ್ಪಮಟ್ಟಿಗೆ ನಿಯಮವನ್ನು ಉಲ್ಲಂಘಿಸಿದ್ದರೆ ಅದಕ್ಕೂ ಸ್ಮೃತಿಯಲ್ಲಿ ಅವಕಾಶವಿರುವುದೆಂಬ ಭಾವನೆಯಿಂದ ಕೆಲವು ಮಾರ್ಪಾಡುಗಳನ್ನು ಜನರು ಅಂಗೀಕರಿಸಿರುವರು. ಆದರೂ ಸ್ಮೃತಿಗಳು ಕ್ರಮಗೊಂಡಾಗಿನಿಂದಲೂ ಕೆಲವು ನಿಯಮಗಳು ಮಾತ್ರ ಒಂದೇಸಮನಾಗಿ ಅನ್ವಯಿಸುತ್ತಿವೆಯೆಂದು ಹೇಳಬಹುದು. ಉದಾ.— ಸಪಿಂಡ, ಸಗೋತ್ರ, ಸಪ್ರವರ ವಿವಾಹನಿಷೇಧ. ಭಾರತೀಯ ವಿವಾಹ ಪದ್ಧತಿಗೆ ಬಾಹ್ಯಸನ್ನಿವೇಶಗಳು ಮಾತ್ರವಲ್ಲದೆ ಮತವಿಷಯಕವಾದ ಕೆಲವು ಅಂಶಗಳೂ ಆಧಾರವೆಂದು ಸಾಮಾನ್ಯಜನರ ನಂಬಿಕೆ. ಆದುದರಿಂದ ಇದನ್ನು ಮಾರ್ಪಡಿಸುವುದು ಸುಲಭವಲ್ಲ. ಆದರೆ ಕೊಂಚಕಾಲದಿಂದ ಆಯಾ ಕೋಮಿನವರು

ಮಾತ್ರ ಇಂತಹ ಸಂಗತಿಗಳನ್ನು ಪರಾಮರ್ಶಿಸಿ ಸೂಕ್ತತೋರಿದಂತೆ ಮಾರ್ಪಾಡು ಗಳನ್ನು ಮಾಡದೆ ಇವು ರಾಜಕೀಯ ಸಭೆಗಳಲ್ಲಿ ಚರ್ಚೆಗೆ ಬಂದು ವ್ಯವಸ್ಥೆಯಾಗು ತ್ತಿರುವವು. ಈ ಸಭೆಗಳಲ್ಲಿ ಇಂತಹ ವಿಷಯಗಳನ್ನು ನಿರ್ಣಯಿಸುವುದು ಸೂಕ್ತವೆ ಎಂಬ ದೊಡ್ಡ ವಿಷಯಕ್ಕೆ ಇಲ್ಲಿ ಕೈ ಹಾಕುವುದಿಲ್ಲ.

ಸಪಿಂಡರು, ಸಗೋತ್ರರು, ಸಪ್ರವರರು ಪರಸ್ಪರ ಮದುವೆಯಾಗಕೂಡದೆಂದು ಸಾಮಾನ್ಯ ಸಂಪ್ರದಾಯವಿರುವುದು. ಈ ಮೂರು ರಾಶಿಗಳಲ್ಲಿ ಸಪಿಂಡರೆಂಬವರು ಸ್ಥೂಲದೃಷ್ಟಿಯಿಂದ ಸಾಕ್ಷಾತ್ತಾಗಿಯೊ ಪರಂಪರೆಯಾಗಿಯೊ ಒಂದೇ ಶರೀರದ ಅವಯವ ಉಳ್ಳವರು.[1] ಪ್ರಸಕ್ತ ವಿಷಯದಲ್ಲಿ ತಂದೆಯ ಮೂಲಕವೊ, ತಾಯಿಯ ಮೂಲಕವೊ ಏಳು ತಲೆಮಾರಿಗೆ ಸೇರಿದವರೆನ್ನಬಹುದು.[2] ಅಂದರೆ ಮದುವೆಯಾಗ ಲೆಳಸುವ ಸ್ತ್ರೀಪುರುಷರು ಇಷ್ಟು ಹತ್ತಿರದ ನೆಂಟರನ್ನು ಬಿಡತಕ್ಕದ್ದೆಂದು ತಾತ್ಪರ್ಯ. ಈ ನಿಷೇಧಕ್ಕೆ ರಕ್ತಸಂಬಂಧವೇ ಕಾರಣವೆಂದಾಯಿತು. ಒಬ್ಬನೇ ಮೂಲಋಷಿಯ ಗೋತ್ರಕ್ಕೆ ಸೇರಿದವರು ಸಗೋತ್ರರು. ವೇದರಾಶಿಯ ಮಂತ್ರಗಳು ಯಾರೂ ಬರೆದ ವಲ್ಲ, ಅನಾದಿಸಿದ್ಧ. ಆದರೂ ಒಂದೊಂದು ಮಂತ್ರಕ್ಕೆ ಒಬ್ಬೊಬ್ಬ ಋಷಿಯೆಂದು ವ್ಯವಹರಿಸುವುದು ಆ ಋಷಿಯೇ ಅದನ್ನು ಮೊಟ್ಟಮೊದಲು ಸಾಕ್ಷಾತ್ಕರಿಸಿದನೆಂಬು ದರಿಂದ ಮಾತ್ರ. ಈಗ ಯಾವನಾದರೂ ಋಷಿಯ ಗೋತ್ರಕ್ಕೆ ಸೇರಿದವರೆಂದರೆ ಅವನ ಸಂತತಿಯವರೆಂದು ತಾತ್ಪರ್ಯ. ಸಗೋತ್ರರೆಂದರೆ ಈಗ ಎಲ್ಲ ಸಂದರ್ಭ ಗಳಲ್ಲೂ ಪರಸ್ಪರ ರಕ್ತಸಂಬಂಧವುಳ್ಳವರೆಂದು ಹೇಳುವಂತಿಲ್ಲ. ಇವರು ಮದುವೆಯಾಗ ಕೂಡದೆಂದು ನಿಷೇಧಿಸಿರುವುದನ್ನು ನೋಡಿದರೆ ಇಲ್ಲೂ ಸ್ಥೂಲದೃಷ್ಟಿಗೆ ಗೋಚರ ವಾಗದಿದ್ದರೂ ರಕ್ತಸಂಬಂಧವೇ ನಿಮಿತ್ತವೆಂದು ಊಹಿಸಬೇಕಾಗಿದೆ.

ಪ್ರವರಭೇದವು ಮತ್ತೊಂದು ಕ್ರಮವನ್ನು ಅನುಸರಿಸುವುದು. ಅನೇಕ ಋಷಿ ಗಳನ್ನು ಒಟ್ಟುಗೂಡಿಸಿ ಒಂದು ಸಮೂಹವಾಗಿ ವ್ಯವಹರಿಸುವುದುಂಟು. ಇಂತಹ ಸಮುದಾಯಕ್ಕೆ ಸಾಮಾನ್ಯವಾಗಿ ಮೂವರು ಅಥವಾ ಐದು ಋಷಿಗಳನ್ನು ಸೇರಿಸ ಬಹುದು. ಅಂದರೆ ಪ್ರವರಗಳು 'ತ್ರ್ಯಾರ್ಷ' ಅಥವಾ 'ಪಂಚಾರ್ಷ'ಗಳಾಗ ಬಹುದು. ಉದಾ: 'ವೈಶ್ವಾಮಿತ್ರ, ಅಘಮರ್ಷಣ, ಕೌಶಿಕ ಮೂವರು ಸೇರಿದ

---

[1] ಸಾಕ್ಷಾತ್ಪರಂಪರಯಾವಾ ಏಕಶರೀರಾವಯವಾನ್ವಯಃ

ವಿಜ್ಞಾನೇಶ್ವರ—ಯಾ. ಸ್ಮೃ. II, 52.

[2] ಯಾಜ್ಞವಲ್ಕ್ಯಸ್ಮೃತಿಯಲ್ಲಿ ತಾಯಿಯ ಕಡೆ ಐದು ತಲೆಮಾರಿನವರನ್ನೂ ತಂದೆಯ ಕಡೆ ಏಳು ತಲೆಮಾರಿನವರನ್ನೂ ಮದುವೆಯಾಗಕೂಡದೆಂದು ಸ್ವಲ್ಪ ಮತಭೇದವಿರುವುದು.

—ಯಾ. ಸ್ಮೃ. II, 53.

ತ್ರ್ಯಾರ್ಷಪ್ರವರವು ಕೌಶಿಕ ಗೋತ್ರದವರದು. ಆಂಗೀರಸ, ಬಾರ್ಹಸ್ಪತ್ಯ, ಭಾರದ್ವಾಜ ಮೂವರು ಸೇರಿದ ತ್ರ್ಯಾರ್ಷಪ್ರವರವು ಭಾರದ್ವಾಜ ಗೋತ್ರದವರದು. ಭಾರ್ಗವ, ಚ್ಯವನ, ಆಪ್ನವಾನ, ಔರ್ವ, ಜಾಮದಗ್ನ್ಯ ಐದು ಋಷಿಗಳು ಸೇರಿದ ಪಂಚಾರ್ಷ ಪ್ರವರವು ಶ್ರೀವತ್ಸ ಗೋತ್ರದವರದು. ಕೆಲವು ವೇಳೆ ಗೋತ್ರಋಷಿಯ ಹೆಸರು ಪ್ರವರದಲ್ಲಿ ಬರುವುದೂ ಉಂಟು. ಮೇಲೆ ನಿರ್ದಿಷ್ಟವಾದ ಕೌಶಿಕ ಮತ್ತು ಭಾರದ್ವಾಜ ಗೋತ್ರಗಳ ಪ್ರವರಗಳನ್ನು ಗಮನಿಸಬಹುದು. ಒಂದೇ ಪ್ರವರವೆಂಬುದನ್ನು ನಿರ್ಣಯಿಸಲು ಸುಲಭವಲ್ಲ. ಪ್ರವರಗಳಲ್ಲಿ ಪ್ರಧಾನರಾದ ಋಷಿಗಳ ಹೆಸರನ್ನಾಶ್ರಯಿಸಿ, ಭೃಗುಗಣ, ಅಂಗಿರೋಗಣ ಎಂದು ಮುಂತಾಗಿ ವ್ಯವಹರಿಸಿ ಇವುಗಳಲ್ಲಿ ಪಂಚಾರ್ಷ ಮತ್ತು ತ್ರ್ಯಾರ್ಷ ಪ್ರವರಗಳಲ್ಲಿ ಮೂವರು ಋಷಿಗಳೊ ಅಥವಾ ಒಬ್ಬನೇ ಋಷಿಯೊ ಸಮನಾಗಿದ್ದರೆ ಆಗ ಒಂದೇ ಪ್ರವರವಾಗುವುದೆಂಬುದು ಸ್ಥೂಲವಾದ ಮಾರ್ಗ. ಹೆಚ್ಚು ವಿವರಗಳನ್ನು 'ಗೋತ್ರಪ್ರವರನಿಬಂಧ'ವೆಂಬ ಗ್ರಂಥದಿಂದ ತಿಳಿಯಬಹುದು.

ಆಧುನಿಕ ಸಮಾಜಸುಧಾರಕರು ಇದನ್ನು ಮಾರ್ಪಡಿಸಬೇಕಾದರೆ ಎರಡು ಮಾರ್ಗಗಳನ್ನು ಹಿಡಿಯಬಹುದು! ಸ್ಮೃತಿಗಳಲ್ಲಿ ಇಂತಹ ನಿರ್ಬಂಧಗಳೇ ಇಲ್ಲವೆಂದೊ, ಅಂತಹ ವಚನಗಳಿದ್ದರೆ ಅವುಗಳಿಗೆ ಬೇರೆ ತಾತ್ಪರ್ಯವೆಂದೊ ಕಲ್ಪಿಸುವುದು ಮೊದಲನೆಯದು. ಯುಕ್ತಿವಾದದಿಂದ ಅಂತಹ ವಚನಗಳು ಸಮಂಜಸವಲ್ಲವೆಂದೊ, ಈಗಿನ ವಾತಾವರಣಕ್ಕೆ ಅವು ಸರಿಬೀಳುವುದಿಲ್ಲವೆಂದೊ ವಾದಿಸುವುದು ಎರಡನೆಯ ಮಾರ್ಗ. ಪ್ರಕೃತ ವಿಷಯದಲ್ಲಿ ಮಹಾರಾಷ್ಟ್ರದ ಪಂಡಿತರಿಬ್ಬರು ಮೇಲೆ ಸೂಚಿಸಿದ ಒಂದೊಂದು ಮಾರ್ಗವನ್ನು ಹಿಡಿದು ಸಗೋತ್ರ ಸಪ್ರವರ ವಿವಾಹಗಳನ್ನು ಸಮರ್ಥಿಸಿರುವರು.

ಮನುಸ್ಮೃತಿಯಲ್ಲಿ ಸಗೋತ್ರವಿವಾಹವನ್ನು ನಿಷೇಧಿಸುವ—

> ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ |
> ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೆ || III, 5.

ಎಂಬ ಶ್ಲೋಕವಿರುವುದು. ಇದರ ಪೂರ್ವಾರ್ಧವು ಗಮನಾರ್ಹ. ಇಲ್ಲಿ 'ಮಾತುಃ' ಎಂಬುದರೊಡನೆ 'ಅಸಪಿಂಡಾ' ಎಂಬುದೂ 'ಪಿತುಃ' ಎಂಬುದರೊಡನೆ 'ಅಸಗೋತ್ರಾ' ಎಂಬುದೂ ಅನ್ವಯಿಸುವುವೆಂದು ಎಲ್ಲರಿಗೂ ವ್ಯಕ್ತವಾಗುವುದು. ಆದರೆ ಇಲ್ಲಿ 'ಚ' ಶಬ್ದವನ್ನು ಎರಡಾವೃತ್ತಿ ಪ್ರಯೋಗಿಸಿರುವುದರಿಂದ 'ಅಸಪಿಂಡಾ' 'ಅಸಗೋತ್ರಾ' ಶಬ್ದಗಳನ್ನು 'ಪಿತುಃ' 'ಮಾತುಃ' ಎಂಬ ಎರಡು ಶಬ್ದಗಳೊಡನೆಯೂ ಅನ್ವಯಿಸಿ ತಾಯಿಯ ಅಸಗೋತ್ರಳೂ, ಅಸಪಿಂಡಳೂ, ತಂದೆಯ ಅಸಗೋತ್ರಳೂ,

ಅಸಪಿಂಡಳೂ ಆದ ಕನ್ಯೆಯು ವಿವಾಹಕ್ಕೆ ಶ್ರೇಷ್ಠಳೆಂದು ಕುಲ್ಲೂಕಭಟ್ಟ, ಮೇಧಾತಿಥಿ ಮುಂತಾದ ಪ್ರಸಿದ್ಧ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುವರು. ಮೂಲಲೇಖಕರ ಆಶಯವೂ ಇದೇ ಎಂಬುದನ್ನು ಮನುಸ್ಮೃತಿಯ XI, ೧೭೧—೨ನೆಯ ಶ್ಲೋಕಗಳೂ ಸಮರ್ಥಿಸುವವು. ಮೇಧಾತಿಥಿ ತನ್ನ ವ್ಯಾಖ್ಯಾನಕ್ಕೆ ಆಧಾರವಾಗಿ ಗೌತಮಧರ್ಮ ಸೂತ್ರದಿಂದ 'ಅಸಮಾನಪ್ರವರೈರ್ವಿವಾಹಃ' ಎಂಬುದನ್ನೂ ಯಾಜ್ಞವಲ್ಕ್ಯಸ್ಮೃತಿ ಯಿಂದ 'ಅಸಮಾನಾರ್ಷಗೋತ್ರಜಾಮ್' ಎಂಬುದನ್ನೂ ಉದಾಹರಿಸಿರುವನು.

ಇದರಂತೆ ಯಾಜ್ಞವಲ್ಕ್ಯಸ್ಮೃತಿಯ 'ಅಸಮಾನಾರ್ಷಗೋತ್ರಜಾಮ್,' ಎಂಬುದನ್ನು ವ್ಯಾಖ್ಯಾನಮಾಡುವಲ್ಲಿ ವಿಜ್ಞಾನೇಶ್ವರರು ಮನುಸ್ಮೃತಿಯ ಮೇಲ್ಕಂಡ ಶ್ಲೋಕವನ್ನು ಆಧಾರವಾಗಿ ಕೊಟ್ಟಿರುವರು. ಈಗ ಪ್ರಚಾರದಲ್ಲಿರುವ ಮಿತಾಕ್ಷರದ (ವಿಜ್ಞಾನೇಶ್ವರರ ವ್ಯಾಖ್ಯಾನದ ಹೆಸರು) ಅಚ್ಚುಹಾಕಿದ ಪ್ರತಿಗಳಲ್ಲಿ ಮನುಸ್ಮೃತಿಯ ಶ್ಲೋಕದ ಎರಡನೆಯ ಪಾದದಲ್ಲೂ 'ಅಸಗೋತ್ರಾ' ಶಬ್ದಕ್ಕೆ ಬದಲಾಗಿ 'ಅಸ ಪಿಂಡಾ' ಶಬ್ದವನ್ನೆ ಆವೃತ್ತಿಮಾಡಿರುವರು. ಇದನ್ನು ನೋಡಿ ತಮ್ಮ ಅಭಿಸಂಧಿಗೆ ಅನುಕೂಲವಾಗುವುದೆಂದು ಭಾವಿಸಿದ ಶ್ರೀ ಕೆ. ಬಿ. ಗಜೇಂದ್ರಗಡ್ಕರವರು, ವಿಜ್ಞಾ ನೇಶ್ವರರಿಗೆ ಗ್ರಾಹ್ಯವಾಗಿದ್ದುದರಿಂದ ಮನುಸ್ಮೃತಿಯ ಶ್ಲೋಕದ ಈ ಪಾಠವೇ ಪ್ರಾಮಾಣಿಕವೆಂದು ವಾದಿಸಿರುವರು.[1] ಇದು ತಪ್ಪು.

ಮೊದಲನೆಯದಾಗಿ ಪಾಠವನ್ನು ನಿರ್ಣಯಿಸಲು ಪ್ರಾಚೀನ ತಾಳಪ್ರತಿಗಳಲ್ಲಿ ಲೇಖಕಪ್ರಮಾದಕ್ಕೆಡೆಗುಡದವು ಮಾತ್ರ ಸಹಾಯಕವಾಗುವವು. ಮನುಸ್ಮೃತಿ ಯನ್ನು ವ್ಯಾಖ್ಯಾನಸಹಿತವಾಗಿ ಪರಿಷ್ಕರಿಸಿ ಪರಿವರ್ತಿಸಲು ಅನೇಕ ವರ್ಷ ಶ್ರಮಿಸಿದ ಶ್ರೀ ಮ. ಮ. ಗಂಗಾನಾಥಝಾ ರವರು ಇತರ ಶ್ಲೋಕಗಳ ಪಾಠಭೇದವನ್ನು ಕುರಿತು ಟೀಕಿಸಿದ್ದರೂ ಈ ಶ್ಲೋಕದ ವಿಷಯದಲ್ಲಿ ಯಾವ ಪಾಠಾನ್ತರವನ್ನೂ ಗಮನಿಸಿಲ್ಲ.[2] ಮತ್ತು ವಿಜ್ಞಾನೇಶ್ವರರು ಈ ಶ್ಲೋಕವನ್ನು ಸಗೋತ್ರಕನ್ಯೆಯನ್ನು ಬಿಡುವುದು ಯುಕ್ತವೆಂದು ಸಮರ್ಥಿಸಲು ಆಧಾರವಾಗಿ ಉದಾಹರಿಸಿರುವರೆಂದು ಬರೆದಿರುವರು.[3] ಈ ವಚನವನ್ನು ಉದಾಹರಿಸಿರುವ ಪರಾಶರಮಾಧವೀಯ,[4] ನಿರ್ಣಯಸಿಂಧು[5] ಮುಂತಾದ ಗ್ರಂಥಗಳಲ್ಲೂ ಎರಡನೆಯ ಪಾದದಲ್ಲಿ 'ಅಸಗೋತ್ರಾ' ಎಂಬ ಪಾಠ ವನ್ನೆ ಅನುಸರಿಸಿರುವರು. ಧರ್ಮಶಾಸ್ತ್ರವನ್ನು ಕುರಿತು ಆಂಗ್ಲಭಾಷೆಯಲ್ಲಿ ಗ್ರಂಥ

---

[1] *Annals of the Bhandarkar* Oriental Research Institute—Silver Jubilee Number, pp. 143-5 ನೋಡಿ.

[2] *Manu Smṛti Notes*—Vol. I, pp. 93-4.

[3] ,, ,, —Vol. II, p. 162.

[4] *Islampurkar's Edition*—Vol. II, p. 62.

[5] *Nirnaya Sagar Edition*—p. 202.

ಗಳನ್ನು ರಚಿಸಿ ಅಥವಾ ಪರಿವರ್ತಿಸಿರುವ ಶ್ರೀಗಳಾದ ಮ. ಮ. ಕಾಣೆ,[1] ಮಂಡಲಿಕ್,[2] ಘೋಸ್,[3] ವೆಸ್ಟರ್‌ಮಾರ್ಕ್[4], ಬ್ಯೂಲರ್[5] ಮುಂತಾದ ಲೇಖಕರೆಲ್ಲರೂ 'ಅಸಗೋತ್ರಾ' ಎಂಬ ಪಾಠವನ್ನೆ ಅಂಗೀಕರಿಸಿರುವರು.

ಎರಡನೆಯದಾಗಿ ವಿಜ್ಞಾನೇಶ್ವರರಿಗೂ ಈ ಪಾಠವು ಗ್ರಾಹ್ಯವಾಗಿದ್ದಿರಲಾರದು. ಅವರು ಈ ಶ್ಲೋಕವನ್ನು ಯಾಜ್ಞವಲ್ಕ್ಯಸ್ಮೃತಿಯ I. ೫೩ರಲ್ಲಿರುವ 'ಅಸಮಾನಾರ್ಷಗೋತ್ರಜಾಮ್' ಶಬ್ದದ ವ್ಯಾಖ್ಯಾನದಲ್ಲಿ ಉದಾಹರಿಸಿರುವರು. ಯಾಜ್ಞವಲ್ಕ್ಯಸ್ಮೃತಿಯ I. ೫೨ರಲ್ಲಿ 'ಅಸಪಿಂಡಾಮ್' ಎಂಬ ಶಬ್ದವೇ ಇರುವುದು. ಮನುಸ್ಮೃತಿಯ ಶ್ಲೋಕದ ಎರಡು ಪಾದಗಳಲ್ಲೂ 'ಅಸಪಿಂಡಾ' ಎಂಬ ಪಾಠವೇ ಗ್ರಾಹ್ಯವಾಗಿದ್ದರೆ ಅವರು ಆ ಶ್ಲೋಕವನ್ನು ಯಾಜ್ಞವಲ್ಕ್ಯಸ್ಮೃತಿಯ I. ೫೨ರಲ್ಲೆ ಉದಾಹರಿಸಬೇಕಾಗಿತ್ತು. ಯಾ. ಸ್ಮೃತಿಯ I. ೫೩ರಲ್ಲೂ 'ಆರ್ಷ' ಶಬ್ದಕ್ಕೆ ಪ್ರವರವೆಂದು ವ್ಯಾಖ್ಯಾನಮಾಡಿ ಅದಕ್ಕೆ ಗೌತಮರ 'ಅಸಮಾನಪ್ರವರೈರ್ವಿವಾಹಃ' ಎಂಬ ಆಧಾರವನ್ನು ಕೊಟ್ಟು ಮುಂದಿನ 'ಅಸಮಾನ—ಗೋತ್ರಜಾಮ್' ಎಂಬುದರ ವ್ಯಾಖ್ಯಾನದಲ್ಲಿ ಮನುಸ್ಮೃತಿಯ ಪ್ರಸಕ್ತಶ್ಲೋಕವನ್ನು ಕೊಟ್ಟಿರುವರು. ಆದುದರಿಂದ ಆ ಶ್ಲೋಕದ ಎರಡನೆಯ ಪಾದದಲ್ಲಿರುವ 'ಅಸಗೋತ್ರಾ' ಶಬ್ದವೇ ಅವರ ಮುಖ್ಯ ಉದ್ದೇಶ. ಮುಂದೆ ಅವರು ಬರೆದಿರುವ ತಾಯಿಯ ಸಗೋತ್ರಳನ್ನೂ ಮದುವೆಯಾಗಕೂಡದೆಂದು ಕೆಲವರು ಅಭಿಪ್ರಾಯಪಡುವರೆಂಬ ವಾಕ್ಯವೂ ಇದನ್ನು ದೃಢಪಡಿಸುವುದು.[6]

ಜನಸಾಮಾನ್ಯದಲ್ಲೂ ಅತ್ಯಂತ ಪ್ರಸಿದ್ಧವಾದ ಮನುಸ್ಮೃತಿಯೇ ಸಗೋತ್ರವಿವಾಹವನ್ನು ನಿಷೇಧಿಸುವುದಿಲ್ಲವೆಂದು ಸಾಧಿಸಲು ಶ್ರೀ ಗಜೇಂದ್ರಗಡ್ಕರರವರು ನಡೆಸಿದ ಪ್ರಯತ್ನವು ಸರ್ವಥಾ ಭ್ರಾನ್ತಿಯೆಂದು ಇದರಿಂದ ಸಿದ್ಧವಾಯಿತು. ಇನ್ನು ತಮ್ಮ ಲೇಖನದಲ್ಲಿ ಪ್ರಾಚೀನ ವ್ಯಾಖ್ಯಾನಕಾರರಾದ ಕುಲ್ಲೂಕಭಟ್ಟರ ಮೇಲೆ ಇವರೆತ್ತಿರುವ ಉದ್ಗಾರವೂ ಭ್ರಾನ್ತಿವಿಲಸಿತವೇ ಎಂಬುದನ್ನು ನನ್ನ ಆಂಗ್ಲ ಲೇಖನದಲ್ಲಿ ವಿವರಿಸಿದ್ದೇನೆ.

ಧರ್ಮಶಾಸ್ತ್ರಗಳನ್ನು ಕೂಲಂಕಷವಾಗಿ ಪರಿಶೀಲಿಸಿರುವ ಉದ್ದಾಮಪಂಡಿತರಾದ ಶ್ರೀ ಮ.ಮ. ಪಿ. ವಿ. ಕಾಣೆಯವರು ಮೇಲ್ಕಂಡ ಶಾಸ್ತ್ರೀಯ ತತ್ತ್ವವನ್ನು

---

[1] *History of Dharma Sastra*—Vol. II, Part I, p. 499.
[2] *Vyavaharamayukha*—p. 439, Footnote 1.
[3] *Hindu Law*—p. 708.
[4] *The History of Human Marriage*—p. 119.
[5] *Sacred Books of the East*—Vol. 25, p. 75.
[6] ಪಾಠ ವಿಷಯದಲ್ಲಿ ನನ್ನ ಲೇಖನವನ್ನು ಶ್ರೀ ಮ. ಮ. ಕಾಣೆಯವರೂ, ಶ್ರೀ ಜಸ್ಟಿಸ್ ಎಸ್. ವರದಾಚಾರಿಯವರೂ ಅನುಮೋದಿಸಿರುವರು.

ಮನಗಂಡಿರುವರು. ಸಾಮಾಜಿಕ ಸುಧಾರಣೆಗೆ ಯಾವಾಗಲೂ ಶಾಸ್ತ್ರಾಧಾರವಿದ್ದೇ ಇರಬೇಕೆಂದು ಹಟಮಾರಿತನ ಮಾಡುವುದು ಸರಿಯಲ್ಲವೆಂದು ಇವರ ಮತ. ಆದುದ ರಿಂದ ಸಗೋತ್ರ ಸಪ್ರವರ ವಿವಾಹಗಳು ನ್ಯಾಯಬದ್ಧವೆಂದು ಕಾನೂನು ಮಾಡಲು ಸೂಚನೆಯನ್ನು ಕೊಟ್ಟು ಅವನ್ನು ಸ್ವತಂತ್ರಯುಕ್ತಿಗಳಿಂದ ಸಾಧಿಸಲು ಯತ್ನಿಸಿರುವರು.[1] ಕೆಲವು ತಿಂಗಳ ಹಿಂದೆ ಕೇಂದ್ರ ಸಭೆಯಲ್ಲಿ ಡಾ|| ದೇಶಮುಖ ರವರು ಮಂಡಿಸಿದ್ದ ಇದನ್ನು ಕುರಿತ ಮಸೂದೆಗೂ ಇದೇ ಕಾರಣವಾಗಿರಬಹುದು. ಬಹಳ ಹಿಂದಿನ ತಲೆಮಾರಿಗೆ ಸೇರಿದ ಪೂರ್ವಜರಾದ ಗೋತ್ರ ಋಷಿಗಳ ಶರೀರದ ಕಣಗಳು ಈಚಿನವರ ದೇಹವನ್ನು ವ್ಯಾಪಿಸಲಾರವೆಂದು ಇವರ ಭಾವನೆ. ಇದಕ್ಕೆ ಪ್ರಾಣಿಶಾಸ್ತ್ರದ ಬೆಂಬಲ ಸಾಲದು. ಈಚೆಗೆ ಆ ಶಾಸ್ತ್ರದಲ್ಲಿ ಶೋಧನೆಗಳನ್ನು ನಡೆ ಸಿರತಕ್ಕವರು ಸನ್ನಿವೇಶಮಹಿಮೆಯಿಂದ ವಂಶಾನುಕ್ರಮವಾಗಿ ಬಂದ ಕೆಲವು ಚಿಹ್ನೆಗಳು ಸ್ವಲ್ಪ ವ್ಯತ್ಯಸ್ತವಾಗಬಹುದೆಂದು[1] ಒಪ್ಪಿದರೂ ಅಂತಹ ಚಿಹ್ನೆಗಳು ಪೂರ್ತಿ ಅಳಿಸಿಹೋಗುವುವೆಂದು ಒಪ್ಪುವುದಿಲ್ಲ. ಇಂತಹ ಊಹೆಗಳನ್ನು ಮುಂದಿಟ್ಟು ಕೊಂಡು ಸಮಾಜದಲ್ಲಿ ಅನಾದಿಸಿದ್ಧವೆಂದು ಆಚರಣೆಯಲ್ಲಿರುವ ಕಟ್ಟಳೆಗಳನ್ನು ಮಾರ್ಪಡಿಸುವುದು ಸೂಕ್ತವಾಗದು.

ಅನೇಕ ಪ್ರಾಚೀನ ಸಂಪ್ರದಾಯಗಳು ತಲೆಕೆಳಗಾಗಿರುವುದಕ್ಕೆ ಸಮ್ಮತಿಸಿರು ವವರು ಇದೊಂದು ಶೇಷವನ್ನೇಕೆ ಕಟ್ಟಿಕೊಳ್ಳಬೇಕೆಂದು ಇವರ ಆಕ್ಷೇಪ. ಈ ದೃಷ್ಟಿಯೂ ಸರಿಯಲ್ಲ. ಯಾವುದನ್ನು ಆಚರಣೆಯಲ್ಲಿಟ್ಟುಕೊಳ್ಳುವುದು ಸೂಕ್ತವೆಂಬು ದನ್ನು ಆಯಾ ಕಾಲಮುಗಳಲ್ಲಿ ಅನುಭವ ಪಾಂಡಿತ್ಯಗಳುಳ್ಳ ಹಿರಿಯರು ಕಲೆತು ನಿರ್ಧರಿಸಬೇಕು. ಕಾಲನಿಮಿತ್ತವಾಗಿಯೊ, ರಾಜಕೀಯ ವಾತಾವರಣದಿಂದಲೊ ಸಂಭವಿಸಿರುವ ಕೆಲವು ಮಾರ್ಪಾಡುಗಳು ನಿರ್ವಾಹವಿಲ್ಲದೆ ತಲೆದೋರಿದ್ದರೂ ಇವೆಲ್ಲ ವನ್ನೂ ಸಮಾಜವು ಯಾವ ಆಕ್ಷೇಪಣೆಯೂ ಇಲ್ಲದೆ ಒಳಗೊಂಡಿಲ್ಲ.

ಧರ್ಮಶಾಸ್ತ್ರಗಳೂ ಕೆಲವುವೇಳೆ ಸಂಭವಿಸಬಹುದಾದ ಅನನುಕೂಲಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಿಯಮಗಳನ್ನು ಎಲ್ಲಿನವರೆಗೆ ಸಡಿಲಿಸಬಹುದೆಂಬುದನ್ನು ಗಮನಿಸಿವೆ. ಸಪಿಂಡ, ಸಗೋತ್ರ, ಸಪ್ರವರ ವಿವಾಹವನ್ನು ನಿಷೇಧಿಸಿದ್ದರೂ ಅಶಕ್ತರು ಸಂಕಟಬಂದಲ್ಲಿ ಮಾತ್ರ ಸಪಿಂಡರಲ್ಲೂ ಅತಿ ಸನ್ನಿಹಿತರಲ್ಲದ ಕೆಲವರನ್ನು ಮದುವೆಮಾಡಿಕೊಳ್ಳಲು ಅವಕಾಶಕೊಟ್ಟಿರುವುವು.[2] ವಿವರಗಳನ್ನು ಲಂಬಿಸದೆ ಒಟ್ಟಿನಲ್ಲಿ ಈ ಸಾಪಿಂಡ್ಯಸಂಕೋಚವು ಒಂದೇ ಸಂತತಿಗೆ ಸೇರಿದವರನ್ನು ಮದುವೆಯಾಗ

[1] *History of Dharma Sastra*—Vol II, Part I, p. 498.

[2] ಧರ್ಮಸಿಂಧು. I ಭಾಗ. ಮೂರನೆಯ ಪರಿಚ್ಛೇದ 50—51.

ಕೂಡದೆಂದು ತಿಳಿಸುವುದು. ಸೋದರಮಾವನ ಮಗಳ ಪಾವೆಯಿರುವವರನ್ನೂ ಮದುವೆಯಾಗಲು ಇದು ಅವಕಾಶಕೊಡುವುದು. ಇದು ಸಾಕ್ಷಾತ್ ಸೋದರ ಮಾವನ ಮಗಳಿಗೆ ಅನ್ವಯಿಸುವುದೆಂದು ಭ್ರಾನ್ತಿಗೊಳ್ಳಕೂಡದು. ಈ ಸಂದರ್ಭದಲ್ಲಿ ಬರುವ ಒಂದು ವಾಕ್ಯವು ಬಹಳ ಗಮನಾರ್ಹ. "ತಂದೆಯ ಅಣ್ಣತಮ್ಮಂದಿರ ಪಾವೆಯುಳ್ಳವರ ಮಗಳನ್ನು ಮದುವೆಯಾಗಕೂಡದೆಂ"ದು ಸ್ಪಷ್ಟವಾಗಿ ನಿಷೇಧಿಸಿ ಇದಕ್ಕೆ 'ಸಗೋತ್ರತ್ವಾತ್' ಎಂಬ ಕಾರಣವನ್ನು ಕೊಟ್ಟಿರುವರು. ಆದುದರಿಂದ ಅಶಕ್ತರು ಸಂಕಟಗಳಲ್ಲೂ ಸಗೋತ್ರ ವಿವಾಹವನ್ನು ನಡೆಸಕೂಡದೆಂಬುದೇ ಶಾಸ್ತ್ರಕ್ಕೆ ಅಭಿಮತ.

ಮನುವು ಹತ್ತು ಕುಲಗಳಿಗೆ ಸೇರಿದ ಕನ್ಯೆಯರನ್ನು ಬಿಡಬೇಕೆಂದು ಕೆಲವು ಕುಲ ದೋಷಗಳನ್ನು ಪರಿಗಣಿಸಿದ್ದರೂ[1] 'ಸ್ತ್ರೀರತ್ನಂ ದುಷ್ಕುಲಾದಪಿ' (II. 238.) ಎಂದು ದುಷ್ಕುಲಕ್ಕೆ ಅವಕಾಶಕೊಟ್ಟಿದ್ದರೂ 'ಸ್ವಕುಲಕ್ಕೆ' ಅಂತಹ ಅವಕಾಶವನ್ನು ಕೊಟ್ಟಿಲ್ಲ. ಮೇಧಾತಿಥಿಯೂ[2] ವಿಜ್ಞಾನೇಶ್ವರರೂ[3] ಸ್ಪಷ್ಟವಾಗಿ ಸಗೋತ್ರವಿವಾಹಗಳು ಅಸಿದ್ಧ ವೆಂದಿರುವರು. ಬೋಧಾಯನರ ಕಾಲದಿಂದಲೂ ಇವು ನಿಷಿದ್ಧವಾಗಿ ಅತಿಕ್ರಮಿಸಿ ದವರಿಗೆ ಕೆಲವು ಶಿಕ್ಷೆಗಳನ್ನೂ ವಿಧಿಸಿರುವರು.[4]

ಸಂಪ್ರದಾಯವೂ ಇದಕ್ಕೆ ಅನುಗುಣವಾಗಿಯೇ ಇರುವುದು. ಕನ್ಯಾದಾನ ವನ್ನು ಸ್ವಜನರಿಗೇ ಮಾಡಬೇಕು. ಇಲ್ಲದಿದ್ದರೆ ಪತಿತರಾಗುವರೆಂಬ ನಿಯಮವಿದ್ದರೂ ನಿರ್ವಾಹವಿಲ್ಲದ ಕೆಲವು ಸಮಯಗಳಲ್ಲಿ ಜನರು ಇತರ ಒಳಪಂಗಡಗಳಲ್ಲೂ ಹೆಣ್ಣು ಕೊಟ್ಟು ತರುತ್ತಿರುವರು. ತಮ್ಮ ಜನರಲ್ಲೇ ಸಗೋತ್ರದವರಿಗೆ ಕೊಡುವುದಿಲ್ಲ. ದಕ್ಷಿಣ ದೇಶದ ತಮಿಳರಲ್ಲಿ ಅನೇಕ 'ಬೃಹಚ್ಚರಣ'ಗಳೆಂಬ ಒಳಪಂಗಡಗಳು ಹಿಂದೆ ತಮ್ಮ ತಮ್ಮ ಪಂಗಡಗಳಲ್ಲದೆ ಹೊರಗೆ ಸಂಬಂಧ ಬೆಳಸುತ್ತಿರಲಿಲ್ಲ. ಈಚೆಗೆ ಈ ನಿಯಮ ಸಡಿಲಿರುವುದು ಮಾತ್ರವಲ್ಲದೆ ಇವರು 'ವಡಮ' 'ಸಂಕೇತಿ'ಗಳೆಂಬ ಇತರ ಒಳಪಂಗಡಗಳೊಡನೆಯೂ ವಿವಾಹಸಂಬಂಧವನ್ನು ನಡೆಸುತ್ತಿರುವರು. ವರದಕ್ಷಿಣೆ ಮುಂತಾದ ದುಸ್ಸಂಪ್ರದಾಯಗಳು ಪ್ರಬಲವಾಗಿರುವ ಇತರ ಪಂಗಡಗಳಲ್ಲೂ ಹೀಗೆಯೇ ಇರಬಹುದು. ಸಿದ್ಧಾನ್ತದೃಷ್ಟಿಯಿಂದ ಸ್ಮಾರ್ತರನ್ನು "ನಿತ್ಯಬದ್ಧ"ರೆಂದು ದೂಷಿಸಿದರೂ ಮಾಧ್ವರು ಸ್ಮಾರ್ತಕನ್ಯೆಯರನ್ನು ತಂದುಕೊಳ್ಳುವರು. ಈ ಮಾರ್ಪಾಡು

---

[1] ಮನುಸ್ಮೃತಿ, III, 6—7.

[2] ,, III, 11.

[3] ಯಾಜ್ಞವಲ್ಕ್ಯಸ್ಮೃತಿ, II, 53.

[4] ಮ. ಮ. ಕಾಣೆ—*History of Dharma Sastra*, II, i. p. 487.

ಗಳೆಲ್ಲವೂ ದೂರಸಂಬಂಧವನ್ನೇ ಅನುಮೋದಿಸುತ್ತವಲ್ಲದೆ ಸಗೋತ್ರ ಸಪ್ರವರವೆಂಬ ಸಮೀಪ ಸಂಬಂಧಕ್ಕೆಡೆಗೊಡುವುದಿಲ್ಲ.

ಮೇಲೆ ಸೂಚಿಸಿದ ಮಸೂದೆಯ ಆವಶ್ಯಕತೆಯನ್ನು ಸಾಧಿಸಲು ಶ್ರೀ. ಮ. ಮ. ಕಾಣೆಯವರು ಕೊಟ್ಟಿರುವ ಒಂದು ಯುಕ್ತಿಯು ಸರಿಯಾಗಿಲ್ಲ. ಪೂನಾ, ಬೊಂಬಾಯಿ ಪಟ್ಟಣಗಳ ನೆರೆಹೊರೆಯಲ್ಲಿ ವಿದ್ಯಾಭ್ಯಾಸದಲ್ಲಿ ಮುಂದುವರಿದಿರುವ ಕೆಲವು ಮಹಾ ರಾಷ್ಟ್ರ ಬ್ರಾಹ್ಮಣ ಪಂಗಡಗಳಿರುವವು. ಪ್ರೌಢಕಲಾಶಾಲೆಗಳಲ್ಲಿ ವ್ಯಾಸಂಗಮಾಡು ತ್ತಿರುವ ಈ ಪಂಗಡಗಳಿಗೆ ಸೇರಿದ ಕೆಲವು ಯುವಕ ಯುವತಿಯರು ಅನ್ಯೋನ್ಯಾನು ರಾಗದಿಂದ ದಂಪತಿಗಳಾಗಲು ಒಪ್ಪಿಕೊಳ್ಳುವರು. ಕೆಲವು ವೇಳೆ ಬಂಧುಮಿತ್ರರಿಗೆ ಲಗ್ನಪತ್ರಿಕೆಗಳನ್ನು ಕಳುಹಿಸುವ ಸಮಯದಲ್ಲಿ ಪುರೋಹಿತರ ಮೂಲಕ ಇವರು ಸಗೋತ್ರರೆಂದೊ ಸಪ್ರವರರೆಂದೊ ಹೊರಬೀಳುವುದು. ಇಂತಹ 'ದಯಾಪಾತ್ರ' ರಾದ ಯುವಕರ ಉದ್ಧಾರಕ್ಕಾಗಿ ಶಾಸನವನ್ನು ಕೋರಿರುವರಂತೆ.

ಇವರು ದಂಪತಿಗಳಾಗಲು ಈಗಾಗಲೆ ಸಿದ್ಧವಾಗಿರುವ Special Marriage Act ಸಾಕಾದಷ್ಟು ಸೌಕರ್ಯವನ್ನು ಕಲ್ಪಿಸಿರುವುದು. ಆದುದರಿಂದ ಮತ್ತೊಂದು ಕಾನೂನಿನ ಆವಶ್ಯಕತೆಯಿಲ್ಲ. ಕಾನೂನನ್ನು ಅಪೇಕ್ಷಿಸುವವರು ಇಂತಹ ಸಂಬಂಧ ಗಳಿಗೆ 'ಹಿಂದೂ ವಿವಾಹ'ವೆಂಬ ಮುದ್ರೆಯನ್ನೊತ್ತುವುದಕ್ಕಾಗಿ ಮಾತ್ರ ಆಶಿಸುವ ರೆನ್ನಬೇಕಾಗುವುದು. ಆ ಮುದ್ರೆಯಿಲ್ಲದಿದ್ದರೆ ದಾಯಭಾಗ ಮುಂತಾದ ಸಂಗತಿ ಗಳಲ್ಲೇನಾದರೂ ಕೊರತೆಯಿರಬಹುದೆ? ನ್ಯಾಯನಿಪುಣರು ಈ ಸಂಗತಿಗಳನ್ನು ಕಾನೂನು ಮಾಡುವ ಸಮಯದಲ್ಲಿ ಗೋಪ್ಯವಾಗಿಟ್ಟು ಇಂತಹ ಯುವಕಯುವತಿಯ ರನ್ನು ಹಿಂದೂ ಸಮಾಜದಿಂದ ಹೊರಕ್ಕೆ ತಳ್ಳಕೂಡದೆಂಬುದು ಉದ್ದೇಶವೆ? ಸಮಾಜದಲ್ಲಿ ಅತಿದೀರ್ಘಕಾಲದಿಂದಲೂ ಆಚರಣೆಯಲ್ಲಿರುವ ಮೂಲನಿಯಮಗಳನ್ನು ಒತ್ತಟ್ಟಿಗಿಟ್ಟು ವೇದಮಂತ್ರಗಳನ್ನು ಉಚ್ಚರಿಸಿದರೆ ಹಿಂದೂ ವಿವಾಹವಾದೀತೆ?

ಧರ್ಮಶಾಸ್ತ್ರ ದೃಷ್ಟಿಯಿಂದಲೂ ಸಂತಾನಶಾಸ್ತ್ರದ ದೃಷ್ಟಿಯಿಂದಲೂ ಅಕ್ಕ ತಂಗಿಯರ ಮಕ್ಕಳನ್ನು ಸೋದರಮಾವಂದಿರು ಮದುವೆಯಾಗುವುದು, ಸೋದರ ಮಾವ ಅಥವಾ ಸೋದರತ್ತೆಯ ಮಗಳನ್ನು ಮದುವೆಯಾಗುವುದು ಮುಂತಾದ ಕೆಲವು ದುಸ್ಸಂಪ್ರದಾಯಗಳು ಹಿಂದೂ ಸಮಾಜದಲ್ಲಿ ಈಗಾಗಲೇ ಬೇರೂರಿವೆ. ಇಂತಹ ಸಪಿಂಡವಿವಾಹವನ್ನು ಇತರರೂ ಯುಕ್ತವೆಂದೊಪ್ಪುವುದಿಲ್ಲ. ಸುಧಾರಕರು ಕೆಟ್ಟಿರುವುದನ್ನು ಸರಿಪಡಿಸುವ ಕೆಲಸಕ್ಕೆ ತೊಡಗುವುದು ಲೇಸು.

ಎಮ್. ಲಕ್ಷ್ಮೀನರಸಿಂಹಯ್ಯ.

# ಅಂತರರಾಷ್ಟ್ರೀಯ ಶಾಂತಿಯ ಇತಿಹಾಸ

## ಪ್ರಾಚೀನ ಗ್ರೀಕರು

ಪ್ರಾಚೀನ ಗ್ರೀಸ್ ದೇಶವು ಹಲವಾರು "ನಗರ ರಾಜ್ಯ"ಗಳನ್ನು (City States) ಒಳಗೊಂಡಿತ್ತು. ಇವುಗಳಲ್ಲಿ ಅಂತಃಕಲಹಗಳು ಹುಟ್ಟಿ ದಿನ ಬೆಳಗಾದರೆ ಯುದ್ಧ ನಡೆಯುತ್ತಲೇ ಇತ್ತು. ಜನರನ್ನು ಇದರ ಕಷ್ಟಗಳಿಂದ ಪಾರುಮಾಡಲು ಅನೇಕ ಯತ್ನಗಳು ನಡೆದವು. ಈ ಕಾರ್ಯದಲ್ಲಿ ಆಂಫಿಕ್ಟಿಯಾನ್ಸ್ (Amphyctions) ಎಂಬ ಗ್ರೀಕರ ಧರ್ಮಕ್ಷೇತ್ರಗಳಲ್ಲಿದ್ದ ಮತಸಂಘಗಳ ಪಾತ್ರ ಮುಖ್ಯವಾದುದು. ಈ ಸಂಘಗಳಲ್ಲಿ ಅತ್ಯಂತ ಪ್ರಸಿದ್ಧವಾದ ಡೆಲ್ಫಿ ಕ್ಷೇತ್ರದ ಮತಸಂಘದಲ್ಲಿ ಗ್ರೀಸಿನ ಎಲ್ಲ ಪಟ್ಟಣಗಳ ಪ್ರತಿನಿಧಿಗಳು ಇದ್ದರು. ಈ ಸಂಘದ ಒಂದು ಮುಖ್ಯ ಧ್ಯೇಯ ವೆಂದರೆ ತನ್ನ ಸದಸ್ಯರಲ್ಲಿ ಹುಟ್ಟಿದ ಅಂತಃಕಲಹಗಳನ್ನು ಪಂಚಾಯಿತಿಯ ಮೂಲಕ ಹೋಗಲಾಡಿಸಿ ಯುದ್ಧವಾಗದ ಹಾಗೆ ನೋಡಿಕೊಳ್ಳುವುದು. ಇದಲ್ಲದೆ ಯುದ್ಧದಲ್ಲಿ ಕ್ರೌರ್ಯವನ್ನು ತಪ್ಪಿಸಲು ಯತ್ನಿಸುವುದು. ಸಂಘದ ಪ್ರತಿಯೊಬ್ಬ ಪ್ರತಿನಿಧಿಯೂ ತನ್ನ ಪಟ್ಟಣದ ಪರವಾಗಿ ಈ ರೀತಿ ಪ್ರಮಾಣಮಾಡಬೇಕಾಗಿತ್ತು : "ನಾವು ಈ ಸಂಘಕ್ಕೆ ಸೇರಿದ ಯಾವ ಪಟ್ಟಣವನ್ನೂ ನಾಶಮಾಡುವುದಿಲ್ಲ; ಯುದ್ಧದಲ್ಲಾಗಲಿ ಶಾಂತಿಯಲ್ಲಾಗಲಿ ಅವರಿಗೆ ನೀರು ಸಿಕ್ಕದ ಹಾಗೆ ನದಿಯನೀರನ್ನು ಬೇರೆ ಕಡೆಗೆ ತಿರುಗಿಸುವುದಿಲ್ಲ. ಹಾಗೆ ಯಾರಾದರೂ ಅಕ್ರಮರೀತಿಯಲ್ಲಿ ನಡೆದುಕೊಂಡರೆ ನಾವು ಅವರೊಡನೆ ಯುದ್ಧಮಾಡಿ ಅವರ ನಗರವನ್ನು ನಾಶಮಾಡುತ್ತೇವೆ. ಅಲ್ಲದೆ ಯಾರಾದರೂ ಡೆಲ್ಫಿ ಕ್ಷೇತ್ರದ ಅಪಾಲೋ ದೇವರ ಗುಡಿಯ ಖಜಾನೆಯನ್ನಾಗಲಿ ಅದಕ್ಕೆ ಸೇರಿದ ಮತ್ತೆ ಯಾವ ವಸ್ತುವನ್ನಾಗಲಿ ಕೊಳ್ಳೆಹೊಡೆದರೆ ಅಥವಾ ಇಂತಹ ಹೇಯ ಕಾರ್ಯಕ್ಕೆ ಯಾವ ವಿಧದಲ್ಲಾದರೂ ಸಹಾಯಮಾಡಿದರೆ ಅಂತಹವರ ಮೇಲೆ ತ್ರಿಕರಣಗಳಿಂದಲೂ ಸೇಡು ತೀರಿಸಿಕೊಳ್ಳುತ್ತೇವೆ." ಈ ಮತಸಂಘಗಳ ಧ್ಯೇಯ ವೇನೊ ಉದಾತ್ತವಾದ್ದೇ ; ಆದರೆ ಇದನ್ನು ಸಾಧಿಸುವುದು ಅಸಾಧ್ಯವಾಗಿತ್ತು. ರಾಜಕೀಯ ಜೀವನದಲ್ಲಿ ಈ ಸಂಘಗಳಿಗೆ ಹೆಚ್ಚಿನ ಸ್ಥಾನವಿರಲಿಲ್ಲ. ಪ್ರಬಲ ರಾಷ್ಟ್ರಗಳು ಇವುಗಳ ಮಾತಿಗೆ ಸ್ವಲ್ಪವೂ ಲಕ್ಷ್ಯಕೊಡುತ್ತಿರಲಿಲ್ಲ. ಇಂದಿನಂತೆಯೇ ಎಂದೂ.

ಗ್ರೀಕರಲ್ಲಿ ಅಂತಃಕಲಹಗಳನ್ನು ಹೋಗಲಾಡಿಸಿ ಶಾಂತಿನೆಲಸಲು ಸಹಾಯ ಮಾಡಿದ ಸಂಸ್ಥೆಗಳಲ್ಲಿ ಮತ್ತೊಂದು ಮುಖ್ಯವಾದ ಸಂಸ್ಥೆ ಕಾನ್ಫೆಡೆರಸಿ ಆಫ್

ಡೀಲಾಸ್ (Confederacy of Delos) ಎಂಬ ಹಲವಾರು ಗ್ರೀಕ್ ಪಟ್ಟಣಗಳ ನ್ನೊಳಗೊಂಡ ಸಂಘ. ಇದನ್ನು ಸ್ಥಾಪಿಸಿದುದು ಪರ್ಶಿಯನರ ಆಕ್ರಮಣವನ್ನು ಎದುರಿಸುವುದಕ್ಕಾಗಿ. ಪ್ರಾರಂಭದಲ್ಲಿ ಇದಕ್ಕೆ ಸೇರಿದ ಪ್ರತಿಯೊಂದು ಪಟ್ಟಣಕ್ಕೂ ಸಮಾನ ಹಕ್ಕು ಬಾಧ್ಯತೆಗಳಿದ್ದವು. ಸಂಘದ ಸದಸ್ಯರು ತಮ್ಮತಮ್ಮಲ್ಲಿ ಯುದ್ಧ ಮಾಡುವ ಹಾಗಿರಲಿಲ್ಲ. ಏನು ವ್ಯಾಜ್ಯವಿದ್ದರೂ ಪಂಚಾಯಿತಿಯ ಮೂಲಕ ಒಪ್ಪಂದಕ್ಕೆ ಬರಬೇಕಾಗಿತ್ತು. ಹಾಗೆ ಯಾರಾದರೂ ಸಂಘದ ಒಳಶಾಂತಿಗೆ ಭಂಗ ತಂದರೆ ಸಂಘದ ಸೈನ್ಯವು ಅವರನ್ನು ಶಿಕ್ಷಿಸುತ್ತಿತ್ತು. ಪ್ರಾರಂಭದಲ್ಲಿ ಈ ಸಂಘವು ಗ್ರೀಕರ ಸ್ವಾತಂತ್ರ್ಯವನ್ನೂ ಒಳನಾಡಿನ ಶಾಂತಿಯನ್ನೂ ಕಾಯುವುದಕ್ಕೆ ಬಹಳ ಸಹಾಯಮಾಡಿತು. ಆದರೆ ಈ ಸಂಘದ ಸದಸ್ಯರಾಷ್ಟ್ರಗಳಲ್ಲಿ ಅತ್ಯಂತ ಪ್ರಬಲವಾದ ಅಥೆನ್ಸ್ ಪಟ್ಟಣವು ತನ್ನ ಹಿರಿಮೆಯನ್ನು ಸ್ಥಾಪಿಸಿ ಈ ಪ್ರಜಾಸತ್ತಾತ್ಮಕ ಸಂಘ ವನ್ನು ಅಥೆನ್ಸ್ ಚಕ್ರಾಧಿಪತ್ಯವನ್ನಾಗಿ ಮಾರ್ಪಡಿಸಿತು.

ಇದಾದ ಮೇಲೆ ಕ್ರಿ.ಪೂ. ೩-೨ ಶತಮಾನಗಳಲ್ಲಿ ಗ್ರೀಕರಲ್ಲಿ ಅಂತಃಕಲಹಗಳನ್ನು ಹೋಗಲಾಡಿಸಿ ಅವರನ್ನು ಒಂದುಗೂಡಿಸುವುದಕ್ಕಾಗಿ ಅಕೇಯನ್ ಲೀಗ್ ಎಂಬ ಸಂಘವು ಸ್ಥಾಪಿತವಾಯಿತು. ಇದಕ್ಕೆ ಸೇರಿದ ಪಟ್ಟಣಗಳಿಗೆ ಒಳ ಆಡಳಿತ ವಿಷಯ ಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯವಿತ್ತು. ವಿದೇಶೀಯ ವಿಷಯಗಳನ್ನು ನೋಡಿಕೊಳ್ಳು ವುದಕ್ಕೆ ಎಲ್ಲ ಸದಸ್ಯರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ ಒಂದು ಕೇಂದ್ರಸಭೆ ಇತ್ತು. ಇದರ ಶಾಸನಗಳನ್ನು ಎಲ್ಲ ರಾಷ್ಟ್ರಗಳೂ ಪಾಲಿಸಬೇಕಾಗಿತ್ತು, ಎಲ್ಲ ರಾಷ್ಟ್ರಗಳೂ ಈ ಕೇಂದ್ರಸಭೆಯ ಅಧೀನಕ್ಕೆ ಒಳಗಾಗಿರುವಂತೆ ನೋಡಿಕೊಳ್ಳಲು ಇದರ ಅಧೀನದಲ್ಲಿ ಒಂದು ಪ್ರಬಲವಾದ ಸೈನ್ಯವಿತ್ತು.

ಅಂತರರಾಷ್ಟ್ರೀಯ ಶಾಂತಿಸ್ಥಾಪನೆಗಾಗಿ ದುಡಿದ ಅನೇಕ ಅರ್ವಾಚೀನ ತತ್ವಜ್ಞರು ಈ ಮೇಲ್ಕಂಡ ಸಂಸ್ಥೆಗಳನ್ನು ಭಾವೀ ಅಂತರರಾಷ್ಟ್ರೀಯ ಸರ್ಕಾರದ ಮಾದರಿಯನ್ನಾಗಿ ಪರಿಗಣಿಸಿದ್ದಾರೆ. ಇವುಗಳಲ್ಲಡಗಿರುವ ಪ್ರಜಾಧಿಕಾರತತ್ವ (Democracy) ಮತ್ತು ಸಂಯುಕ್ತ ರಾಜ್ಯಾಂಗತತ್ವಗಳೇ (Federalism) ವಿಶ್ವ ಶಾಂತಿಗೆ ಗ್ರೀಕರ ಹಿರಿದಾದ ಕಾಣಿಕೆ. ಈ ಎರಡು ತತ್ವಗಳೇ ಆಧುನಿಕ ಅಂತರ ರಾಷ್ಟ್ರೀಯ ಸರ್ಕಾರದ ಯೋಜನೆಗಳಿಗೆ ಮೂಲಾಧಾರ. ಆದರೆ ಗ್ರೀಕ್ ಸಂಸ್ಕೃತಿ ಯಲ್ಲಿ ಒಂದು ದೊಡ್ಡ ಕೊರತೆಯೂ ಕಂಡುಬರುತ್ತದೆ. ಗ್ರೀಕರಿಗೆ ಇತರ ಜನಾಂಗ ದವರ ವಿಷಯದಲ್ಲಿ ಹೃದಯವೈಶಾಲ್ಯವಿರಲಿಲ್ಲ. ಗ್ರೀಕರಲ್ಲದವರು ಅನಾಗರಿಕರು, ಅವರ ಸಂಸ್ಕೃತಿ ಹೀನವಾದುದು, ಅವರೊಡನೆ ಹೆಚ್ಚಿನ ಸಂಪರ್ಕ ಸಲ್ಲದು, — ಎಂಬುದೇ ಇವರ ಒಟ್ಟಭಿಪ್ರಾಯ. ತಮ್ಮ ಸಂಸ್ಕೃತಿಯಲ್ಲಿ ತಮಗೆ ಎಷ್ಟು

ಅಭಿಮಾನವಿದೆಯೋ ಅಷ್ಟೇ ಅಭಿಮಾನ ಇತರ ಜನಾಂಗಗಳವರಿಗೂ ತಮ್ಮ ತಮ್ಮ ಸಂಸ್ಕೃತಿಯಲ್ಲಿದೆ; ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕೆ ತಮಗೆ ಎಷ್ಟು ಹಕ್ಕಿದೆಯೋ ಇತರರಿಗೂ ಅಷ್ಟೇ ಹಕ್ಕು ಇದೆ; ಪರಸ್ಪರ ಏನು ವ್ಯತ್ಯಾಸಗಳಿದ್ದರೂ ಪ್ರಪಂಚದ ಎಲ್ಲ ಜನಾಂಗದವರೂ ಅನ್ಯೋನ್ಯವಾಗಿ ನಡೆದುಕೊಳ್ಳಬೇಕು;—ಎಂಬ ವಿಶ್ವಶಾಂತಿಗೆ ಮೂಲಾಧಾರವಾದ ಲೋಕದ ಸೋದರಿಕೆಯ ಭಾವನೆ ಇವರಲ್ಲಿ ಅಷ್ಟಾಗಿ ಬೇರೂರಲಿಲ್ಲ.

## ರೋಮನ್ ಚಕ್ರಾಧಿಪತ್ಯ

ಗ್ರೀಕರ ಕಾಲವಾದ ಮೇಲೆ ರೋಮನ್ ಚಕ್ರಾಧಿಪತ್ಯದ ಸ್ಥಾಪನೆಯಾಯಿತು. ಇದು ಪ್ರಪಂಚದ ಇತಿಹಾಸದಲ್ಲಿ ಅತ್ಯಂತ ವಿಸ್ತಾರವಾದ ಚಕ್ರಾಧಿಪತ್ಯಗಳಲ್ಲಿ ಒಂದು. ಇಂಗ್ಲೆಂಡ್, ದಕ್ಷಿಣ ಜರ್ಮನಿ, ಫ್ರಾನ್ಸ್, ಸ್ಪೇನ್, ಬಾಲ್ಕನ್ ಪರ್ಯಾಯ ದ್ವೀಪ, ಇಟಲಿ, ಏಷ್ಯಾಮೈನರ್, ಈಜಿಪ್ಟ್ ಮತ್ತು ಉತ್ತರ ಆಫ್ರಿಕಾ ದೇಶಗಳನ್ನು ಒಳಗೊಂಡಿತ್ತು. ರೋಮನ್ ಚಕ್ರಾಧಿಪತ್ಯದ ಸ್ಥಾಪನೆಯಿಂದ ಈ ದೇಶಗಳನ್ನೊಳಗೊಂಡ ಈ ದೊಡ್ಡ ಭೂಭಾಗದಲ್ಲಿ ೫ ಶತಮಾನಗಳ ಕಾಲ ಅವಿಚ್ಛಿನ್ನವಾಗಿ ಶಾಂತಿ ನೆಲಸಿತ್ತು. ಅಲ್ಲದೆ ಈ ಚಕ್ರಾಧಿಪತ್ಯದಲ್ಲಿರುವುದರಿಂದ ಬೇರೆ ಬೇರೆ ಮಟ್ಟಕ್ಕೆ ಸೇರಿದ ಹಲವಾರು ಸಂಸ್ಕೃತಿಗಳ ಜನಾಂಗದವರು ಅನ್ಯೋನ್ಯವಾಗಿರಲು ಕಲಿತರು. ಇವರಲ್ಲಿ ಪರಸ್ಪರ ಸಂಪರ್ಕ ಹೆಚ್ಚಿ ಸಂಕುಚಿತ ಬುದ್ಧಿ ಹೋಗಿ ವಿಶ್ವಭ್ರಾತೃತ್ವಭಾವನೆ ಹುಟ್ಟಲು ಅವಕಾಶವಾಯಿತು. ಈ ವಿವಿಧ ಸಂಸ್ಕೃತಿಗಳ ವ್ಯಕ್ತಿತ್ವಕ್ಕೆ ಲೋಪಬರದೆ ಸಮಾನರಾಜ್ಯಾಂಗಪದ್ಧತಿಯೂ ನ್ಯಾಯಪದ್ಧತಿಯೂ ಬೆಳೆಯುವಂತಾಯಿತು. ಈ ರೀತಿಯಲ್ಲಿ ರೋಮನ್ ಚಕ್ರಾಧಿಪತ್ಯವು ಹಲವಾರು ಶತಮಾನಗಳ ಕಾಲ ಯೂರೋಪಿನ ಶಾಂತಿರಕ್ಷಣೆಗೆ ಮುಖ್ಯ ಸಾಧನವಾಯಿತು. ಆದರೆ ಸಾಮ್ರಾಜ್ಯತತ್ವ ಮತ್ತು ಗುಲಾಮಪದ್ಧತಿ ಇವು ರೋಮನರ ಆಧಿಪತ್ಯಕ್ಕೆ ತಳಹದಿಯಾಗಿದ್ದವು. ಆದ್ದರಿಂದ ಇವರು ಏರ್ಪಡಿಸಿದ ಶಾಂತಿವ್ಯವಸ್ಥೆಯು ಶಾಂತಿಯಲ್ಲಿ ನೆಲಸಿರಲಿಲ್ಲವೆಂದು ಹೇಳಬಹುದು. ಗ್ರೀಸ್ ರೋಮ್ ಎರಡರಲ್ಲಿಯೂ ಅವರ ನಾಗರಿಕತೆಯೆಲ್ಲ ಈ ಗುಲಾಮರ ಎದೆ-ನೆಲದ ಮೇಲೆ ಬೆಳೆದದ್ದು ಎಂಬುದನ್ನು ಮರೆಯಬಾರದು.

## ಮಧ್ಯಯುಗ: ಡಾಂಟೆ

ರೋಮನ್ ಚಕ್ರಾಧಿಪತ್ಯವು ನಾಶವಾದ ಮೇಲೆ ಅನೇಕ ಶತಮಾನಗಳ ಕಾಲ ಯೂರೋಪ್ ದೇಶವು ಛಿನ್ನಭಿನ್ನವಾಗಿ ಅಲ್ಲಿ ಅನಾಯಕತೆ ಇತ್ತು. ಎಲ್ಲೆಲ್ಲಿಯೂ ಪಾಳೆಯಗಾರರಂಥವರ ಪ್ರಾಬಲ್ಯ ಹೆಚ್ಚಿ ಇವರ ಒಳಹೋರಾಟದಿಂದ ರಕ್ತದ

ಕೋಡಿ ಹರಿಯುತ್ತಿತ್ತು. ಕ್ರಿ.ಶ. ೮೦೦ ರಲ್ಲಿ ಚಾರ್ಲಮೇನ್ (Charlemagne) ಎಂಬ ಫ್ರಾನ್ಸಿನ ರಾಜನು ಅಕ್ಕಪಕ್ಕದ ಹಲವಾರು ರಾಜ್ಯಗಳನ್ನು ಗೆದ್ದು ಅಳಿದು ಹೋದ ರೋಮನ್ ಚಕ್ರಾಧಿಪತ್ಯವನ್ನು ಹೋಲಿ ರೋಮನ್ ಸಾಮ್ರಾಜ್ಯ ಎಂಬ ಹೊಸ ಹೆಸರು ಕೊಟ್ಟು ಪುನರುಜ್ಜೀವನಗೊಳಿಸಹೊರಟನು. ಇವನು ಸ್ಥಾಪಿಸಿದ ಸಾಮ್ರಾಜ್ಯವು ೧,೦೦೦ ವರ್ಷಗಳ ಕಾಲ ಬಾಳಿಬಂದರೂ ಇದರ ಶಕ್ತಿ ಚಾರ್ಲಮೇನನ ಕಾಲವಾದನಂತರ ಬಹುಮಟ್ಟಿಗೆ ಕುಗ್ಗಿಹೋಯಿತು. ದೇಶವು ಮೊದಲಿನಂತೆ ಅನಾಯಕಸ್ಥಿತಿಗೆ ಇಳಿಯಿತು.

ಈ ಕಾಲವು ಅವ್ಯವಸ್ಥಿತವಾಗಿದ್ದುದರಿಂದಲೇ ಜನರು ರೋಮನ್ ಚಕ್ರಾಧಿಪತ್ಯದ ಐಕ್ಯತೆ ಮತ್ತು ಶಾಂತಿಯನ್ನು ಮತ್ತೆ ಕಾಣುವೆವೇ ಎಂದು ಕಾತರಿಸತೊಡಗಿದರು. ಅಲ್ಲದೆ ಈ ಕಾಲದ ಕ್ರೈಸ್ತಮತವು ಕ್ರೈಸ್ತರು ಯಾವ ದೇಶದಲ್ಲಿರಲಿ ಯಾವ ಜನಾಂಗಕ್ಕೆ ಸೇರಿರಲಿ ಎಲ್ಲರೂ ಒಂದೇ ಸೋದರವರ್ಗಕ್ಕೆ ಸೇರಿದವರು, ಇವರನ್ನೆಲ್ಲ ಒಳಗೊಂಡ ಒಂದು ಸಮಾನ ಸರ್ಕಾರವಿರಬೇಕು, ಎಂಬ ಭಾವನೆಯನ್ನು ಸಾರಿತು. ಈ ಕಾಲದ ಜನಸಾಮಾನ್ಯರೂ ತಾವು ಪ್ರಪಂಚವನ್ನೆಲ್ಲ ಒಳಗೊಂಡ ಕ್ರೈಸ್ತ ಸಮಾಜದ ಸದಸ್ಯರು; ಎಲ್ಲರಿಗೂ ಸಮಾನವಾಗಿ ಅನ್ವಯಿಸುವ ಕ್ರೈಸ್ತ ಶಾಸನವೇ ಇದಕ್ಕೆ ಮೂಲಾಧಾರ; ಈ ಸಮಾಜವನ್ನು ರಕ್ಷಿಸುವುದಕ್ಕೆ ಕ್ರೈಸ್ತರ ಜಗದ್ಗುರುವಾದ ಪೋಪರೂ ಹೋಲಿ ರೋಮನ್ ಚಕ್ರವರ್ತಿಯೂ ಎಡಭುಜ ಬಲಭುಜದಂತೆ ಇದ್ದಾರೆ,— ಎಂದು ಭಾವಿಸಿದ್ದರು.

ಈ ರೀತಿಯಲ್ಲಿ ಕ್ರೈಸ್ತ ಭ್ರಾತೃತ್ವ ಭಾವನೆಯು ಜನರ ಮನಸ್ಸಿನಲ್ಲಿ ನೆಲಸಿದ್ದರೂ ಕ್ರೈಸ್ತ ದೇಶಗಳನ್ನೆಲ್ಲ ಒಳಗೊಂಡ ಸಮಾನಸರ್ಕಾರವನ್ನು ಏರ್ಪಡಿಸಲು ಸಾಧ್ಯವಾಗಲಿಲ್ಲ. ಆದರೆ ಇಂತಹ ಸರ್ಕಾರ ಬೇಕೆಂಬ ಬಯಕೆಯು ಮಧ್ಯಯುಗದ ಕೊನೆಯ ವರೆಗೂ ಇತ್ತು. ಈ ಕಾಲದಲ್ಲಿ ರಂಜಿಸಿದ ಸುಪ್ರಸಿದ್ಧನಾದ ಡಾಂಟೆಕವಿಯು ತನ್ನ ಡೀ ಮಾನಾರ್ಕಿಯಾ (*De Monarchia*) ಎಂಬ ಗ್ರಂಥದಲ್ಲಿ ಈ ಧ್ಯೇಯವನ್ನೇ ಜನರ ಮುಂದಿಟ್ಟಿದ್ದಾನೆ. ಇವನು ಪ್ರತಿಪಾದಿಸಿದ ತತ್ವವಿಷ್ಟೇ: "ಮಾನವನ ಅಂತಿಮ ಧ್ಯೇಯ ವಿಶ್ವಶಾಂತಿ, ವಿಶ್ವಕಲ್ಯಾಣ. ಇದನ್ನು ಸಾಧಿಸಬೇಕಾದರೆ ಅಳಿದುಹೋದ ರೋಮನ್ ಚಕ್ರಾಧಿಪತ್ಯದಂತಹ ಧರ್ಮದಲ್ಲಿ ನೆಲಸಿದ ವಿಶ್ವಪ್ರಭುತ್ವಬೇಕು. ಇದನ್ನು ಸಾಧಿಸಲು ಎಲ್ಲರೂ ಪ್ರಯತ್ನಪಡಬೇಕು." ಡಾಂಟೆಯ ಈ ತತ್ವವು ಮುಂದಿನ ಅಂತರರಾಷ್ಟ್ರೀಯ ಸರ್ಕಾರದ ಭರತವಾಕ್ಯದಂತೆ ಇದೆಯೆಂದು ಎಲಿಜಬೆತ್ ಯಾರ್ಕ್ ಎಂಬವರು ಹೇಳಿದ್ದಾರೆ.

## ರಾಷ್ಟ್ರಪ್ರಭುತ್ವಗಳು

ಪ್ರಪಂಚಕ್ಕೆಲ್ಲ ಒಂದೇ ಕ್ರೈಸ್ತಮತವೂ ಒಂದೇ ಪ್ರಭುತ್ವವೂ ಇರಬೇಕೆಂಬ ಈ ಮಧ್ಯಕಾಲದ ಭಾವನೆಗಳು ಕ್ರಿ.ಶ. ೧೬ ನೆಯ ಶತಮಾನದಲ್ಲಿ ಮಾಯವಾದುವು. ಲೂಥರನ್ ಮತ ಮತ್ತು ಇತರ ಸುಧಾರಕ ಮತಗಳು ಹುಟ್ಟಿ ಕ್ರೈಸ್ತಮತದ ಒಗ್ಗಟ್ಟು ಹೋಗಿ ಪ್ರತಿಯೊಂದು ದೇಶದಲ್ಲೂ ಸ್ವತಂತ್ರಮತಗಳು ಸ್ಥಾಪಿತವಾದುವು. ಇದೇ ಕಾಲದಲ್ಲಿ ಪಾಳೆಯಗಾರರ ಪ್ರಾಬಲ್ಯ ಕುಗ್ಗಿ ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್ ಮೊದಲಾದ ಪ್ರಬಲ ರಾಷ್ಟ್ರಗಳು ಹುಟ್ಟಿದವು. ಈ ದೇಶದ ರಾಜರು ರಾಜಕೀಯ ವಿಷಯಗಳಲ್ಲಿ ಹೋಲಿ ರೋಮನ್ ಚಕ್ರವರ್ತಿಗಾಗಲಿ ಮತವಿಷಯಗಳಲ್ಲಿ ಪೋಪನಿಗಾಗಲಿ ಅಧೀನರಲ್ಲ. ಇವರು ಸರ್ವಸ್ವತಂತ್ರರು. ಹೊರಗಿನ ಯಾವ ಕಟ್ಟುಪಾಡಿಗೂ ಒಳಪಡದೆ ಸಂಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುವ ಹಕ್ಕು ತಮಗಿದೆ ಎಂಬ ಭಾವನೆಗಳು ಈ ರಾಷ್ಟ್ರಗಳಲ್ಲಿ ಬೇರೂರಿದವು. ಅಲ್ಲದೆ ರಾಜರು ದೇವಾಂಶಭೂತರು, ಪ್ರಜೆಗಳ ಪಾಲನೆಗಾಗಿ ದೇವರಿಂದಲೆ ನಿಯಮಿಸಲ್ಪಟ್ಟಿದ್ದಾರೆ. ರಾಜ್ಯಭಾರದ ಎಲ್ಲ ಹಕ್ಕೂ ಅವರಿಗೇ ಸೇರಿದುದು; ರಾಜನು ಒಳ್ಳೆಯವನಾಗಲಿ ಕೆಟ್ಟವನಾಗಲಿ ಪ್ರಜೆಗಳು ವಿಧೇಯತೆಯಿಂದ ನಡೆದುಕೊಳ್ಳಬೇಕು; ರಾಜನಿಗೆ ವಿರೋಧವಾಗಿ ಮಾತನಾಡುವುದೂ ದಂಗೆ ಏಳುವುದೂ ದೇವರನ್ನು ಎದುರುಕಟ್ಟಿಕೊಂಡಂತೆಯೇ ಮಹಾಪಾಪಕರ, — ಎಂಬ ಭಾವನೆಗಳು ಹೆಚ್ಚಿನ ಪ್ರಚಾರಕ್ಕೆ ಬಂದವು. ಇದರ ಪರಿಣಾಮವಾಗಿ ದೇಶದ ಒಳಗೂ ಹೊರಗೂ ರಾಜರ ಅಧಿಕಾರಕ್ಕೆ ಯಾವ ತಡೆಯೂ ಇಲ್ಲದಂತಾಯಿತು. ೧೬ ನೆಯ ಶತಮಾನದಿಂದ ೩-೪ ಶತಮಾನಗಳ ಕಾಲ ನಿರಂಕುಶ ಪ್ರಭುತ್ವಗಳು ಎಲ್ಲೆಲ್ಲಿಯೂ ಪ್ರಬಲವಾದವು. ಈ ನಿರಂಕುಶ ರಾಜರ ವೈಮನಸ್ಯದಿಂದಲೂ ರಾಜ್ಯಾಭಿಲಾಷೆಯಿಂದಲೂ ಒಂದಾದ ಮೇಲೆ ಒಂದು ಯುದ್ಧ ಹುಟ್ಟಿ ಯೂರೋಪು ರಕ್ತಮಯವಾಯಿತು. ಈ ಯುದ್ಧಗಳಲ್ಲಿ ಮುಖ್ಯವಾದವು ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ಹೋಲಿ ರೋಮನ್ ಚಕ್ರವರ್ತಿಯಾದ ಐದನೆಯ ಚಾರ್ಲ್ಸನಿಗೂ ಫ್ರಾನ್ಸ್ ದೇಶದ ರಾಜನಾದ ಫ್ರಾನ್ಸಿಸನಿಗೂ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸುವುದಕ್ಕಾಗಿ ಆದ ಕದನಗಳು; ೧೬೧೮-೪೮ ವರೆಗೆ ಪ್ರಾಟೆಸ್ಟೆಂಟ್ ರಾಷ್ಟ್ರಗಳಿಗೂ ಕ್ಯಾಥೊಲಿಕ್ ರಾಷ್ಟ್ರಗಳಿಗೂ ನಡೆದ "ಮೂವತ್ತು ವರ್ಷಗಳ ಯುದ್ಧ" (Thirty Years' War); ೧೬೬೭-೧೭೧೪ರ ವರೆಗೆ ತನ್ನ ಹಿರಿಮೆಯನ್ನು ಸ್ಥಾಪಿಸಲು ನಡೆಸಿದ ಫ್ರಾನ್ಸ್ ದೇಶದ ರಾಜನಾದ ೧೪ನೆಯ ಲೂಯಿಯ ಕದನಗಳು; ೧೮ನೆಯ ಶತಮಾನದಲ್ಲಿ ಸಾಮ್ರಾಜ್ಯಸ್ಥಾಪನೆಗಾಗಿ ಇಂಗ್ಲಿಷರಿಗೂ ಫ್ರೆಂಚರಿಗೂ ನಡೆದ ಆಸ್ಟ್ರಿಯನ್ ಸಕ್ಸೆಷನ್ ವಾರ್ (Austrian Succession War); ಮತ್ತು ಸೆವೆನ್

ಯಿಯರ್ಸ್ ವಾರ್ (Seven Years' War); ಕೊನೆಗೆ ಫ್ರೆಂಚ್ ಮಹಾಕ್ರಾಂತಿಯ ಪರಿಣಾಮವಾಗಿ ನಡೆದ ಮತ್ತು ನೆಪೋಲಿಯನ್ನನ ಯುದ್ಧಗಳು.

ಈ ರೀತಿಯಲ್ಲಿ ಯೂರೋಪು ಯುದ್ಧಪರಂಪರೆಗಳಿಗೆ ಸಿಕ್ಕಿ ನರಳುತ್ತಿರಲು ಅನೇಕ ತತ್ವಜ್ಞರೂ, ರಾಜ್ಯತಂತ್ರಜ್ಞರೂ ಶಾಂತಿಸ್ಥಾಪನೆಗಾಗಿ ಅನೇಕ ಯೋಜನೆಗಳನ್ನು ಜನರ ಮುಂದಿಟ್ಟರು. ಇವರಲ್ಲಿ ಪ್ರಸಿದ್ಧರಾದವರು ಫ್ರಾನ್ಸ್ ದೇಶದ ರಾಜನಾದ ೪ನೆಯ ಹೆನ್ರಿಯ ಮಂತ್ರಿ ಸಲ್ಲಿ (Sully), ಅಂತರರಾಷ್ಟ್ರೀಯ ನ್ಯಾಯಶಾಸ್ತ್ರಕ್ಕೆ ಜನ್ಮದಾತನಾದ ಗ್ರೋಟಿಯಸ್ (Grotius), ಉದಾತ್ತಧ್ಯೇಯ ನಿಷ್ಠನಾದ ಸೇಂಟ್ ಪೀರ್ (Saint Pierre), ೧೮ನೆಯ ಶತಮಾನದಲ್ಲಿ ಬಾಳಿದ ಕ್ಯಾಂಟ್ (Kant), ರೂಸೊ (Rousseau) ಮತ್ತು ಬೆಂಥಮ್ (Bentham) ಎಂಬ ತತ್ವಜ್ಞರು, ಮತ್ತು ಅಹಿಂಸಾವ್ರತ ಪ್ರಧಾನವಾದ ಕ್ವೇಕರ್ಸ್ ಎಂಬ ಕ್ರೈಸ್ತಮತಶಾಖೆಗೆ ಸೇರಿದ ವಿಲಿಯಂ ಪೆನ್ (William Penn).

ಇವರಲ್ಲಿ ಒಬ್ಬೊಬ್ಬರು ಒಂದೊಂದು ದೃಷ್ಟಿಯಿಂದ ಶಾಂತಿಯ ಆವಶ್ಯಕತೆಯನ್ನೂ, ಮುಂದೆ ನಿರ್ಮಿಸಬೇಕಾದ ಅಂತರರಾಷ್ಟ್ರೀಯ ವ್ಯವಸ್ಥೆಯ ರೀತಿನೀತಿಗಳನ್ನೂ ಒತ್ತಿ ಹೇಳಿದರು. ಈ ವಿಷಯದಲ್ಲಿ ಗ್ರೋಟಿಯಸ್ಸನು (Grotius) ಪ್ರತಿಪಾದಿಸಿದ ತತ್ವ ಬಹಳ ಉದಾತ್ತವಾದುದು. ಇದೇನೆಂದರೆ: ಒಂದು ದೇಶದಲ್ಲಿ ಶಾಂತಿ ನೆಲಸಬೇಕಾದರೆ ನ್ಯಾಯಸಮ್ಮತವಾದ ಸರ್ಕಾರವಿರಬೇಕು. ಪ್ರಜೆಗಳು ತಮ್ಮ ಸರ್ಕಾರದ ಶಾಸನಗಳನ್ನು ಪಾಲಿಸಬೇಕು. ತಮ್ಮ ತಮ್ಮಲ್ಲಿ ಏನು ವ್ಯಾಜ್ಯ ಒದಗಿದರೂ ನ್ಯಾಯಾಸ್ಥಾನಕ್ಕೆ ಹೋಗಬೇಕೇ ಹೊರತು ಹೊಡೆದಾಟಕ್ಕೆ ಇಳಿಯಬಾರದು. ಅಲ್ಲದೆ ವೈಯಕ್ತಿಕ ಜೀವನದಲ್ಲಿ ನ್ಯಾಯಸಮ್ಮತವಲ್ಲದ, ನಾಲ್ಕು ಜನರಿಗೆ ಒಪ್ಪದಂತಹ ಕೆಲಸಗಳನ್ನು ಮಾಡಕೂಡದು. ಇದು ತಿಳಿದ ಅಂಶವಾಗಿಯೇ ಇದೆ. ಹಾಗೆಯೇ ವಿಶ್ವಶಾಂತಿ ನೆಲಸಬೇಕಾದರೆ ಪ್ರತಿಯೊಂದು ರಾಷ್ಟ್ರವೂ ತಾನು ಅಂತರರಾಷ್ಟ್ರೀಯ ಸಮಾಜದ ಪ್ರಜೆಯೆಂದು ಭಾವಿಸಬೇಕು. ಎಲ್ಲ ರಾಷ್ಟ್ರಗಳ ಹಿತದ ದೃಷ್ಟಿಯಿಂದ ಯಾವುದು ಧರ್ಮ, ಪ್ರತಿ ರಾಷ್ಟ್ರವೂ ತಾನು ಹೇಗೆ ನಡೆದುಕೊಳ್ಳಬೇಕು, ಎಂಬುದನ್ನು ತಿಳಿಸುವಂತಹ ಅಂತರರಾಷ್ಟ್ರೀಯ ಶಾಸನಪದ್ಧತಿ ಏರ್ಪಡಬೇಕು. ಅಂತರರಾಷ್ಟ್ರೀಯ ನಿಯಮಗಳಿಗೆ ಪ್ರತಿಯೊಂದು ರಾಷ್ಟ್ರವೂ ತಲೆಬಾಗಬೇಕು. ರಾಷ್ಟ್ರಗಳಲ್ಲಿ ಪರಸ್ಪರ ವ್ಯಾಜ್ಯಗಳು ಹುಟ್ಟಿದಲ್ಲಿ ಪಂಚಾಯಿತಿಯ ಮೂಲಕ ತೀರ್ಮಾನ ಮಾಡಿಕೊಳ್ಳಬೇಕೇ ಹೊರತು ಅನಾಗರಿಕರಂತೆ ರಣಕ್ಕೆ ಇಳಿಯಬಾರದು. ಹಾಗೇ, ಯಾರೊಬ್ಬರ ಕೆಟ್ಟನಡತೆಯಿಂದಾಗಲಿ ಯುದ್ಧ ಒದಗಿದರೆ ಯುದ್ಧದಲ್ಲಿ ಕ್ರೌರ್ಯ ತೋರಿಸಬಾರದು, ಅತ್ಯಾಚಾರ ನಡೆಸಬಾರದು.

ಬೆಂಥಮ್ (Bentham) ತನ್ನ ಆರ್ಥಿಕ ಮತ್ತು ರಾಜಕೀಯ ತತ್ವಗಳಿಗೆ ಸರಿಹೊಂದುವ ರೀತಿಯಲ್ಲಿ ಅಂತರರಾಷ್ಟ್ರೀಯ ವ್ಯವಸ್ಥೆಯ ಆವಶ್ಯಕತೆಯನ್ನು ಪ್ರತಿಪಾದಿಸಿದನು. ಇವನ ವಾದದ ಸಾರಾಂಶವೇನೆಂದರೆ: ಯಾವ ಪ್ರಜಾಪ್ರಭುತ್ವ ದಲ್ಲಿಯಾಗಲಿ ರಾಜ್ಯತಂತ್ರಜ್ಞನ ಧ್ಯೇಯ—ಆದಷ್ಟು ಹೆಚ್ಚು ಜನರಿಗೆ ಆದಷ್ಟು ಹೆಚ್ಚು ಸೌಖ್ಯವನ್ನುಂಟುಮಾಡುವುದು. ಉತ್ತಮದರ್ಜೆಯ ರಾಜ್ಯತಂತ್ರಜ್ಞನು ತನ್ನ ದೇಶದ ಹಿತವನ್ನು ಮಾತ್ರ ಬಯಸುವುದಿಲ್ಲ. ಜಾತಿಮತ ವ್ಯತ್ಯಾಸಗಳಿಲ್ಲದೆ ಎಲ್ಲ ಜನಾಂಗಗಳಿಗೂ ಒಟ್ಟಿನಲ್ಲಿ ಯಾವುದು ಉಪಯುಕ್ತವೋ ಅದನ್ನೇ ಸಾಧಿಸಬೇಕು. ಅಂತರರಾಷ್ಟ್ರೀಯ ಶಾಂತಿ ಏರ್ಪಡಬೇಕಾದರೆ ಒಂದು ದೇಶದವರು ಮತ್ತೊಂದು ದೇಶದವರೊಡನೆ ವ್ಯಾಪಾರಮಾಡುವುದಕ್ಕೆ ಸಂಪೂರ್ಣ ಸ್ವಾತಂತ್ರ್ಯವಿರಬೇಕು; ಆಮದು ರಫ್ತು ತೆರಿಗೆಗಳನ್ನೂ ಮತ್ತು ವ್ಯಾಪಾರಕ್ಕಿರುವ ಇತರ ವಿಧವಾದ ಅಡಚಣೆ ಗಳನ್ನೂ ತೆಗೆದುಹಾಕಬೇಕು. ಪ್ರತಿಯೊಂದು ರಾಷ್ಟ್ರವೂ ತನಗೆ ಸೇರಿರುವ ವಸಾಹತು ಗಳನ್ನು (colonies) ಬಿಟ್ಟುಕೊಡಬೇಕು. ಇದರಿಂದ ವಿಶ್ವಶಾಂತಿ ಸ್ಥಾಪನೆಗೆ ಬಹುಮಟ್ಟಿಗೆ ಸಹಾಯವಾಗುವುದಲ್ಲದೆ ಆರ್ಥಿಕದೃಷ್ಟಿಯಿಂದಲೂ ಅನುಕೂಲ ವಾಗುತ್ತದೆ. ಅಂತರರಾಷ್ಟ್ರೀಯ ಶಾಂತಿಸ್ಥಾಪನೆಗೆ ಬೇಕಾದ ಮತ್ತೊಂದು ಅಂಶ: ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುವಂತಹ ಅಂತರರಾಷ್ಟ್ರೀಯ ನ್ಯಾಯರಚನೆ (International Law) ಮತ್ತು ರಾಷ್ಟ್ರರಾಷ್ಟ್ರಕ್ಕೆ ಹುಟ್ಟಿದ ವ್ಯವಹಾರಗಳ ವಿಷಯ ದಲ್ಲಿ ತೀರ್ಪುಕೊಡಲು ಒಂದು ಅಂತರರಾಷ್ಟ್ರೀಯ ಪಂಚಾಯಿತಿ ನ್ಯಾಯಸ್ಥಾನ.

ಕ್ಯಾಂಟ್ (Kant) ಎಂಬ ತತ್ವಜ್ಞನು *Perpetual Peace* ಎಂಬ ಗ್ರಂಥದಲ್ಲಿ ಪ್ರತಿಪಾದಿಸಿದ ತತ್ವದ ಸಾರಾಂಶವೇನೆಂದರೆ: ಪ್ರಪಂಚದಲ್ಲಿ ಶಾಂತಿ ನೆಲಸಬೇಕಾದರೆ ಎಲ್ಲ ರಾಷ್ಟ್ರಗಳೂ ಅಧೀನವಾಗಿರುವ ಅಂತರರಾಷ್ಟ್ರೀಯ ಸರ್ಕಾರವಿರಬೇಕು. ಇದು ತಿಳಿದ ವಿಷಯವಾಗಿಯೇ ಇದೆ. ಆದರೆ ಜನರು ಅಸೂಯಾಪರರಾಗಿಯೂ ಸ್ವಾರ್ಥಪರರಾಗಿಯೂ ಸಂಕುಚಿತಬುದ್ಧಿಯುಳ್ಳವರಾಗಿಯೂ ಇರುವಲ್ಲಿ ಇಂತಹ ಅಂತರರಾಷ್ಟ್ರೀಯ ವ್ಯವಸ್ಥೆ ಸಾಧ್ಯವೇ ಎಂದು ಕೇಳಬಹುದು. ವಿಶ್ವಶಾಂತಿಯ ಸಾಧನೆಗೆ ಮನುಷ್ಯನ ಸ್ವಭಾವ ಬದಲಾಯಿಸಬೇಕಾದುದು ಆವಶ್ಯಕವಿಲ್ಲ. ಏಕೆಂದರೆ ಶಾಂತಿಯೂ ವ್ಯವಸ್ಥಿತಸಮಾಜವೂ ಮಾನವ ಜನಾಂಗದ ಅಂತಿಮ ಗುರಿ. ಇದು ಪ್ರಕೃತಿ ಸಿದ್ಧವಾದುದು. ಮಾನವನ ಅದೃಷ್ಟವನ್ನು ನಡಸುತ್ತಿರುವ ಸತ್ವಗಳು ನಮಗೆ ತಿಳಿಯದಂತಹ ಹಲವಾರು ರೀತಿಗಳಲ್ಲಿ ಅವನ ಚಂಚಲ ಪದಗಳನ್ನು ಮಾನವ ಸಮಾಜದ ಅಂತಿಮಗುರಿಯಾದ ಶಾಂತಿಯ ಕಡೆಗೇ ಎಳೆದುಕೊಂಡು ಹೋಗುತ್ತಿದೆ. ಸ್ವಾರ್ಥತೆಯೇ ಮೊದಲಾದ ಮನುಷ್ಯನ ಯಾವ ದುರ್ಗುಣಗಳೂ ಈ ವಿಶ್ವಶಕ್ತಿ

ಯನ್ನು ತಡೆಯಲಾರವು. ಇದರ ಎದುರಿಗೆ ಮನುಷ್ಯನ ಯಾವ ಪ್ರಯತ್ನವೂ ಸಾಗಲಾರದು. ಈಗ ನಡೆಯುತ್ತಿರುವ ಯುದ್ಧಗಳೂ ದೂರದೃಷ್ಟಿಯಲ್ಲಿ ಮಾನವ ಸಮಾಜವನ್ನು ಒಂದುಗೂಡಿಸುವುದಕ್ಕಾಗಿಯೇ ನಡೆಯುತ್ತಿವೆ. ಯುದ್ಧದ ಕಷ್ಟ ಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಸಣ್ಣ ರಾಷ್ಟ್ರಗಳು ಒಂದುಗೂಡಿ ದೊಡ್ಡ ರಾಷ್ಟ್ರಗಳಾಗುತ್ತವೆ. ಯುದ್ಧಗಳ ಪರಿಣಾಮವಾಗಿ ಚಕ್ರಾಧಿಪತ್ಯಗಳೂ ದೊಡ್ಡ ಸಂಯುಕ್ತ ರಾಜ್ಯಾಂಗಗಳೂ ಹುಟ್ಟುತ್ತವೆ. ಇವುಗಳಲ್ಲಿ ಮತ್ತೆ ಹೋರಾಟ ಆರಂಭವಾಗುತ್ತದೆ. ಹೀಗೆ ಹಲವು ಶತಮಾನಗಳು ಯುದ್ಧದ ಕಷ್ಟಗಳಿಗೆ ಸಿಕ್ಕಿ ಬಳಲಿ ಬೆಂಡಾಗಿ ಕೊನೆಗೆ ಪ್ರಪಂಚದ ರಾಷ್ಟ್ರಗಳೆಲ್ಲ ಒಂದಾಗಿ ತಾವೇ ಸಮ್ಮತಿಪಟ್ಟು ಒಂದು ಅಂತರರಾಷ್ಟ್ರೀಯ ಸಂಯುಕ್ತ ರಾಜ್ಯಾಂಗವನ್ನು ಸ್ಥಾಪಿಸುವವು; ಅದರ ಶಾಸನಗಳಿಗೆ ಯಾವ ನಿರ್ಬಂಧವೂ ಇಲ್ಲದೆ ತಾವಾಗಿಯೇ ತಲೆಬಾಗುವುವು. ಮಾನವಸಮಾಜವು ಬುಡಮುಟ್ಟ ನಾಶವಾಗದಂತೆ ಕಾಯುವುದಕ್ಕಾಗಿ ಇಂತಹ ಅಂತರರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಲೇಬೇಕಾಗುತ್ತದೆ.

ಒಟ್ಟಿನಲ್ಲಿ ಈ ಎಲ್ಲ ತತ್ವಜ್ಞರ ಅಭಿಪ್ರಾಯವಿಷ್ಟೇ: ಈಗ ಪ್ರಪಂಚದಲ್ಲಿ ಸಂಪೂರ್ಣ ಸರ್ವಪ್ರಭುತ್ವವುಳ್ಳ ಸ್ವತಂತ್ರ ರಾಷ್ಟ್ರಗಳಿವೆ. ಇವುಗಳ ವೈಮನಸ್ಯದಿಂದಲೂ ಸ್ವಾರ್ಥಪರತೆಯಿಂದಲೂ ಯುದ್ಧಗಳು ನಡೆಯುತ್ತವೆ. ಇವನ್ನು ತಪ್ಪಿಸಿ ಶಾಂತಿ ಯನ್ನು ಸ್ಥಾಪಿಸಲು ಒಂದು ಅಂತರರಾಷ್ಟ್ರೀಯ ಸರ್ಕಾರ ಬೇಕು. ಎಲ್ಲ ರಾಷ್ಟ್ರ ಗಳಿಂದಲೂ ಒಪ್ಪಿಗೆ ಪಡೆದು ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುವಂತಹ ಅಂತರ ರಾಷ್ಟ್ರೀಯ ಶಾಸನಪದ್ಧತಿ ಬೇಕು. ಒಂದು ರಾಷ್ಟ್ರಕ್ಕೂ ಮತ್ತೊಂದು ರಾಷ್ಟ್ರಕ್ಕೂ ಹುಟ್ಟಿದ ತೊಡಕು ಕೋಟಲೆಗಳನ್ನು ವಿಮರ್ಶಿಸಿ ನ್ಯಾಯನಿರ್ಣಯಿಸಲು ಅಂತರರಾಷ್ಟ್ರೀಯ ನ್ಯಾಯಾಸ್ಥಾನ ಬೇಕು. ಅಂತರರಾಷ್ಟ್ರೀಯ ಸರ್ಕಾರದ ಮತ್ತು ನ್ಯಾಯಾಸ್ಥಾನಗಳ ಕಟ್ಟಳೆಗಳನ್ನು ಕಡೆಗಣಿಸಿ ದುಷ್ಟ ರೀತಿಯಲ್ಲಿ ನಡೆದು ಕೊಂಡ ರಾಷ್ಟ್ರಗಳನ್ನು ಶಿಕ್ಷಿಸುವುದಕ್ಕೆ ಅಂತರರಾಷ್ಟ್ರೀಯ ಸೈನ್ಯವೊಂದಿರಬೇಕು.

ಇಂತಹ ಅಂತರರಾಷ್ಟ್ರೀಯ ವ್ಯವಸ್ಥೆಯನ್ನು ಹೇಗೆ ಸಾಧಿಸುವುದು? ರೂಸೊ, ಕ್ಯಾಂಟ್, ಬೆಂಥಮ್ — ಇವರು ಹೇಳಿದ್ದೇನೆಂದರೆ: ಪ್ರಪಂಚದಲ್ಲಿ ನಿರಂಕುಶ ರಾಜರು ಇರುವವರೆಗೂ ಯುದ್ಧವನ್ನು ನಿಲ್ಲಿಸುವುದಕ್ಕಾಗುವುದಿಲ್ಲ; ಇವರಿಗೆ ಯುದ್ಧ ಹೂಡುವುದಕ್ಕೆ ಮನಸ್ಸು ಅಳುಕುವುದೇ ಇಲ್ಲ— ಮೃಗಗಳ ಬೇಟೆಗೆ ಸಿದ್ಧಪಡಿಸಲು ಆಜ್ಞೆಕೊಟ್ಟಂತೆ ಈ ನರಬೇಟೆಗೂ ನಿಲ್ಲುತ್ತಾರೆ. ಯುದ್ಧ ನಿಲ್ಲಿಸ ಬೇಕಾದರೆ ಮೊಟ್ಟಮೊದಲು ಎಲ್ಲ ದೇಶಗಳಲ್ಲಿಯೂ ಪ್ರಜಾಪ್ರಭುತ್ವಗಳು ಸ್ಥಾಪನೆ ಯಾಗಬೇಕು. ಯುದ್ಧ ಹೂಡುವುದಕ್ಕೆ ಪ್ರಜೆಗಳ ಅನುಮತಿ ಬೇಕೆಂಬ ನಿಯಮ

ವಿದ್ದರೆ ಆಳರಸರು ಇಂತಹ ಘೋರ ಕಾರ್ಯಕ್ಕೆ ಇಳಿಯುವುದಕ್ಕೆ ಮುಂಚೆ ಬಹಳ ಯೋಚನೆಮಾಡುತ್ತಾರೆ; ಅವಶ್ಯವಿದ್ದಲ್ಲಿ ಮಾತ್ರ ಯುದ್ಧಮಾಡುತ್ತಾರೆ. ಇಂತಹ ಅಂತರರಾಷ್ಟ್ರೀಯ ವ್ಯವಸ್ಥೆಯನ್ನು ಸಶಸ್ತ್ರಕ್ರಾಂತಿಯಿಂದ ಮಾತ್ರ ಸಾಧಿಸಬಹುದೆಂದು ರೂಸೋ ಅಭಿಪ್ರಾಯಪಟ್ಟನು. ಆದರೆ ಇಂತಹ ಕ್ರಾಂತಿಯಿಂದ ದೇಶಕ್ಕೆ ಒಟ್ಟಿನಲ್ಲಿ ಒಳ್ಳೆಯದೊ ಕೆಟ್ಟದೊ ಎಂದು ಸಂದೇಹಪಟ್ಟನು.

ಅಂತರರಾಷ್ಟ್ರೀಯ ಶಾಂತಿಯ ಸ್ಥಾಪನೆಗಾಗಿ ದುಡಿದವರಲ್ಲಿ ಒಬ್ಬಿಬ್ಬರು ತತ್ವಜ್ಞರ ವಿಷಯವನ್ನು ಮೇಲೆ ಹೇಳಿದೆ. ಇದಲ್ಲದೆ ವಿಶ್ವಶಾಂತಿಯ ಇತಿಹಾಸದಲ್ಲಿ ಕ್ವೇಕರ್ಸ್ ಎಂಬ ಕ್ರೈಸ್ತಮತಶಾಖೆಯ ಅನುಯಾಯಿಗಳಿಗೆ ಹೆಚ್ಚಿನ ಸ್ಥಾನವಿದೆ. ಇವರ ಮತದ ಮುಖ್ಯ ತತ್ವಗಳಲ್ಲಿ ಅಹಿಂಸೆ ಒಂದು. ಇವರ ಮತಸ್ಥಾಪಕನಾದ ಜಾರ್ಜ್ ಫಾಕ್ಸನು (George Fox) ಕ್ರಿ.ಶ. ೧೬೬೦ ರಲ್ಲಿ ಈ ರೀತಿ ಹೇಳಿದನು: "ನಮ್ಮ ಮತದ ಸಿದ್ಧಾಂತವೂ ಆಚಾರವೂ ಯಾವಾಗಲೂ ಶಾಂತಿಗಾಗಿ ಪ್ರಯತ್ನಪಡುವುದು; ಶಾಂತಿಯನ್ನು ಆದಷ್ಟು ಕಾಪಾಡಿಕೊಂಡು ಬರುವುದು; ರಕ್ತವನ್ನು ಸುರಿಸುವ ಯಾವ ತತ್ವವನ್ನಾಗಲಿ ಆಚಾರವನ್ನಾಗಲಿ ನಾವು ಒಪ್ಪುವುದಿಲ್ಲ; ಯಾವ ಧ್ಯೇಯಸಾಧನೆಗಾಗಿಯಾಗಲಿ, ನೇರವಾಗಿ, ಅಥವಾ, ಬೇರೆ ಯಾವ ವಿಧದಲ್ಲಿಯಾಗಲಿ ಯುದ್ಧ ಹೋರಾಟಗಳಿಗೆ ಕೈ ಹಾಕುವುದಿಲ್ಲ. ಇದೇ ನಮ್ಮ ಶಪಥ." ಕ್ವೇಕರ್ ಮತಾನುಯಾಯಿಗಳಲ್ಲಿ ಹಲವರು ಸೈನ್ಯಕ್ಕೆ ಸೇರುವುದಿಲ್ಲವೆಂದು ಸತ್ಯಾಗ್ರಹಮಾಡಿದುದರಿಂದ ಅವರನ್ನು ನಿರ್ಬಂಧಿಸಕೂಡದೆಂಬ ನಿಯಮಕೂಡ ಹಲವು ರಾಷ್ಟ್ರಗಳಲ್ಲಿ ಬಳಕೆಯಲ್ಲಿದೆ. ಇವರು ೧೯ ನೆಯ ಶತಮಾನದಲ್ಲಿ ಶಾಂತಿಪ್ರಚಾರ ಕಾರ್ಯದಲ್ಲಿ ಬಹು ಮುಂದಾಳಾಗಿದ್ದರು. ಹಲವು ಶಾಂತಿಸಂಘಗಳನ್ನು ಸ್ಥಾಪಿಸಿದರು. ಈ ಕ್ವೇಕರ್ ಮತಾನುಯಾಯಿಗಳಲ್ಲಿ ಜಾನ್ ಬೆಲ್ಲರ್ಸ್ (೧೬೫೪-೧೭೨೫) ಮತ್ತು ವಿಲಿಯಮ್ ಪೆನ್ನ್ (೧೬೪೪-೧೭೧೮) ಎಂಬವರು ಅಂತರರಾಷ್ಟ್ರೀಯ ಶಾಂತಿ ಯೋಜನೆಗಳನ್ನು ರಚಿಸಿದವರಲ್ಲಿ ಪ್ರಸಿದ್ಧಿಹೊಂದಿದ್ದಾರೆ. ಇವರ ಲೇಖನಗಳಲ್ಲಿ ಕಾಣುವ ಒಂದು ಅನಿರೀಕ್ಷಿತ ವಿಷಯವೆಂದರೆ ಇವರು ಕ್ವೇಕರ್ ಮತಾನುಯಾಯಿಗಳಾದರೂ ವಿಶ್ವಶಾಂತಿ ಏರ್ಪಡಬೇಕಾದರೆ ಅಂತರರಾಷ್ಟ್ರೀಯ ಸೈನ್ಯ ಅತ್ಯಗತ್ಯವೆಂದು ಇವರು ಪಟ್ಟಿರುವ ಅಭಿಪ್ರಾಯ. ವಿಲಿಯಮ್ ಪೆನ್ನ್ ಹೇಳಿದಂತೆ "ಮನುಷ್ಯನ ಸ್ವಭಾವ ಎಷ್ಟರ ಮಟ್ಟಿಗೆ ಕೆಟ್ಟುಹೋಗಿದೆಯೆಂದರೆ ಒಂದಲ್ಲ ಒಂದು ರೀತಿಯಲ್ಲಿ ಒತ್ತಾಯ ಪಡಿಸದಿದ್ದರೆ ಬಹುಮಂದಿ ತಮಗೆ ಸರಿ, ಮಾಡತಕ್ಕದ್ದು' ಎಂದು ತಿಳಿದರೂ ಯಾವ ಕಾರ್ಯವನ್ನೂ ತಾವಾಗಿ ಮಾಡುವುದಿಲ್ಲ; ಮಾಡಬಾರದ ಕೆಲಸಗಳನ್ನು ಮಾಡಕೂಡದೆಂದು ತಿಳಿದೂ ಮಾಡುತ್ತಾರೆ."

೧೯ನೆಯ ಶತಮಾನಕ್ಕೆ ಮುಂಚೆ ಶಾಂತಿಸ್ಥಾಪನೆಗಾಗಿ ಮಾಡಿದ ಪ್ರಯತ್ನಗಳಲ್ಲಿ ಕಂಡುಬರುವ ಒಂದೆರಡು ಕುಂದುಕೊರತೆಗಳನ್ನು ಹೇಳಬಹುದು. ಮೊದಲನೆಯದಾಗಿ ಪ್ರತಿಯೊಂದು ರಾಷ್ಟ್ರವೂ, ಬಹುಮಟ್ಟಿಗೆ ಪ್ರತಿಯೊಂದು ಹಳ್ಳಿಯೂ, ತನಗೆ ಬೇಕಾದ ಎಲ್ಲ ಸಾಮಾನುಗಳನ್ನೂ ತಾನೇ ತಯಾರಿಸಿಕೊಳ್ಳುತ್ತಿತ್ತು. ಈಗಿನ ಸ್ಥಿತಿಗೆ ಹೋಲಿಸಿನೋಡಿದರೆ ಅಂತರರಾಷ್ಟ್ರೀಯ ವ್ಯಾಪಾರ ತೀರ ಕಡಿಮೆಯಾಗಿತ್ತು. ಅಲ್ಲದೆ ಒಂದು ದೇಶದ ಜನ ಮತ್ತೊಂದು ದೇಶಕ್ಕೆ ಹೋಗಿಬರುವುದು, ಪುಸ್ತಕಗಳ ಮತ್ತು ವೃತ್ತಪತ್ರಿಕೆಗಳ ಮೂಲಕ ಇತರ ದೇಶಗಳ ವಿದ್ಯಮಾನಗಳಲ್ಲಿ ಹೆಚ್ಚಿನ ಆಸಕ್ತಿ ತೋರಿಸುವುದು ಬಹಳ ಕಡಿಮೆಯಾಗಿತ್ತು. ಒಟ್ಟಿನಲ್ಲಿ ಆ ಜನರ ಪ್ರಪಂಚ ಬಹು ಕಿರಿದು. ಇದರ ಪರಿಣಾಮವಾಗಿ ಆ ಕಾಲದ ಯುದ್ಧಗಳೂ ಅಕ್ಕಪಕ್ಕದ ಕೆಲವು ರಾಜ್ಯಗಳಿಗೆ ಮಾತ್ರ ಅನ್ವಯಿಸುತ್ತಿದ್ದವು. ಉದಾಹರಣೆಗೆ ೨೦ನೆಯ ಶತಮಾನಕ್ಕೆ ಮುಂಚೆ ಸಾಮಾನ್ಯವಾಗಿ ಯುರೋಪಿನಲ್ಲಿ ನಡೆದ ಯುದ್ಧಗಳಿಗೆ ತುರ್ಕಿ ದೇಶವನ್ನು ಬಿಟ್ಟು ಇತರ ಖಂಡಗಳ ಯಾವ ರಾಷ್ಟ್ರವೂ ಸೇರುತ್ತಿರಲಿಲ್ಲ. ಇದೇ ಕಾರಣದಿಂದಲೇ ಅಂತರರಾಷ್ಟ್ರೀಯ ಸ್ಥಾಪನೆಗಾಗಿ ಯೋಜನೆಗಳನ್ನು ರಚಿಸಿದವರೆಲ್ಲ ಯೂರೋಪಿನ ಸ್ಥಿತಿಗತಿಗಳಿಗೆ ಮಾತ್ರ ಗಮನಕೊಡುತ್ತಿದ್ದರು. ಪ್ರಪಂಚ ಬಹುದೊಡ್ಡದು, ಆಯಾ ಖಂಡದ ರಾಷ್ಟ್ರಗಳು ತಮ್ಮ ತಮ್ಮಲ್ಲಿ ಶಾಂತಿ ಸ್ಥಾಪನೆಮಾಡಿಕೊಂಡರೆ ಸಾಕು ಎಂಬುದು ಇವರ ಅಭಿಪ್ರಾಯ. ಹೀಗೆ ದೇಶಗಳಲ್ಲಿ ಪರಸ್ಪರ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಂಪರ್ಕ ಕಡಿಮೆಯಾಗಿರುವಲ್ಲಿ ಮಾನವ ಜನಾಂಗವೆಲ್ಲ ಒಂದು, ಎಲ್ಲ ರಾಷ್ಟ್ರಗಳೂ ಒಂದು ಮನೆಯವರಂತೆ ಬಾಳಬೇಕು, ಎಂಬ ಅಂತರರಾಷ್ಟ್ರೀಯ ಸರ್ಕಾರಕ್ಕೆ ಮೂಲಸ್ತಂಭವಾದ ಲೋಕಸೋದರತೆಯ ಭಾವನೆ ಬೆಳೆಯಲು ಸಾಧನವಾಗಲಿಲ್ಲ. ಅಂತರರಾಷ್ಟ್ರೀಯತೆಯೂ ವಿಶ್ವಶಾಂತಿಭಾವನೆಯೂ ಜನರಲ್ಲಿ ಬೇರೂರಲು ಅಂತರರಾಷ್ಟ್ರೀಯ ಸಮಾಜ ಉದಯಿಸಬೇಕಾಗಿತ್ತು.

ಎರಡನೆಯದಾಗಿ ಪ್ರಜಾಪ್ರಭುತ್ವವಿಲ್ಲದುದರಿಂದ ಪ್ರಜೆಗಳ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸರಿಯಾದ ಸಂಸ್ಥೆಗಳಿರಲಿಲ್ಲ. ಇದರಿಂದ ಜನರಲ್ಲಿ ಅಂತರರಾಷ್ಟ್ರೀಯ ಶಾಂತಿಭಾವನೆಗಳು ಹುಟ್ಟಿದರೂ ಅವುಗಳಿಗೆ ಸರಿಯಾದ ರೂಪಕೊಟ್ಟು ಚಳವಳಿ ಹೂಡಿ ಹೆಚ್ಚಿನ ಪ್ರಚಾರಮಾಡಲು ಸಾಧ್ಯವಾಗಲಿಲ್ಲ.

ಕಡೆಯದಾಗಿ ಅಂತರರಾಷ್ಟ್ರೀಯ ಶಾಂತಿಸ್ಥಾಪನೆಗಾಗಿ ಕಾರ್ಯತಃ ಆಗ ಏನೊಂದೂ ನಡೆಯಲಿಲ್ಲ. ಆ ಕಾಲದ ರಾಜಕೀಯ ಮುಂದಾಳುಗಳಿಗೆ ಅಂತರರಾಷ್ಟ್ರೀಯ ಶಾಂತಿಯತ್ನಗಳಲ್ಲಿ ಸ್ವಲ್ಪವೂ ವಿಶ್ವಾಸವಿರಲಿಲ್ಲ. ಇದಕ್ಕಾಗಿ ಯೋಜನೆ

ಗಳನ್ನು ರಚಿಸಿದ ಗ್ರೋಟಿಯಸ್, ಸೇಂಟ್ ಪೀರ್ ಮತ್ತು ಕ್ಯಾಂಟಿನಂತಹ ತತ್ವಜ್ಞರು ಬರಿಯ ಧ್ಯೇಯವಾದಿಗಳೆಂತಲೂ, ಆಗದ ಹೋಗದ ಗಾಳಿಗೋಪುರ ಕಟ್ಟುವವರೆಂತಲೂ ಇವರ ಅಭಿಪ್ರಾಯ. ಸೇಂಟ್ ಪೀರಿನ ವಿಶ್ವಶಾಂತಿಯೋಜನೆಯ ವಿಷಯದಲ್ಲಿ ಫ್ರಾನ್ಸಿನ ಮಂತ್ರಿ ಕಾರ್ಡಿನಲ್ ಫ್ಲೂರಿ (Cardinal Fleury) ಹೇಳಿದನಂತೆ: "ಅದ್ಭುತವಾದ ಯೋಜನೆ! ಆದರೆ ಒಂದೇ ಒಂದು ಅಂಶ ಬಿಟ್ಟು ಹೋಗಿದೆ. ಯೂರೋಪಿನ ರಾಜರ ಹೃದಯವನ್ನು ಮಾರ್ಪಡಿಸಲು ಮಾತ್ರ ಯಾವ ಮಾರ್ಗವನ್ನೂ ತೋರಿಸಿಕೊಟ್ಟಿಲ್ಲ." ಇದೇ ವಿಷಯದಲ್ಲಿ ಪ್ರಷ್ಯ ದೇಶದ ರಾಜನಾದ ಫ್ರೆಡರಿಕ್ ದಿ ಗ್ರೇಟ್ (Frederick the Great) ಎಂಬಾತನು "ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದು ಬಹುಸುಲಭ. ಯೂರೋಪಿನ ರಾಜರ ಒಪ್ಪಿಕೆ ಪಡೆಯುವುದು ಮುಂತಾದ ಒಂದೆರಡು ಅಲ್ಪವಿಷಯಗಳನ್ನು ಬಿಟ್ಟರೆ ಇದನ್ನು ಸಾಧಿಸುವುದಕ್ಕೆ ಬೇಕಾದ ಉಳಿದ ಎಲ್ಲ ಅಂಶಗಳೂ ಇಲ್ಲಿ ಇವೆ! ಎಂದು ಹೇಳಿದನಂತೆ.

ಎಸ್. ವೆಂಕಟದೇಶಿಕಾಚಾರ್.

---

# ಕಾವ್ಯಾವಲೋಕನ

**ಹೂವಿನ ಹಾಸಿಗೆ** (ಮನೋಹರ ಗ್ರಂಥಮಾಲೆಯ ೬೧ನೆಯ ಕುಸುಮ) — ಬರೆದವರು : ಶ್ರೀ ಹೊಯಿಸಳ ; ಪ್ರಕಾಶಕರು : ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ ; ಕ್ರೌನ್ ಅಷ್ಟಪತ್ರದ ಪುಟಗಳು, ೮ + ೧೩೦ ; ಬೆಲೆ, ೧ ರೂಪಾಯಿ.

ಶ್ರೀ ಹೊಯಿಸಳರು ಮಕ್ಕಳ ಸಾಹಿತ್ಯದ ನಿರ್ಮಾಣದಲ್ಲಿ ಗಣ್ಯಸ್ಥಾನ ಪಡೆದಿರುವವರಲ್ಲಿ ಒಬ್ಬರು ; ಮಗುವಿನೊಡನೆ ಮಗುವಾಗಿ ಹುಡುಗರೊಡನೆ ಹುಡುಗರಾಗಿ ಹಾಡಬಲ್ಲವರು, ಕುಣಿಯಬಲ್ಲವರು. ಇವರು ಹಲವಾರು ಮುದ್ದಾದ ಕವನಗಳನ್ನು ಬರೆದು ಕನ್ನಡ ಕಂದನಿಗೆ ಕಾಣಿಕೆ ಕೊಟ್ಟಿದ್ದಾರೆ. ಅವುಗಳನ್ನು ಓದಿ, ಹಾಡಿ, ಕೇಳಿ ಮಕ್ಕಳು ನಲಿದಿದ್ದಾರೆ, ಕುಣಿದಿದ್ದಾರೆ. ಈಗ ಈ ಪುಸ್ತಕದಲ್ಲಿ ಇಪ್ಪತ್ತಾರು ಪುಟ್ಟ ಕಥೆಗಳನ್ನು ಕನ್ನಡ ಮಕ್ಕಳಿಗೆ ಹೊಸ ಕಾಣಿಕೆಯಾಗಿ ನೀಡಿದ್ದಾರೆ.

"ಬೆಳೆಯೇನೋ ಬೇಕಾದಷ್ಟಿದೆ, ಕೊಯ್ಯುವವರು ಕಡಮೆ" ಎಂಬ ಮಾತು ಕನ್ನಡದ ಮಕ್ಕಳಸಾಹಿತ್ಯದ ವಿಷಯಕ್ಕೆ ಅನ್ವಯಿಸುವಷ್ಟು ಪ್ರಮಾಣದಲ್ಲಿ ಸಾಹಿತ್ಯದ ಇನ್ನುಳಿದ ಯಾವ ವಿಭಾಗಕ್ಕೂ ಅನ್ವಯಿಸುವ ಹಾಗೆ ಕಾಣಲಿಲ್ಲ. ಈ ಮಾತು 'ಹೂವಿನ ಹಾಸಿಗೆ'ಯನ್ನು ಓದಿದ ಮೇಲೆ ದೃಢಗೊಳ್ಳುತ್ತದೆ. ಸ್ವಪ್ರತಿಭೆಯಿಂದ ಮಕ್ಕಳಿಗಾಗಿ ಕಥೆ ಕಟ್ಟಿ ಹೇಳುವುದು ಕಷ್ಟ. ಹಾಗೆ ಹೇಳುವವರೂ ಇದ್ದಾರೆ. ಹೊಯಿಸಳರು ಅಂಥ ಕಲ್ಪನಾಶಕ್ತಿಯುಳ್ಳವರೆಂಬುದಕ್ಕೆ ಈ ಪುಸ್ತಕದಲ್ಲೆ ಸಾಕಷ್ಟು ನಿದರ್ಶನಗಳಿವೆ. ಆದರೂ, ಸಿದ್ಧವಾಗಿರುವ ವಸ್ತುವನ್ನು ಬಳಸಿಕೊಂಡು ಮಕ್ಕಳಿಗೆ ಸೊಗಸುವ ರೀತಿಯಲ್ಲಿ ಕಥೆಕಟ್ಟಿ ಹೇಳಬೇಕಾದದ್ದೂ ಅಗತ್ಯವಾಗಿ ಮಾಡಬೇಕಾದ ಒಂದು ಕಾರ್ಯ. ಇದರಿಂದ ಬರಹಗಾರರ ಮೇಲ್ಮೆಗೆ ಊನವೇನಿಲ್ಲ. ಇಂಗ್ಲಿಷ್ ಸಾಹಿತ್ಯದಲ್ಲಿ Charles Lamb, Mary Lamb ಇವರು ಷೇಕ್ಸ್‌ಪಿಯರ್ ಮಹಾಕವಿಯ ಮಹಾ ನಾಟಕಗಳನ್ನು ಸರಳಸುಂದರ ಭಾಷೆಯಲ್ಲಿ ಕಥಾರೂಪಕ್ಕಿಳಿಸಿ ಮಕ್ಕಳಿಗೆ ರಸದೂಟವನ್ನೊದಗಿಸಿಲ್ಲವೆ? ನಾವು ಕೂಡ ಅದೇ ರೀತಿ ಮಕ್ಕಳಿಗಾಗಿ ಕಥೆಗಳನ್ನೊದಗಿಸಬೇಕೆಂದು ಉದ್ದೇಶಪಟ್ಟರೆ ವಿಷಯಕ್ಕೆ ಕೊರತೆಯೆ? ಇಡಿಯ ವಿಶ್ವದ ಸಾಹಿತ್ಯವೇ ನಮ್ಮ ಮುಂದೆ ತೆರೆದಿದೆ: ಬೇಕಾದ ರತ್ನಗಳನ್ನು ನಾವು ಆಯ್ದುಕೊಳ್ಳಬಹುದು. ದಿವಂಗತರಾದ ಪಂಜೆ ಮಂಗೇಶರಾಯರು, ಎಂ. ಎನ್. ಕಾಮತರು ಈ ಭಾಗದಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಸಮರ್ಥರಾದ ಹೊಯಿಸಳರೂ ಈ ಕಾರ್ಯ ಕೈಕೊಂಡಿರುವುದು ಸಂತೋಷ.

"ವಿಷಯುಗಳನ್ನು ಎಲ್ಲೆಲ್ಲಿಂದಲೋ ಆರಿಸಿದ್ದೇನೆ. ಕೆಲವನ್ನು ನನ್ನ ತಾಯಿಯವರು ಹೇಳುತ್ತಿದ್ದ ಗಾದೆಗಳಿಂದಲೇ ವಿಸ್ತರಿಸಿದ್ದೇನೆ. ಕೆಲವನ್ನಂತೂ ಮಕ್ಕಳ ಸಂಗಡ ಕಥೆಕಟ್ಟುವ ಆಟ ಆಡುತ್ತ ಇದ್ದಾಗ್ಗೆ ರೂಪಿಸಿಕೊಂಡಿದ್ದೇನೆ" ಎಂದು ಹೊಯಿಸಳರೇನೊ ಹೇಳಿದ್ದಾರೆ. 'ಹೂವಿನ ಹಾಸಿಗೆ'ಯಲ್ಲಿ ಯಾವವು ಬೇರೆಯ ಭಾಷೆಗಳಿಂದ ಆಯ್ದವು, ಯಾವವು ಗಾದೆಗಳಿಂದ ವಿಸ್ತರಿಸಿದವು, ಯಾವವು ನಡೆದ ಸಂಗತಿಗಳ ಆಧಾರದ ಮೇಲೆ ಕಟ್ಟಿದವು, ಯಾವವು ಸ್ವಕಪೋಲಕಲ್ಪಿತ — ಎಂಬ ಅಂಶವನ್ನು ಊಹಿಸಿಕೊಳ್ಳಬಹುದಾದರೂ ಅದನ್ನು ಪೃಥಕ್ಕಾಗಿ ನಿರ್ದೇಶಿಸಿದ್ದರೆ ಮೇಲು ಎನ್ನಿಸುತ್ತದೆ. ಆದರೆ ಇದೇನು ಅಷ್ಟು ದೊಡ್ಡ ವಿಷಯುವಲ್ಲ. ಸಕ್ಕರೆ ಯಾವ ಅಂಗಡಿಯದಾದರೇನು? ಕೊಬ್ಬರಿ ಯಾವ ಮರದ್ದಾದರೇನು? ಪಾಕ ಮುಖ್ಯ; ಬೇಕಾದ್ದು ಮಿಠಾಯಿ. ಈ ಕಥೆಗಳಲ್ಲಿ ನಿಜವಾಗಿಯೂ 'ಒಂದು ಹೊಸ ಮಾದರಿಯ ಪಾಕ' ಇಳಿದಿದೆ: ಭಾಷೆಯಲ್ಲಿ, ಶೈಲಿಯಲ್ಲಿ, ಹೇಳುವ ರೀತಿಯಲ್ಲಿ. ಹೊಯಿಸಳರು ಕಥೆ ಬರೆದಿಲ್ಲ, ಹೇಳಿದ್ದಾರೆ. ಮಕ್ಕಳಿಗೆ ಪರಿಣಾಮಕಾರಿಯಾಗಿ ಕಥೆ ಹೇಳುವ ಕಲೆಯನ್ನು ಹೊಯಿಸಳರು ಚೆನ್ನಾಗಿ ಸಾಧಿಸಿದ್ದಾರೆ. ಅಲ್ಲೊಂದು ಇಲ್ಲೊಂದು ಕಥೆ ಮಕ್ಕಳಿಗೆ ಸ್ವಾರಸ್ಯವಾಗದೆ ಹೋಗಬಹುದು; ಇಲ್ಲವೆ, ಅವರ ಅರಿವಿನ ಮಟ್ಟಕ್ಕೆ ಮಿಾರಿರಬಹುದು (ಉದಾ.—'ನಿಶ್ಚಲದಾಸ', 'ಹರಕೆ'). ಆದರೆ ಹೊಯಿಸಳರ ಕಥೆಗಾರಿಕೆಯ ಕೈವಾಡ ಉದ್ದಕ್ಕೂ ಒಂದೇ ಸಮನಾಗಿ ಸಾಗಿದೆ; ಎಲ್ಲಿಯೂ ಕುಗ್ಗಿಲ್ಲ, ತಗ್ಗಿಲ್ಲ, ಕುಂಟಿಲ್ಲ. ವಿಷಯಗಳಲ್ಲಿ ವೈವಿಧ್ಯವಿದೆ. ಕಥೆಗಳು ಬೇರೆಬೇರೆ ರಸಗಳನ್ನು ಉಕ್ಕಿಸುತ್ತವೆ: ಉದಾಹರಣೆಗೆ, 'ಹೂವಿನ ಹಾಸಿಗೆ', 'ಮುದ್ದುರಾಮು', 'ಅಶೋಕಮೂಲ' ಇವು ಕರುಣೆ ಉಕ್ಕಿಸಿ ಕಣ್ಣಲ್ಲಿ ಹನಿ ತಂದರೆ, 'ಗೌರಿಯ ಬರೆಹ', 'ಅಭ್ಯಂಕು', 'ಗಂಗು', 'ಸೋಬಾನಿ' ಇವು ನಗೆಯ ಹೊನಲು ಹರಿಸುತ್ತವೆ; 'ಅವಳಿ ಚಿಲುಮೆ', 'ಗುಣ' ಇವು ಅದ್ಭುತರಮ್ಯ; 'ನೆನಪು', 'ನ್ಯಾಯಮೂರ್ತಿ', 'ಉಂಗುರ' ಇವುಗಳ ಮುಕ್ತಾಯ ಮಕ್ಕಳನ್ನು ಬೆರಗುಗೊಳಿಸುತ್ತವೆ. 'ಕಾಕಿ' ಕಿರಿಯರಲ್ಲಿ ಕನ್ನಡದ ಅಭಿಮಾನ ಹುಟ್ಟಿಸಲು ಮಿಾಸಲಾದ, ಸ್ವಾರಸ್ಯವಾದ ಕಥೆ. ಹೊಯಿಸಳರ ಕಥಾಪ್ರಪಂಚದಲ್ಲಿ 'ಖಸೀಮಾವು', 'ಪಠಾಕ್ಷಿ' (ಪಟಾಕಿ), ಕತ್ತೆ, ಗಿಣಿ — ಎಲ್ಲ ಪಾತ್ರಗಳೇ. ಇಂಥ ಪಾತ್ರಗಳನ್ನುಳ್ಳ ಕಥೆಗಳು ಉಳಿದವಕ್ಕಿಂತ ಮಕ್ಕಳಿಗೆ ಹೆಚ್ಚು ಪ್ರಿಯ. ಕೆಲವು ಕಥೆಗಳಲ್ಲಿ ಸ್ವಾರಸ್ಯದ ಜೊತೆಗೆ ನೀತಿಯೂ ಮೈಗೊಂಡಿದ್ದು, ಅವುಗಳ ಸತ್ವ ಹೆಚ್ಚಿದೆ. ಸಂಕ್ಷೇಪದಲ್ಲಿ, ಈ ಪುಸ್ತಕ ಮಕ್ಕಳಿಗೆ ಮಿಠಾಯಿ. ದೊಡ್ಡವರು ಕೂಡ ಕಥೆಗಳನ್ನು ಓದಿ ಆನಂದಿಸಬಹುದಾಗಿದೆ. ಹೊಯಿಸಳರು ಇಂಥ ಸಿಹಿಯನ್ನು ನಾಡಿನ ಮಕ್ಕಳಿಗೆ ಆಗಿಂದಾಗ್ಗೆ ಹಂಚುತ್ತಿರಲಿ ಎಂಬುದೇ ನಮ್ಮ ಹಾರೈಕೆ.

ಪುಸ್ತಕದ ದೊಡ್ಡ ಕೊರತೆಯೆಂದರೆ, ಚಿತ್ರಗಳಿಲ್ಲದಿರುವುದು. ಈಗಿನ ಕಾಲದಲ್ಲಿ ಪುಸ್ತಕ ಅಚ್ಚು ಹಾಕಿಸುವುದೇ ಸಾಹಸದ ಮಾತಾಗಿರುವಾಗ ಚಿತ್ರಗಳನ್ನಪೇಕ್ಷಿಸುವುದು ಉಚಿತವಾಗದೇನೊ. ಮುಂದಿನ ಮುದ್ರಣದಲ್ಲಾದರೂ ಈ ಕೊರತೆ ತುಂಬಬೇಕೆಂದು ನಮ್ಮ ಆಸೆ.

—ಎಂ.ವಿ.ಸೀ.

***

**ಬೆಟ್ಟದ ಜೀವ** (ಸಾಮಾಜಿಕ ಕಾದಂಬರಿ. ಮನೋಹರ ಗ್ರಂಥಮಾಲೆಯ ೫೯-೬ನೆಯ ಕುಸುಮ)—ಗ್ರಂಥಕರ್ತರು: ಶ್ರೀ ಶಿವರಾಮ ಕಾರಂತರು; ಪ್ರಕಾಶಕರು: ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ; ಪುಟ ಸಂಖ್ಯೆ i + ೨೦೨; ಬೆಲೆ, ರೂ. ೧-೧೪-೦.

ಇದೊಂದು ಶ್ರೀ ಕಾರಂತರ ಹೊಸ ಕಾದಂಬರಿ. ಕಾದಂಬರಿ ಅನ್ನುವುದಕ್ಕಿಂತ, ಬೆಟ್ಟದ ಮಡಿಲಿನ ವ್ಯಕ್ತಿಯೊಂದರ ಜೀವನಚಿತ್ರವೆನ್ನಬಹುದು. ಶ್ರೀಮಾನ್ ಕಾರಂತರು ಉತ್ತಮ ಬರೆಹಗಾರರೆಂದು ಹೇಳಬೇಕಾಗೇನಿಲ್ಲ. ಅವರ ಕಾದಂಬರಿಗಳು ಘಟ್ಟದ ಕೆಳಗಿನವರ ಜೀವನಗಳನ್ನು ಚಿತ್ರಿಸುತ್ತವೆ. ಆ ಮೂಲೆಗೂ ಪಟ್ಟಣದ ನಾಗರಿಕತೆಯ ಗಾಳಿಯ ಸೋಂಕು ತಗುಲದೆ ಇಲ್ಲ. ಅಂತಹ ಬಿರುಗಾಳಿಗೆ ಸಿಕ್ಕಿ, ಸಂಸಾರವೊಂದರಲ್ಲಿ ಉಂಟಾದ ಕಷ್ಟಪರಂಪರೆ 'ಮರಳಿ ಮಣ್ಣಿಗೆ'ಯಲ್ಲಿ ಚಿತ್ರಿತವಾಗಿದೆ. ಮತ್ತೊಂದು ಚಿತ್ರ 'ಬೆಟ್ಟದ ಜೀವ'ದಲ್ಲಿ.

ಪುತ್ತೂರಿನ 'ಶಿವರಾಮ' ಎಂಬೊಬ್ಬರು ತಪ್ಪಿಸಿಕೊಂಡು ಹೋದ ತಮ್ಮ ದನವೊಂದನ್ನು ವಿಚಾರಿಸುತ್ತ, ದಾರಿತಪ್ಪಿ, ಬೆಳಗ್ಗಿನಿಂದ ಊಟವಿಲ್ಲದೆ ಹಸಿವಿಗೆ 'ಸುಸ್ತಾಗಿ ಅಲೆದಾಟದ ಅವಾಂತರದಿಂದ ಆಯಾಸಗೊಂಡು, ಪಂಜೆಗೆ ಹೊರಟು, ಕತ್ತಲಾಗುತ್ತ ಬಂದುದರಿಂದ ರಪರಪನೆ ಕಾಲುಹಾಕುತ್ತಿದ್ದ ದಾರಿಹೋಕರಿಬ್ಬರನ್ನು ಮರ್ಯಾದೆತಪ್ಪಿ ಮಾತನಾಡಿಸಿ, ಅವರ ಸಹಾಯದಿಂದ ಕೆಳಬೈಲಿನ, ಹವ್ಯಕ ಬ್ರಾಹ್ಮಣ ಗೋಪಾಲಯ್ಯನವರ ಮನೆಗೆ ಅಭ್ಯಾಗತರಾದರು. ಅವರ ಉಪಚಾರದ ಆರಂಭದಲ್ಲಿಯೇ ನಿದ್ರೆಯ ಅಮಲಿಗೆ ತುತ್ತಾಗಿ, ಅನಂತರ ಅವರ ಉಪಚಾರದ, ವಿಶಾಲ ಹೃದಯದ ಸೆಳವಿಗೆ ಸಿಕ್ಕಿ ಅಲ್ಲಿಯೇ ನಾಲ್ಕುದಿನ ನಿಂತು ಆ ಸಂಸಾರದ ಪರಿಚಯವನ್ನು ತಾವು ಮಾಡಿಕೊಂಡುದಲ್ಲದೆ ನಮಗೂ ಮಾಡಿಕೊಟ್ಟಿದ್ದಾರೆ. ಇದಕ್ಕಾಗಿ ಕನ್ನಡಿಗರೆಲ್ಲ ಅವರಿಗೆ ಕೃತಜ್ಞರು.

ಗೋಪಾಲಯ್ಯನವರು ತಮ್ಮ ತಂದೆಯನ್ನು ಹತ್ತನೆಯ ವಯಸ್ಸಿನಲ್ಲೂ ತಾಯಿಯನ್ನು ಹದಿನೆಂಟನೆಯ ವಯಸ್ಸಿನಲ್ಲೂ ಕಳೆದುಕೊಂಡರು. ಕೆಳಬೈಲಿನಲ್ಲಿ ಒಬ್ಬೊಂಟಿಗರಾಗಿರಲು ಬೇಸರಿಸಿ ಸೋದರಮಾವನ ಮನೆ ಸೇರಿದರು. ಆದರೆ ನೆರಮನೆಯವರಾದ

ಅತ್ತೆಯ 'ಉಪದ್ರವ'ದಿಂದ ಮನೆ ತ್ಯಜಿಸಿ, ತಾನು ತರುಣನಾಗಿದ್ದೇನೆಂದರಿತು ಕನ್ಯಾರ್ಥಿಯಾಗಿ ದೇಶಸಂಚಾರ ಹೊರಟರು. ಊರೂರಲ್ಲಿ ಉಂಟಾದ ಕಹಿ ಸಿಹಿ ಅನುಭವಗಳನ್ನು ಸಹಿಸುತ್ತ, ಹೆಣ್ಣುಮಕ್ಕಳ ಗುಂಪೊಂದನ್ನು ಪಡೆದಿದ್ದ, ಬಡತನದ ಗಾಣಕ್ಕೆ ತಲೆಯೊಡ್ಡಿದ್ದ ವಿಟ್ಲ ಸೀಮೆಯ ಪರಮೇಶ್ವರಭಟ್ಟರ ಮನೆಗೆ ಹೋಗಿ ಆತಿಥ್ಯ ಪಡೆದರು. ಅವರ ಕತೆ ಕೇಳಿ, ವ್ಯಥೆಪಟ್ಟು ಅವರ ಮೊದಲ ಹೆಣ್ಣಿನ ಸೆರೆ ಬಿಡಿಸಲು ಇಚ್ಛಿಸಿದರು. ಅಳಿಯನನ್ನು ಹುಡುಕಿಕೊಡುವುದಾಗಿ ಹೇಳಿ ತಮ್ಮೂರಿಗೆ ಭಟ್ಟರನ್ನು ಕರೆದುಕೊಂಡು ಬಂದು ತಾವೇ ಅಳಿಯನಾಗುವ ವರ ಎಂದು ಹೇಳಿ ಅವರಿಗೆ ಅಳಿಯ ನಾದರು. ಶಂಕರಮ್ಮ ಮತ್ತು ಗೋಪಾಲಯ್ಯನವರ ನವಜೀವನ ಕೆಳಬೈಲಿನ ಮನೆಯಲ್ಲಿ ಆನಂದದಿಂದ ಆರಂಭವಾಯಿತು. ಆ ಉತ್ಸಾಹದಲ್ಲಿ ಅವರು ಮಾಡದ ಕೆಲಸವಿಲ್ಲ. ತಾರುಣ್ಯದ ಹುಮ್ಮಸ್ಸು ಬೆಟ್ಟದಿಂದ ಧುಮುಕುವ ನಿರ್ಝರಿಗೆ ಅಡ್ಡಗಟ್ಟಿಸಿತು. ಕಾಡಾನೆಗಳ ಕಾಟದಿಂದ ತುಂಬಿದ ಕಾಡನ್ನು 'ಕಲಕಲ'ವೆಂದು ನಗುವ ತೋಟ ವನ್ನಾಗಿ ಮಾಡಿಸಿತು. ಆ ಉತ್ಸಾಹ, ಹುಮ್ಮಸ್ಸು, ಹಟ, ಸಾಹಸ ಮುದಿತನದಲ್ಲಿಯೂ ಅದೇ ಬಗೆಯಿಂದ ಅವರಲ್ಲಿ ನೆಲಸಿದ್ದುವು. ತಮ್ಮ ಪ್ರೇಮವಾತ್ಸಲ್ಯಗಳನ್ನು ತಮ್ಮ ಮಕ್ಕಳಲ್ಲಿ ತೋರಿಸಿದಂತೆಯೇ ತಾವು ನಟ್ಟ ಅಡಕೆ ಸಸಿಗಳಲ್ಲೂ ತೋರಿಸಿದರು. ಅವು ಗಳ ಆ ಪ್ರೇಮಕ್ಕೆ ಮಮತೆಗೆ ತಕ್ಕ ಫಲಗಳನ್ನು ಕೊಡುತ್ತಿವೆ. ಆದರೆ ಆ ಮಕ್ಕಳೊ? ಗೋಪಾಲಯ್ಯ ಮತ್ತು ಶಂಕರಮ್ಮನಿಗೆ ಎರಡು ಮಕ್ಕಳಾದುವು, ಎರಡು ಕಣ್ಣು ಗಳಂತೆ: ಒಂದು ಹೆಣ್ಣು, ಒಂದು ಗಂಡು. ಸರ್ವವಿಧದಲ್ಲಿ ಉತ್ತಮನೆನಿಸಿದ ವರನಿಗೆ ಮಗಳನ್ನು ಕೊಟ್ಟು ವಿವಾಹಸಂಬಂಧವನ್ನು ಬೆಳಸಿದರು. ಆದರೆ ಆಕೆ ಮೊದಲ ಹೆರಿಗೆಗೆ ಬಂದು ತಾಯಿಯ ತೊಡೆಯಮೇಲೆ ಪ್ರಾಣಬಿಟ್ಟಳು. ಎಲ್ಲರಂತೆ ತನ್ನ ಮಗನೂ 'ಇಂಗ್ಲೀಷ್' ವಿದ್ಯಾಭ್ಯಾಸ ಮಾಡಲೆಂದು ಪಟ್ಟಣಕ್ಕೆ ಕಳುಹಿಸಿದರು. ಯೌವನದ ಕಾಮಕ್ಕೆ ಆತುರನಾಗಿ, ಹೆಣ್ಣು ಹುಲಿಯೊಂದರ ಬಾಯಿಗೆ ತುತ್ತಾಗಿ ತಂದೆತಾಯಿಗಳನ್ನು ತೊರೆದನು — ಮಗ. ಈ ದುಃಖ ಅವರ ತುಂಬುಬದುಕಿನ ತಿಳಿ ಹೊನಲನ್ನು ಕಲಕಿಬಿಟ್ಟಿತು. ಎರಡು ಜೀವಿಗಳೂ ತಮ್ಮ ಜೀವನ ಪ್ರವಾಹವನ್ನು ತಿಳಿಯಾಗಿಟ್ಟುಕೊಳ್ಳಲು ಸಹನೆ, ತಾಳ್ಮೆಯೆಂಬ ಆಸರೆಯಿಂದ ಸಂಸಾರದಲ್ಲಿ ನಿರ್ಲಿಪ್ತತೆ ಯನ್ನು ಕಾಣಲು ಪ್ರಯತ್ನಿಸುತ್ತಿದ್ದುವು. ಪೂರ್ಣವಾಗಿ ಅಲ್ಲದಿದ್ದರೂ ಗಂಡುಜೀವ ಅದನ್ನು ಸಂಪಾದನೆ ಮಾಡಿತು. ಹೆಣ್ಣುಜೀವಕ್ಕೆ ಮಗನ ಹಂಬಲ ಅಳಿಸಲಿಲ್ಲ. ಇದರ ಮಧ್ಯೆ ನಾರಾಯಣನೆಂಬ ಅನಾಥ ಹುಡುಗನನ್ನು ತಂದು ಬೆಳಸಿ, ಮದುವೆ ಮಾಡಿಸಿ, ಅವನಿಗೆ ಭೂಮಿಕೊಟ್ಟು ಮಗ ಮಗಳಂತೆ ನೋಡಿಕೊಳ್ಳುತ್ತಿದ್ದರು. ಅವರ ಮಕ್ಕಳಲ್ಲಿ ಗಂಡನ್ನು ದತ್ತು ತೆಗೆದುಕೊಳ್ಳುವ ಯೋಚನೆಯೂ ಇತ್ತು. ಆ ಸಮಯದಲ್ಲಿ

ಅವರ ಉಪಚಾರಕ್ಕೆ ತುತ್ತಾದ ನಮ್ಮ 'ಶಿವರಾಮು'ವಿನ ನಾಲ್ಕು ದಿನದ ನಿಲುವಿನಲ್ಲಿ ಗೋಪಾಲಯ್ಯನವರ ಸಂಸಾರದ ರೀತಿಯೇ ಬದಲಿಸಿದಂತೆ ತೋರುತ್ತದೆ. ಕಾರಣ, ಅವರು ಅಭ್ಯಾಗತನ ಶುಶ್ರೂಷೆಯಲ್ಲೇ ಕಾಲ ಕಳೆದರು. ಅವರ ತಾರುಣ್ಯದ ಹುರುಪು ರೂಪುಗೊಂಡಿತು. ಸಂತೋಷ ನಾಟ್ಯವಾಡಿತು. ಹಾಸ್ಯ ಚೆಲ್ಲಾಡಿತು. ಸಾಹಸ ಇಮ್ಮಡಿಸಿತು. ಉದಾರಮನಸ್ಸು ವಿಶಾಲತರವಾಯಿತು. ದುಃಖ ಮರುಕಳಿಸಿತು. ಆಗಂತುಕನಿಂದ ಮಗನ ಅಲ್ಪಪರಿಚಯವನ್ನೂ ಇರುವಿಕೆಯನ್ನೂ ಅರಿತ ಭಟ್ಟರು ಶನಿವಾರದ ಅಡಕೆಯ ಗಾಡಿಯಲ್ಲಿ ಮನೆಗೆ ಬಂದವರನ್ನು ಕಳುಹಿಸಿಕೊಡುವ ನೆಪದಿಂದ ಪುಣೆಯುವರೆಗೆಹೋಗಿ ಮಗನನ್ನು ನೋಡುವ ಆಸೆಯ ಆತುರದಿಂದ ಹೊರಟರು. ಕತೆ ಇಲ್ಲಿಗೆ ನಿಲ್ಲುತ್ತದೆ.

ಗೋಪಾಲಯ್ಯನವರದು ಒಂದು ದೊಡ್ಡ ಜೀವ. ಬೆಟ್ಟದ ಜೀವ. ಆತನು ಬೆಟ್ಟದ ಹೊಟ್ಟೆಯಲ್ಲಿ ಹುಟ್ಟಿದ ಮನುಷ್ಯ. ಬೆಟ್ಟದಷ್ಟು ಎತ್ತರ ಬೆಳೆದಿದ್ದಾರೆ. ಮನಸ್ಸೂ ಹಾಗೆ. 'ಮಾನವೂ ಹಾಗೆ.' 'ನೀಳವಾದ ಶರೀರ. ನರೆತ ತಲೆಗೂದಲು. ಅರೆನರೆತ ಗಡ್ಡ ಮೀಸೆಗಳು. ಎಣ್ಣೆ ಹಚ್ಚಿಕೊಂಡು ಒಲೆಯಮುಂದೆ ಕೂತಿದ್ದ ಅವರು ಸಂಜೆ ದೇವನಂತೆ ಕಾಣಿಸುತ್ತಿದ್ದರು. ಶಾಂತವೂ ಗಂಭೀರವೂ ಆದ ಮುಖಚರ್ಯೆ.' ಅಯ್ಯನವರು ಇಳಿ ವಯಸ್ಸಿನಲ್ಲಿದ್ದರೂ ಎಳೆತನದ ಹುಮ್ಮಸ್ಸು. ಬದುಕಿಬಾಳಿದ ಜೀವ. ಅವರು ಜೀವನವನ್ನು ಅಳೆದು ತೂಕಮಾಡಿ ಆಡುವ ಮಾತುಗಳು ಅನುಭವದ ಗಾದೆ ಮಾತುಗಳಿದ್ದಂತೆ. ಮನುಷ್ಯನನ್ನು ಅಲ್ಪನೆಂದು ಅವರು ಭಾವಿಸಿದವರಲ್ಲ. ಕತೆಗಾರರು ಬೆಟ್ಟಗುಡ್ಡಗಳ, ಅಡಕೆ ತೆಂಗಿನ ಮರಗಳ ಬುಡದಲ್ಲಿ ನಿಂತು ಮನುಷ್ಯನ ಸಣ್ಣತನವನ್ನೂ ಅಲ್ಪತ್ವವನ್ನೂ ಕಂಡರೆ, ಆಲೋಚಿಸಿದರೆ, ಅವರು ಬೆಟ್ಟದ ಮೇಲೆ ನಿಂತು, ಮಾನವನ ದೊಡ್ಡತನವನ್ನೂ ಅಗಾಧತೆಯನ್ನೂ ಕಾಣುವರು; ಆಲೋಚಿಸುವರು. ಅಭ್ಯಾಗತನೊಡನೆ ಹಾಸ್ಯಕ್ಕಾಗಿ ಅವರು ಆಡಿದ ಮಾತು ಸುಳ್ಳಲ್ಲ. ಆಗಲೂ ಮತ್ತೊಂದು ಕಾಟಮೂಲೆಯನ್ನು ಸೃಷ್ಟಿಸಬಲ್ಲ ಶಕ್ತಿವಂತರು. ಬಲಿಷ್ಠರು. ಆ ಪ್ರೇಮದ ಬೆಲೆ ಅಪ್ಸರಮಟ್ಟಿನದು. ಅಂತರಿಕ್ಷಕ್ಕೆ ಕೈಯಿಡುವ ಸಾಮರ್ಥ್ಯವಿರುವುದರಿಂದಲೇ ಕೈಚಾಚುವ ಧೈರ್ಯ. ಆತನ ಹಟ, ಸಾಹಸ, ಧೈರ್ಯ, ಹುರುಪು ಮನುಷ್ಯಮಾತ್ರದವನಿಗೆ ಬರಲಾರದು. 'ಸಂತೋಷಪರಿತ' ಜೀವನದ ಮಧ್ಯೆ ಬಂದೊದಗಿದ ದುಃಖವನ್ನು ಮರೆಯಲು ಹವಣಿಸುತ್ತಿದ್ದರು. ದುಃಖತಪ್ತವಾದ ಜೀವ ಉಳಿದ ಬದುಕನ್ನು ಸಮತೆಯಿಂದ ಕಳೆಯುವ ಅಭ್ಯಾಸದಲ್ಲಿ ತೊಡಗಿತ್ತು. ಕಷ್ಟಜೀವಿಗಳಿಗೆ ಸಹಾಯಮಾಡುವ ಉದಾರ ಮನಸ್ಸು. ನಾರಾಯಣ ಅವರನ್ನು ದೇವರೆಂದು ತಿಳಿದ. ಪೂಜಿಸಲೂ ಸಿದ್ಧನಿದ್ದ. ಕೆಂಚಣ್ಣ ಅಲಕ್ಷಿಸಿದ. ಆಗಂತುಕರನ್ನು ಆತ್ಮೀಯರನ್ನಾಗಿ

ಮಾಡಿಕೊಳ್ಳುವ ಇಚ್ಛೆ. ಏಕೆಂದರೆ ಅವರ ಮನಸ್ಸನ್ನು ಅಳೆಯುವ ಶಕ್ತಿ ಅವರಲ್ಲಿತ್ತು. ತಮ್ಮ ಸುತ್ತುಮುತ್ತಲಿನ ಜನದ ಮನಸ್ಸು ಅವರಿಗೆ ತಿಳಿದಿತ್ತು. ಮಕ್ಕಳನ್ನು ಕಳೆದು ಕೊಂಡು ಮನುಷ್ಯರಿಂದ ದೂರವಾಗಿದ್ದ ಅವರು ಮನುಷ್ಯನ ಸಹವಾಸಕ್ಕೆ ಎಳಸು ತ್ತಿದ್ದರು. ಸಂತೋಷದಂತೆಯೇ ದುಃಖವನ್ನೂ ಹಂಚಿಕೊಂಡು ಅನುಭವಿಸಲು ಹಾತೊರೆಯುತ್ತಿದ್ದರು. ಆದ್ದರಿಂದಲೇ 'ಶಿವರಾಮು'ವಿನಲ್ಲಿ ಅಷ್ಟೊಂದು ಸಲಿಗೆ ಗಂಡಹೆಂಡಿರಿಗೆ. ನಾರಾಯಣ ಲಕ್ಷ್ಮಿಯರಲ್ಲಿ ಮಕ್ಕಳ ಪ್ರೇಮ, ಅವರ ಮಕ್ಕಳೇ ತಮ್ಮ ಮಕ್ಕಳು. ಆದರೂ ಹೆತ್ತಮಕ್ಕಳೇ ಹಾಗಾದ ಮೇಲೆ ಬೆಳೆದ ಮೇಲೆ ಇವರೂ ಯಾವ ತೆರನೋ ಎಂಬ ಯೋಚನೆ ತಲೆಯಿಂದ ತೊಲಗದು. ನಾರಾಯಣ ಲಕ್ಷ್ಮಿಯರ ಬದುಕು ಅವರ ಬದುಕಿನ ಹೊಸಲ ಕಾಲುವೆ. ಪ್ರೇಮದ ಪ್ರವಾಹ ಬತ್ತದು. ಮುಂದಾಲೋಚನೆಯುಳ್ಳವರಾದ್ದರಿಂದ ನಾರಾಯಣನಿಗೆ ಉಯಿಲು ಬರೆದುಕೊಡುವ ಯೋಚನೆ ಅವರಿಗೆ ಇದ್ದೇ ಇತ್ತು. ಆದರೆ ಮಗನ ಮೇಲಿನ ಮೋಹವೂ ತಪ್ಪಿರಲಿಲ್ಲ. ನಾರಾಯಣನೇ ತಮಗೆ ಕಡೆಗಾಲಕ್ಕೆ ಕಿಚ್ಚಿಡುವನೆಂದು ಹೇಳುತ್ತಿದ್ದರೂ ಮಗನ ಚಿಂತೆ ಶಂಕರಿಗೆ ಮಟ್ಟಿಗೆ ಎಂದು ನುಡಿಯುತ್ತಿದ್ದರೂ ತಪ್ಪುಮಾಡಿದ ಮಗನನ್ನು ನೋಡುವ ಹಂಬಲ ಅಂತರ್ಯದಲ್ಲಿ ಇತ್ತು. 'ಆತ ದುರ್ಮಾರ್ಗಿಯಾಗಲಿ, ಅವನು ಅನುಭವಿಸಲಿ, ದುರುಪಯೋಗಪಡಿಸಲಿ ಹಿರಿಯರು ಸಂಪಾದಿಸಿದ್ದು ಅವನಿಗೆ ಸೇರಿದುದು. ಅದು ಅವನದೇ! ಎಂಬುದು ಅವರ ಮನಸ್ಸು.

ಅವರ ಮಾತು ಮಾತಿನಲ್ಲಿ ಕಂಡುಬರುವ ಹಾಸ್ಯ ಆ ದಂಪತಿಗಳ ಸುಖಜೀವನದ ಹೆಗ್ಗುರುತು. ಗಂಡಹೆಂಡಿರಲ್ಲಿ ಯಾರೂ ಮಾತಿಗೆ ಸೋಲುವಂತಿರಲಿಲ್ಲ. ಹಾಸ್ಯ ಮಾಡುವುದರಲ್ಲಿಯೂ ಯಾರಿಗೆ ಯಾರೂ ಕಡಿಮೆಯಲ್ಲ. ಶಂಕರಿಯ ನಸ್ಯದ ಪ್ರಸಂಗ, ತಮ್ಮ ಮಾವನಿಗೆ ಅಳಿಯನನ್ನು ಹುಡುಕಿಕೊಟ್ಟರೀತಿ, ದೇರಣ್ಣನನ್ನು ಹಾಸ್ಯದ ಕಡಲಿಗೆ ನೂಕಲು 'ಶಿವರಾಮು'ವಿಗೆ ತಹಶೀಲ್ದಾರರ ಪದವಿ, ದೇರಣ್ಣನನ್ನು ವ್ಯಾಘ್ರ ಯಜ್ಞದ ಶ್ವಾನಹವಿಸ್ಸಿನ ಜೊತೆಗೆ ಸೇರಿಸಿದ್ದು, ನಾರಾಯಣನ ಪರ ವಕಾಲತ್ತಿಗೆ ಒಟ್ಯನಿಗೆ ಪಾಯಸ ಅವರು ತಮ್ಮ ಪತ್ನಿಯೊಡನೆ ಮಾತಾಡುವಾಗ ಹೊರ ಹೊಮ್ಮುತ್ತಿದ್ದ ಹಾಸ್ಯ— ಇವನ್ನು ಪುಸ್ತಕ ಓದಿಯೇ ಅನುಭವಿಸಬೇಕು.

ಶಂಕರಮ್ಮ ಗೋಪಾಲಯ್ಯನವರಿಗೆ ತಕ್ಕ ಹೆಂಡತಿ. ಬಡತನದ ಬುಟ್ಟಿಯಲ್ಲಿ ಬಳೆದರೂ ಐಶ್ವರ್ಯವಂತ ಮನೆಯೊಳಗೆ ಸರಿಹೊಂದಿಕೊಂಡ ಹೆಣ್ಣುಮಗಳು ಆಕೆ. ಗಂಡಹೆಂಡಿರು ಜೀವನಸಂಗ್ರಾಮದಲ್ಲಿ ಒಟ್ಟಿಗೆ ಸಮನಾಗಿ ದುಡಿದವರಾದರೂ ಆದರ ಶ್ರಮ ಹೆಂಡತಿಯ ಮುಖದ ಮೇಲೆ ಕಟುವಾಗಿ ಮೂಡಿ ಗಂಡನಿಗಿಂತ ಹತ್ತು ವರುಷ ಹೆಚ್ಚಿನವಳಾಗಿ ಕಾಣುವಂತೆ ಮಾಡಿತ್ತು. ಅವರ ನಿತ್ಯಕಾದಾಟ ಅವರ ಪ್ರೇಮಾಭಿ

ವೃದ್ಧಿಗೆ ಕಾರಣವಾಗಿ ಅವರು ಸಂಸಾರದಲ್ಲಿ ನಿತ್ಯವೂ ಹೊಸತನ್ನೇ ಕಂಡರು. ಮೊದಲು ಗಂಡನೊಡನೆ ಮಾತಾಡಲು ನಾಚಿಕೆಪಡುತ್ತಿದ್ದರೂ, ತಾಯಿಯ ಉಪದೇಶದಂತೆ ಗಂಡನನ್ನು ವಿಚಾರಿಸುವ ಮಾತುಗಾತಿಯಾದಳು. ಅವಳ ಜೀವನವನ್ನು ಕೊರೆಯುತ್ತಿದ್ದುದು ಮಗಳ ಮರಣದ ದುಃಖಕ್ಕಿಂತ ಮಗನ ಅಗಲಿಕೆಯ ವೇದನೆ. ಆದ್ದರಿಂದ ಹೊಸಬನನ್ನು ಕಂಡರೆ ಮಗನನ್ನು ಕಂಡಷ್ಟು ಪ್ರೇಮ. ನಾರಾಯಣನ ಮಕ್ಕಳ ಮೇಲಿನ ಪ್ರೇಮದಿಂದ ಜೀವನದ ಬೇಸರವನ್ನು ಹೋಗಲಾಡಿಸುವ ಅಭ್ಯಾಸ ಮಾಡಿಕೊಂಡರು.

ನಾರಾಯಣಯ್ಯ ಆತನ ಹೆಂಡತಿ, ಬಟ್ಯ, ದೇರಣ್ಣ, ಇವರ ಪಾತ್ರ ಕಥಾನಾಯಕ ನಾಯಕಿಯರ ಜೀವನ ಚಿತ್ರಕ್ಕೆ ಹಿನ್ನೆಲೆ. ಅವರಿಂದ ಕಾದಂಬರಿಯ ಬೆಳವಣಿಗೆಗೆ ಸಹಾಯವಾಗಿದೆ. ನಾರಾಯಣಯ್ಯ ಗೋಪಾಲಯ್ಯನವರ ಸಾಹಸ ಕಾರ್ಯಗಳನ್ನೂ ಉದಾರ ಮನಸ್ಸನ್ನೂ ವರ್ಣಿಸುವವನು. ಆತ ಬಣ್ಣ ಹಚ್ಚಿಸಿ ಬಣ್ಣಿಸಿದರೂ ತಪ್ಪಿಲ್ಲ. ಅವನಿಗೆ ಅವರು ದೇವರು. ಅವರಿಗೆ ಆತ ಕೃತಜ್ಞ. ಆದರೆ ಅವರ ಮಗನ ವಿಷಯದಲ್ಲಿ ಸಂದೇಹ: ತನ್ನ ಸತಿಗೆ ಉಂಟಾದ ಅನುಭವದಿಂದ.

ಅಲ್ಲಲ್ಲಿ ಬರುವ ಹುಲಿಯ ಬೇಟೆಯ ವಿಷಯ, ಅದನ್ನು ಬೇಟೆ ಆಡಿದ ಚಿತ್ರ, ದೇರಣ್ಣನ ಬೇಟೆಯ ಅನುಭವದಲ್ಲಿ ಕಂಡುಬರುವ ಸ್ವಾರ್ಥತೆ, ದೇವತೆ 'ಕಲ್ಕುಡ'ನ ವಿಚಾರ ಕತೆಯಪುಷ್ಟಿಗೆ ಸಹಾಯಕವೇ. ಒಂದು ಬೆಟ್ಟದ ಗಟ್ಟಿಜೀವನದ ಸಾಹಸಕ್ಕೆ ನಿದರ್ಶನವಾದರೆ, ಮತ್ತೊಂದು ಹಳೆಯ ಸಂಪ್ರದಾಯದ ಭಯಕ್ಕೆ ಹೆಗ್ಗುರುತು.

ಕಾದಂಬರಿಯ ಶೈಲಿ ಬಿಗಿ. ಕನ್ನಡದಲ್ಲಿ ಮಂಗಳೂರಿನ ಭಾಷಾಛಾಯೆ ತಕ್ಕಮಟ್ಟಿಗೆ ತನ್ನ ಚಹರೆಯನ್ನು ತೋರ್ಪಡಿಸಿಕೊಂಡೇ ಇದೆ ಎನ್ನಬೇಕು. ಆದರೆ ಕಾದಂಬರಿಕಾರರು, ಹವ್ಯಕರ ಅಚ್ಚಗನ್ನಡವನ್ನೇ ಬರೆಯದೆ ಉಪಕಾರ ಮಾಡಿ ಕೊಟ್ಟಿದ್ದಾರೆ. ಶೈಲಿಯಲ್ಲಿ ಕನ್ನಡನುಡಿಯ ಕೆಲವು ನುಡಿಗಟ್ಟು ಕಂಡುಬರುತ್ತವೆ. ಪದಗಳನೇಕ ಬೆರತಿವೆ. ಉದಾ. ಫಜೀತಿ; ಬಚಾವು; ಬರಕತ್ತು. 'ಮರಳಿಮಣ್ಣಿಗೆ' ಯಲ್ಲಿ ಕೊಟ್ಟಿರುವಂತೆ ಕೆಲವು ರೂಢಿಪದಗಳ ಅರ್ಥ ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದರೆ ಹೆಚ್ಚು ಅನುಕೂಲವಾಗುತ್ತಿತ್ತು. ಉದಾ. ದಂಬೆ; ಬರೆಕರೆ; ಪಿಜ್ಜ; ಕೊಗಳುಕಟ್ಟೆ; ಜಂಬರ.

ಶ್ರೀ ಕಾರಂತರ ಕಾದಂಬರಿಗಳಲ್ಲಿ ಇದು ಉತ್ತಮವಾದುದೊಂದೆನ್ನಬಹುದು. ಗೋಪಾಲಯ್ಯ ಶಂಕರಮ್ಮ ಸಾಹಿತ್ಯದಲ್ಲಲ್ಲದೆ ಬದುಕಿನಲ್ಲೂ ಪರಿಚಯಸ್ಥರಾಗಿ ಆದರ್ಶಜೀವಿಗಳಾಗಿ ನಿಲ್ಲುವ ವ್ಯಕ್ತಿಗಳು.

ಆರ್. ಎಸ್. ರಾಮರಾವ್.

---

# ಸಂಪಾದಕೀಯ

ಈ ಪತ್ರಿಕೆ ಹುಟ್ಟುವ ಸಮಯದಲ್ಲಿ ಅದಕ್ಕೆ ಕಾರಣರಾದ ಶ್ರೀಮಾನ್ (ಈಗ ಪ್ರೊಫೆಸರ್) ಎ. ಆರ್. ಕೃಷ್ಣಶಾಸ್ತ್ರಿಗಳವರಿಗೆ ಒಂದು ಧೈರ್ಯವಿತ್ತಂತೆ: ಹೇಗಿದ್ದರೂ ತಾವು ವಿದ್ಯಾರ್ಥಿಗಳಿಂದ ಪ್ರಬಂಧ ಬರಸುವುದುಂಟು. ಆ ಪ್ರಬಂಧ ಗಳಲ್ಲಿ ಉತ್ತಮವಾದವುಗಳನ್ನು ಆರಿಸಿ ಪ್ರಕಟಿಸಿದರಾಯಿತು. ಜೊತೆಗೆ ತರಗತಿಗಳಿಗೆ ಪಾಠಗಳನ್ನು ಹೇಳುವಾಗ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕೆಲವು ಸಂಗತಿಗಳನ್ನು ಒಂದು ಕ್ರಮದಲ್ಲಿ ಸಿದ್ಧಮಾಡಿಕೊಳ್ಳಬೇಕಾಗುವುದು; ಎರಡನ್ನೂ ಸೇರಿಸಿದರೆ ೩೨ ಪುಟ ಪ್ರಬುದ್ಧ ಕರ್ಣಾಟಕದ ಕೆಲಸ ಸಾಧಿತವಾಗುತ್ತದೆ ಎಂದು. ಆ ಧೈರ್ಯ ಮೊದಮೊದಲು ಸಾರ್ಥಕವಾಯಿತು. ಶ್ರೀ|| ಗಳಾದ ಸಿ. ಕೆ. ವೆಂಕಟರಾಮಯ್ಯ, ಎಸ್. ವಿ. ರಂಗಣ್ಣ, ಪಿ. ಕೃಷ್ಣರಾವ್ ಮುಂತಾದ ಉತ್ಸಾಹೀಯುವಕರ ಬರವಣಿಗೆ ಪತ್ರಿಕೆಗೆ ದೊರೆಯಿತು. ಶಾಸ್ತ್ರಿಗಳೇ ಕಾವ್ಯಾವಲೋಕನಾದಿಗಳಲ್ಲಿ ತೊಡಗಿ ಒಂದು ಸಂಪ್ರದಾಯವನ್ನು ಬಳಕೆಗೆ ತಂದರು. ಬರವಣಿಗೆ, ದೃಷ್ಟಿಗಳಲ್ಲಿ ಹೊಸ ನಡೆಯು ಪ್ರವರ್ತನೆಯಾಗಿ ಕನ್ನಡಕ್ಕೆ ಒಂದು ವಿಶೇಷ ಸೇವೆ ಸಂದಿತು. ಗಾತ್ರದಲ್ಲಿ ಚಿಕ್ಕದಾ ಗಿದ್ದ ಪ್ರಬುದ್ಧಕರ್ಣಾಟಕ ಅವರ ಕೈಯಲ್ಲಿಯೇ ಬೆಳೆದು ದೊಡ್ಡದಾಗಿದೆ. ಮಿತವಾಗಿ ಒದಗಿಸಬೇಕಾಗಿದ್ದ ಆಹಾರ ಇವೊತ್ತು ಹೆಚ್ಚಾಗಿಬೇಕಾಗಿದೆ. ಅದಕ್ಕೆ ತಕ್ಕಂತೆ ವಿವಿಧತೆ ವಿಸ್ತಾರಗಳೂ ಹೆಚ್ಚಿವೆಯೆಂಬುದನ್ನು ನೆನಪಿನಲ್ಲಿಟ್ಟರೆ, ಕೇವಲ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಭಕ್ತವರ್ಗಮಾತ್ರವೇ ಅಲ್ಲ ನಮ್ಮ ವಿಶ್ವವಿದ್ಯಾ ನಿಲಯದ ವಿದ್ಯಾಮಂಡಲವೆಲ್ಲ ಇದಕ್ಕೆ ತೆರೆದಿದೆ — ಎಂಬುದನ್ನೂ ಎಣಿಕೆಗೆ ತಂದು ಕೊಂಡರೆ ಈ ಆಹಾರ ದೊರಕಿಸುವುದು ಕಷ್ಟವಾಗಬಾರದು. ಆದರೆ ಕನ್ನಡ ಪತ್ರಿಕೆಗೆ ಯಾವ ಲೋಕಮಾನ್ಯತೆ ಇದೆ? ಅದರಲ್ಲಿ ಪ್ರಕಟಿಸಿದೆಯೆಂದರೆ ಕೇಳುವವರು ಯಾರು? ಸರಕಾರಕ್ಕಾಗಲಿ, ಭರತ ಖಂಡದಲ್ಲಿಯಾಗಲಿ, ಹೊರಪ್ರಪಂಚದಲ್ಲಿಯಾಗಲಿ ಗಣನೆ ಬರುವ ಹಾಗಿಲ್ಲ. ಹೀಗಾಗಿ ಹೊಸ ಯೋಚನೆಯ ಫಲವೆಲ್ಲ ಕನ್ನಡಕ್ಕೆ ದೊರೆಯದೆ ಬೇರೆ ಭಾಷೆಗೆ, ಬೇರೆ ಪತ್ರಿಕೆಗಳಿಗೆ ಹೊರ ಪ್ರಯೋಜನಕ್ಕೆ ಒದಗುವುದು ಸಹಜ. ಇದು ತಪ್ಪೆಂದು ಹೇಳುವುದು ಅನ್ಯಾಯ. ನಮ್ಮ ಭಾಷೆಯನ್ನು ಭರತಖಂಡದಲ್ಲಿ ಒಂದು ಮರ್ಯಾದೆಯ ಸ್ಥಾನಕ್ಕೆ ತಂದ ಹೊರತು, ಅದರ ಗೌರವಕ್ಕೆ ಬೇರೆಯವರಿಂದ ಕಾಣಿಕೆ, ಮಣಿತ ಬರುವುದು ಶಕ್ಯವಿಲ್ಲ. ಅವು ಬಂದ ಹೊರತು, ಇಲ್ಲಿ ಬರೆದುದನ್ನು ಜನರು ನಿರೀಕ್ಷಿಸಲಾರರು; ಅದನ್ನು ಓದಲು ತವಕಪಡುತ್ತಿರಲಾರರು.

ಆದರೆ ಅದನ್ನು ಸಾಧಿಸಿಕೊಡಬೇಕಾಗಿರುವವರು ನಮ್ಮ ವಿದ್ವಾಂಸರೇ ಎಂಬು ದನ್ನು ಮರೆಯಲಾಗುವುದಿಲ್ಲ. ಒಂದು ಕಾಲದಲ್ಲಿ ಇಲ್ಲಿನ ಸಾಹಿತ್ಯಾದಿ ಲೇಖನ ಸಂಪತ್ತನ್ನು ದೇಶವಿದೇಶಗಳವರು ಸಂಗ್ರಹಿಸಿದರು; ಇಂಗ್ಲಿಷಿಗೆ ಭಾಷಾಂತರ ಮಾಡಿಕೊಂಡರು. ಇಂದೂ ಬಂಗಾಳಿ, ಮರಾಠಿ ಭಾಷೆಗಳ ವರ್ಚಸ್ವಿತೆಯಿಂದ ಅವಕ್ಕೆ ಗಣ್ಯತೆ ದೊರೆತಿವೆ. ಅದಕ್ಕೆ ಕಾರಣ, ಅಲ್ಲಿನ ಲೇಖಕರು ಸಾಹಿತಿಗಳು. ಮೊದಲು ತಮ್ಮ ಬರಹವನ್ನು ಅವರು ತಮ್ಮ ನುಡಿಯಲ್ಲಿ ಮಾಡುತ್ತಾರೆ; ಆ ಮೇಲೆ ಇಂಗ್ಲಿಷು ಮಾಡಿಕೊಳ್ಳುತ್ತಾರೆ. ಕೆಲವು ಸಮಯ ಇಂಗ್ಲಿಷಿನದಕ್ಕೆ ಮೂಲವಾದ ಲೇಖನ ತಮ್ಮ ಭಾಷೆಯಲ್ಲಿದೆ, ವಿವರಗಳಿಗೆ ಅದನ್ನು ನೋಡಿರೆಂದು ಬರೆಯುವುದುಂಟು. ಪ್ರಪಂಚದ ಮಾನ್ಯಭಾಷೆಗಳ ಸಂಪ್ರದಾಯವೆಲ್ಲ ಹೀಗೆ. ವಿಷಯಪರಿಶೀಲನೆ ಯಲ್ಲಿ ಆಸಕ್ತಿಯಿರುವವರು ಆ ಭಾಷೆಯನ್ನು ಕಲಿತು ಉಪಯೋಗ ಪಡೆದುಕೊಳ್ಳ ಬೇಕಾದ ಅವಶ್ಯ ಉಂಟಾಗುವುದು. ಕನ್ನಡಕ್ಕೆ ಆ ಗೌರವವನ್ನೂ ಸ್ಥಾನವನ್ನೂ ಗಳಿಸಿಕೊಡುವ ಪುಣ್ಯ ನಮ್ಮ ವಿದ್ವಾಂಸರ ಪಾಲಿಗೆ ಎಂದು ಬರುವುದೋ. ನಮ್ಮ ಹೊಲ, ಮನೆ, ತೋಟ ಎಂದು ತುಂಬಿ ಸಿಂಗರವಾದಾವೋ. ಇಲ್ಲಿನ ಬೆಳಸನ್ನು ಜಗತ್ತಿಗೆ ಎತ್ತಿತೋರಿಸಿ ಎಂದು ಪುನಃ ಮನ್ನಣೆ ಪಡೆದೇವೋ. ಗಿಡ ಚಿಗುರಿಟ್ಟು ಹೂತೊಟ್ಟ ಹೊರತು ಅದಕ್ಕೆ ಚೆಲುವಿಲ್ಲ. ಮೊಗ್ಗು ತನ್ನ ಕಾವಿನ ಮೇಲೆ ಬಿರಿದು ಅರಳುವುದಕ್ಕೆ ಆರಂಭಿಸಿತೆಂದರೆ ಅದರ ಚೆಲುವು, ಮೃದು, ಬಣ್ಣ, ಕಂಪುಗಳಿಗೆ ದುಂಬಿಗಳು ಮೋಹಿಸಿ ಅದಿರುವಲ್ಲಿಗೇ ಬರುತ್ತವೆ. ಅದಕ್ಕಾಗಿ ಮಧುಪಾನ ಮಾಡಿ ಸೊಕ್ಕುತ್ತವೆ; ಮೊರೆಯುತ್ತವೆ. ಅದರ ಪರಿಮಳವನ್ನು ಗಾಳಿ ಹೊತ್ತು ಹತ್ತು ದಿಕ್ಕುಗಳಿಗೂ ಬೀರುತ್ತದೆ. ಹೂ ಅರಳಿದುದು ಆಗ ಸಾರ್ಥಕವಾಗುತ್ತದೆ. ಇದು ನಡೆದ ಹೊರತು, ಮಿಡಿ ಹುಟ್ಟದು, ಕಾಯಾಗದು, ತಿರುಳು ಬಲಿಯದು, ಹಣ್ಣಾಗದು, ಬಿತ್ತ ಬಲಿಯದು. ನಾಳಿನ ಬದುಕಿನ ಸತ್ತ್ವ ಸಿದ್ಧವಾಗದು. ಆ ಹೂ ಹೇಗೋ ಬಾಳ ಹೂವಿನ ಸಫಲತೆಯೂ ಹಾಗೆಯೇ ಆಗಬೇಕು. ಅಂಥ ಭಾಗ್ಯವನ್ನು ಬೆಳಸುವ ಕಾರ್ಯದ ಹೊಣೆಗಾರಿಕೆ ನಮ್ಮ ವಿದ್ವಾಂಸರ ಪಾಲಿಗೆ ಬಂದಿದೆ.

ಹತ್ತು ವರ್ಷಕಾಲ ವ್ರತನೇಮ ಹೊತ್ತು ಪ್ರಪಂಚದ ಸಾರಸಂಗ್ರಹಮಾಡಿ ತಿಳಿವಳಿಕೆಯನ್ನು ಕನ್ನಡ ಜನಕ್ಕೆ ಕನ್ನಡದಲ್ಲಿ ನೀಡಿದರೆ ಈಗ ಪರಭಾಷೆಗಳಲ್ಲಿ ಮಾತ್ರ ದೊರಕುವ ಸಂಪತ್ತಿ ಆ ಭಾಷೆತಿಳಿಯದ ಇವರಿಗೆ ಎಟುಕುವುದು. ನಮಗಿಂತ ಬುದ್ಧಿಶಕ್ತಿ ಯಲ್ಲಿ ಹೇಗೂ ಕೀಳಲ್ಲದ, ಆದರೆ ನಾನಾ ಕಾರಣಗಳಿಂದ ಅನ್ಯಭಾಷೆಗಳ ಅರಿವಿಲ್ಲದ ಮೇಧಾವಿಗಳಿಗೆ ಪ್ರಚೋದನ ಸಾಮಗ್ರಿಯೂ ಸಂಪುಷ್ಟಿಯೂ ದೊರೆಯುವುವು. ಅಲ್ಲಿಂದ ಮುಂದೆ ಸ್ವಂತವಾಗಿ ಅವರೇ ಯೋಚಿಸಿ ಲೋಕವನ್ನು ಹೊಸದಾಗಿ

ನೋಡುವ, ಬರೆಯುವ, ಮತ್ತು ಕಾರ್ಯವ್ಯವಸ್ಥೆ ಕೈಕೊಳ್ಳುವ ಆಸಕ್ತಿ ಅವರಿಗೆ ಬರುವುವು. ಅಂಥ ಕೆಲಸಗಾರವರ್ಗ ರಚಿತವಾಗುವಂತೆ ವಿಶ್ವವಿದ್ಯಾನಿಲಯಗಳಲ್ಲಿರುವ ಗೆಳೆಯರು ನೆರವು ಕೊಡಬೇಕಾಗಿದೆ.

ಎಲ್ಲೆಲ್ಲಿನ ವಿಷಯಗಳನ್ನೂ ಕೂಡಿಸಿ ತಿಳಿಸಿಕೊಡುವುದು ಒಂದು ಭಾಗ. ಆದರೆ ಅದೆಲ್ಲ ಎರವಲು ಸಂಪತ್ತು; ಅಲ್ಲಿಂದ ಇಲ್ಲಿಂದ ಎತ್ತಿತಂದ ಭಾಗ್ಯ. ಇದರಿಂದ ಹೊಟ್ಟೆಗೆ ಆಹಾರ ಸಿಕ್ಕುವುದು ನಿಜ. ಆದರೆ ಅದನ್ನು ಜೀರ್ಣಿಸಿಕೊಂಡು ರಕ್ತವಾಗಿ ಮಾಡಿಕೊಳ್ಳುವುದು ಕನ್ನಡಿಗರ ಕೆಲಸವಾಗುತ್ತದೆ. ಅದಕ್ಕಾಗಿ ಅವರ ಜೀರ್ಣ ಶಕ್ತಿಯನ್ನು ಕೂಡ ಕುದುರಿಸಬೇಕು. ಹೊಸ ಅಗ್ನಿಗಳನ್ನು ಹೊತ್ತಿಸಿ ಅದರಿಂದ ಹೊಸ ಪಾಕಗಳಿಳಿಯುವಂತೆ ಮಾಡಬೇಕು. ಜೊತೆಗೆ ಇನ್ನೊಂದು ಕಾರ್ಯಭಾಗವಿರುವುದು: ಈ ಕಾಲದ ಯೋಚನಾಮಾರ್ಗ; ಪರೀಕ್ಷಾ ಪ್ರಯತ್ನಗಳ ಸ್ವರೂಪ ಲಕ್ಷಣ, ವಿಧಾನ; ಜ್ಞಾನವಿಜ್ಞಾನಗಳ ಸಿದ್ಧಾಂತಮಾರ್ಗ, ವ್ಯಾಖ್ಯಾನವಿಧಾನ, ಯಂತ್ರ ನಿರ್ಮಾಣಕಾರ್ಯ — ಈ ಭಾಗಗಳ ಕಡೆಗೆ ಕೂಡ ನಮ್ಮವರ ಗಮನ ಹೋಗುವಂತೆ ಮಾಡಬೇಕು. ಸಾಧನ ಸಾಮಗ್ರಿಯನ್ನೂ, ಯಂತ್ರಭಾಗವನ್ನೂ, ದೃಷ್ಟಿರೀತಿಯನ್ನೂ, ವಿವೇಚನಾಶಕ್ತಿಯನ್ನೂ ಒದಗಿಸಿಕೊಟ್ಟರೆ ಒಂದು ಹೊಸ ಮೊನೆಯಿಂದಲೂ ಶ್ರದ್ಧೆಯಿಂದಲೂ ಜನ ಸ್ವಂತವಾಗಿ ಸಾಹಸಮಾಡಬಲ್ಲವರಾಗುತ್ತಾರೆ. ಗುರಿಗಳು ಯಾವುವು? ಸಾಧನಗಳಾವುವು? ಪ್ರಯೋಗರೀತಿ ಹೇಗೆ? ಯಾವ ಯಾವುದರ ಬೆಲೆ ಎಷ್ಟು? ಯಾವುದು ಪ್ರಧಾನ, ಯಾವುದು ಗೌಣ? ಯಾವುದು ತತ್ವ? ಯಾವುದು ವಾದ ಅಥವಾ ಯುಕ್ತಿ ಮಾತ್ರ? ಯಾವುದು ಸತ್ಯ? ಯಾವುದು ಅಭಿಪ್ರಾಯ? ಯಾವುದು ಬರಿಯ ನಂಬಿಕೆ ಅಥವಾ ಪಕ್ಷಪಾತ? ಯಾವುದು ಖಚಿತವಾಗಿ ಸಿದ್ಧವಾಗಿರುವ ಸಂಪತ್ತು? ಎಂಬವುಗಳ ಪೂರ್ತಿ ತಿಳಿವಳಿಕೆ ಮಾಡಿಕೊಡಬೇಕಾದ ಹೊಣೆ ವಿಶ್ವವಿದ್ಯಾನಿಲಯದವರದು.

* * *

ಮೊನ್ನೆ 'ರಾಜಕಾರಣ ಪಟುಗಳು ಮತ್ತು ಸಾಹಿತ್ಯ' ಎಂಬ ವಿಷಯವನ್ನು ಕುರಿತು ಮಾತನಾಡುತ್ತ ಪ್ರಿನ್ಸಿಪಲ್ ಶ್ರೀ|| ಎ. ಬಿ. ಮ್ಯಾಕಿಂಟಾಷ್ ಅವರು ಈ ಎರಡು ವಿಷಯಗಳಿಗೂ ಯೂರೋಪಿನಲ್ಲಿ, ಇಂಗ್ಲೆಂಡಿನಲ್ಲಿ ಹೇಗೆ ಸಂಬಂಧವಿದೆ ಎಂದು ಹೇಳುತ್ತ, ವಿಶ್ವವಿದ್ಯಾನಿಲಯದಲ್ಲಿ ಬಲಿಯುವ ದೃಷ್ಟಿ ಮತ್ತು ಶೀಲ ಹೇಗೆ ರಾಜಕೀಯಕ್ಕೆ ಪೋಷಕವಾಗುತ್ತವೆ ಎಂದು ವಿವರಿಸಿದರು. ವಿನೋದಕ್ಕೇ ಸ್ಫೂರ್ತಿಗೇ ಮಾತ್ರವಲ್ಲದೆ ಸಾಹಿತ್ಯ ಜನಜೀವನದ ಉತ್ಥಾನತೆಗೂ ಹೇಗೆ ಸಾಧಕವಾಗುತ್ತದೆ ಎಂದು ವಿವರಿಸಿದರು. ಅದೇ ಸಮಯದಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯದ ಸ್ಥಾನಪತಿಗಳಾಗಿ ಉತ್ತಮ ಭಾರತಭಕ್ತರಾಗಿದ್ದ ಸರ್ ಆಶುತೋಷ ಮುಖರ್ಜಿಯವರು

ಆಡಿದ ಮಾತೊಂದನ್ನು ಎತ್ತಿ ಹೇಳಿದರು. ರಾಜಕೀಯ ರಂಗಕ್ಕೆ ವಿಶ್ವವಿದ್ಯಾನಿಲಯಗಳಲ್ಲಿ ರೂಪುಗೊಳ್ಳುವ ದೃಷ್ಟಿಸಾಕಲ್ಯವೂ, ಮನಸ್ಸಿನ ವಿಶಾಲತೆಯೂ, ಪರಾಭಿಪ್ರಾಯ ಸಹನೆಯೂ, ದೃಢಶೀಲತೆಯೂ ಅಗತ್ಯ. ಹಾಗೆಯೇ ಇಲ್ಲಿನವರು ಮಾನವ ವರ್ಗದ ಮತ್ತು ಬುದ್ಧಿಜೀವನದ ನಾಯಕರಾಗಲು ಬಯಸುವಂತೆಯೂ ರಾಜಕಾರ್ಯಮಹಾಮಂಡಲಿಗಳಲ್ಲಿ ಗೌರವಸ್ಥಾನ ಪಡೆಯುವಂತೆಯೂ ಆಗಬೇಕು — ಎಂಬುದು ಅವರ ಉಕ್ತಿ. ರಾಜಕೀಯದ ನಾಯಕರನ್ನು ತಯಾರಿಸುವುದು ಒಂದು ಪಟ್ಟಾದರೆ, ಜ್ಞಾನಪ್ರಪಂಚದಲ್ಲಿ ನಾಯಕತ್ವ ವಹಿಸುವುದು ಇನ್ನೊಂದು ಪಟ್ಟು ಕೂಡಿ ವಿಶ್ವವಿದ್ಯಾನಿಲಯದ ಬದುಕು ಆಗ ಸಾರ್ಥಕವಾಗುತ್ತದೆ.

ನಮ್ಮ ಜನ ಎಲ್ಲಕ್ಕೂ ಹೆರವರ ಕೈಕಾಯದಂತೆ ನಮ್ಮ ಬಾಳನ್ನು ನಾವು ಉತ್ತಮಪಡಿಸಿಕೊಳ್ಳಲು ಯಾರು ಮುಂದೆ ಬಂದು ನೆರವು ಕೊಡುತ್ತಾರೆಯೊ ಅವರಿಗೆ ನಾಡಿನ ಹರಕೆಯಿದೆ.

***

ಕನ್ನಡನಾಡು ಒಂದು: ಇವೊತ್ತಿನ ದಿನ ಹಲವು ಪ್ರಾಂತಗಳ ಮತ್ತು ಹಲವು ದೇಶೀಯ ಆಡಳಿತಗಳ ಮರೆಯಲ್ಲಿ ಸೊರಗಿ ಬಿದ್ದಿದ್ದರೂ ಅದು ಒಂದು. ನಾಳೆಗೆ ಭಾಷಾಪ್ರಾಂತಗಳು ನಿರ್ಮಾಣವಾಗುತ್ತವೆ. ಆಗ್ಗೆ ಗಡಿಸೀಮೆಗಳಲ್ಲಿರುವ ಕನ್ನಡಿಗರು ತಮ್ಮದಾದುದನ್ನು ಕನ್ನಡಕ್ಕೆ ಉಳಿಸಿಕೊಳ್ಳಬೇಕಾಗುತ್ತದೆ. ಇನ್ನೊಬ್ಬರ ನೆಲವೂ ಸಂಪತ್ತೂ ನಮಗೆ ಬೇಡ. ಹಾಗೆಯೇ ನಮ್ಮದನ್ನು ನಮ್ಮದಾಗಿಟ್ಟುಕೊಳ್ಳುವುದರಲ್ಲಿ ಉದಾಸೀನತೆ ಕೂಡದು. ಈ ವ್ಯವಹಾರದಲ್ಲಿ ನೆರೆಯ ನುಡಿಗಳವರೊಡನೆ ಸ್ನೇಹದ ಹುರುಡುಮಾಡಿ ನಮ್ಮದನ್ನು ನಾವು ಉಳಿಸಿಕೊಂಡು ಹಸಮಾಡಿಕೊಳ್ಳೋಣ. ಅವರು ನಮ್ಮಲ್ಲಿ ಬಂದು ಆಕ್ರೋಶಗಳನ್ನು ಬಿತ್ತುವುದು, ನಾವು ಅವರಲ್ಲಿಗೆ ನುಗ್ಗಿ ಉದ್ವೇಗವನ್ನು ಹುಟ್ಟಿಸುವುದು ಎರಡೂ ಸರಿಯಲ್ಲ. ಹೊಸ ಪ್ರಾಂತಗಳು ನಿರ್ಮಾಣವಾಗುವಾಗ್ಗೆ ಗಡಿಯ ವಿಭಾಗ ಅಥವಾ ವಿಧಾಯಕ ಮಂಡಲಿಗಳು ಏರ್ಪಡುತ್ತವೆ. ಆ ಹೊತ್ತಿಗೆ ಬಳ್ಳಾರಿ, ನೀಲಗಿರಿ, ಬೆಳಗಾವಿ ಮುಂತಾದ ಗಡಿ ಭಾಗಗಳಿಗೆ ಸಂಬಂಧಪಟ್ಟ ಎಲ್ಲ ವಾಗ್ವಾದಗಳೂ ಶಾಂತವಾಗುವುವು. ಆ ವರೆಗೂ ನಮ್ಮವರು ಅಭಿಮಾನದಿಂದ, ಎಚ್ಚರಿಕೆಯಿಂದ, ತಮ್ಮ ನಿಟ್ಟನ್ನು ತಾವು ಕಾಪಾಡಿಕೊಳ್ಳಬೇಕು. ಹೀಗೆಂದ ಮಾತ್ರಕ್ಕೇ ವೈರಗಳನ್ನು ಕಟ್ಟಿಕೊಂಡು ನೆರೆಯವರಿಗೆ ಅಸಹನೆ ತೋರಿಸಹೋಗಬಾರದು. ಎಲ್ಲ ಪ್ರಾಂತಗಳೂ ಭರತಖಂಡದ ಭಾಗಗಳು; ಎಲ್ಲ ಅಂಗಗಳ ಪುಷ್ಟಿಯೂ ಶಕ್ತಿಯೂ ಒಟ್ಟು ನಾಡಿನ ಪುಷ್ಟಿಶಕ್ತಿಗಳಿಗೆ ಆಧಾರ. ಪ್ರತಿಭಾಗಕ್ಕೂ ಅಲ್ಲಿನವರ ದುಡಿತ, ಭಕ್ತಿ ಬೇಕು. ಪ್ರತಿಭಾಗಕ್ಕೂ ಒಂದು ಚರಿತ್ರೆ, ಶೀಲ, ವಿಶೇಷಲಕ್ಷಣ ಇವೆ.

ಆ ವಿಶೇಷ ಲಕ್ಷಣವನ್ನು ಬೆಳಸಿ ಆದರದೇ ಆದ ಕಾಣಿಕೆಯನ್ನು ಅದು ಭರತಖಂಡದ ಜೀವನಕ್ಕೂ ಸಂಪತ್ತಿಗೂ ಸೇರಿಸಬೇಕಾಗಿದೆ. ಆದ್ದರಿಂದ ಕ್ಷೇತ್ರವ್ಯವಸ್ಥೆ ಮತ್ತು ಕೆಲಸಗಾರರ ನಿಷ್ಕರ್ಷೆ ಖಚಿತವಾಗಿ ಮಾಡಿಕೊಳ್ಳಬೇಕು. ಅರೆಭಕ್ತಿಗಳಿಂದ ಎಂದೂ, ಎಲ್ಲೂ, ಯಾವ ಪ್ರಯೋಜನವೂ ಇಲ್ಲ. ಒಂದು ಉದಾರಾರ್ಥದಲ್ಲಿ, ಎಲ್ಲಕ್ಕೂ ಸಂಬಂಧಪಟ್ಟ ವಿಶ್ವಾಸ ಅತ್ಯುತ್ತಮವಾದ್ದಾದರೂ, ವ್ಯವಹಾರ ಜೀವನದಲ್ಲಿ ಎಲ್ಲಕ್ಕೂ ಸೇರಿರುವುದು ಯಾವುದಕ್ಕೂ ನಿಷ್ಕರ್ಷೆಯಾಗಿ ಸೇರದಂತಾಗುತ್ತದೆ. ಕೆಲಸ ಜಾಳು ಬೀಳುತ್ತದೆ. ಆದುದರಿಂದಲೇ ಬಳ್ಳಾರಿಯವರ ಆಸೆ ಆಕಾಂಕ್ಷೆಗಳು ಕನ್ನಡನಾಡಿನ ವರವು. ಅಲ್ಲಿ ನಡೆದ ಆಂಧ್ರ ಸಮ್ಮೇಳನವು ಕನ್ನಡಿಗರಿಗೆ ಆಶ್ವಾಸನ ಕೊಟ್ಟುದಕ್ಕಾಗಿ ಆಂಧ್ರ ಸೋದರರಿಗೆ ನಾವು ಋಣಿಗಳಾಗಿದ್ದೇವೆ.

***

ಯುದ್ಧಾನಂತರ ಜಗತ್ತಿನ ಜೀವನದ ಪುನರ್ರಚನೆಯಾಗಬೇಕಾಗುತ್ತದೆ ; ಯಾವ ಮಂತ್ರ ತಂತ್ರಗಳಿಗೆ ಒಳಪಟ್ಟಾಗುತ್ತದೆಯೊ ನೋಡಬೇಕು. ದುರ್ಬಲರಾದ, ಶಕ್ತಿ ವ್ಯವಸ್ಥೆಗಳಿಲ್ಲದ, ಶಕ್ತವಾಗಿ ಕಾರ್ಯಕಾರಿಯಾಗಿ ಮಾತನಾಡಲಾರದ ನಮ್ಮಂಥ ದೇಶಗಳವರ ಧ್ವನಿ ಲೋಕದ ಸಭೆಗಳಲ್ಲಿ ಕೇಳಿಸಲಾರದು. 'ನಾಯಂ ಆತ್ಮಾ ಬಲ ಹೀನೇನ ಲಭ್ಯಃ' ಎಂಬ ಉಕ್ತಿ ಆತ್ಮವೊಂದಕ್ಕೇ ಅಲ್ಲದೆ ಎಲ್ಲ ಬಗೆಯ ವೀರಜೀವ ನಕ್ಕೂ ಸಂಬಂಧಿಸುವುದು. ಯಾರಿಗೆ ದೇಹದ, ಬುದ್ಧಿಯ, ಆತ್ಮದ, ಬಲವಿಲ್ಲವೊ ಸುವ್ಯವಸ್ಥ ಸಂಘಟಿತ ಕಾರ್ಯಶಕ್ತಿಯಿಲ್ಲವೊ ಅಂಥವರಿಗೆ ಇಹವೂ ಇಲ್ಲ ಪರವೂ ಇಲ್ಲ. ಅಶಕ್ತರಾದವರ ಮಾತನ್ನು ಕೇಳುವವರು ಯಾರು? ಸಿರಿವಂತರಲ್ಲದವರು ಇನ್ನೊಬ್ಬರಿಗೆ ಯಾವ ಸಿರಿಯನ್ನು ಕೊಟ್ಟಾರು? ಸ್ವಯಂದಕ್ಷರಾಗಿಲ್ಲದವರು ಯಾರ ಮನ್ನಣೆಯನ್ನು ಗಳಿಸಿಯಾರು? ಆದುದರಿಂದಲೇ ಈ ನಾಡಿನ ಜೀವನದ ತಿರುಳು ಪುಷ್ಟಿಗೊಳ್ಳಬೇಕೆಂದು ನಾಡಿನ ಹಿರಿಯರೆಲ್ಲ ಹೇಳುತ್ತಿರುವುದು.

ಇದಕ್ಕೆ ಪರಿಸ್ಥಿತಿಯ ಅರಿವಾಗಬೇಕು. ನಮ್ಮ ಸುತ್ತಮುತ್ತ ಯಾವ ಬಗೆಯ ಪ್ರಭಾವ ಮಂಡಲಗಳು ಹುಟ್ಟಿಕೊಳ್ಳುತ್ತಿವೆ? ಅವಕ್ಕೆ ನಮ್ಮ ಮೇಲೆ ಯಾವ ಅಧಿಕಾರ ಉಂಟಾಗುತ್ತದೆ ಎಂಬುವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಇದು ಹೊರಗಿನ ಪ್ರಭಾವಗಳನ್ನು ಕುರಿತ ಮಾತಾದರೆ, ಒಳಗೆ ನಾವು ನಮ್ಮ ಬದುಕನ್ನು ಹೇಗೆ ತಿದ್ದಿಕೊಳ್ಳುತ್ತೇವೆ? ಯಾವ ಭಾಗಗಳನ್ನು ಹೇಗೆ ಬಲಪಡಿಸಿಕೊಳ್ಳುತ್ತೇವೆ? ಎಂಬುದು ಇದೇ ಕೆಲಸದ ಇನ್ನೊಂದು ಮುಖವಾಗುತ್ತದೆ. ಒಳಗೆ ಜೀವನೋತ್ಸಾಹವೂ, ಅದಕ್ಕೆ ಸಹಾಯಕವಾದ ಆರ್ಥಿಕಸಂಪುಷ್ಟಿಯು ತಿಳಿವಳಿಕೆಯೂ ಬೆಳೆಯುವಾದರೆ ಇಲ್ಲಿನ ಬದುಕು ಜಡವಾಗುತ್ತದೆ; ಅದನ್ನು ಉಳಿಸಿಕೊಳ್ಳುವುದು ಕಷ್ಟವಾಗುತ್ತದೆ.

***

ನಮ್ಮ ನಾಡು ಹಳ್ಳಿಗಳ ನಾಡು. ಕನ್ನಡನಾಡಿನ ಸುಮಾರು ೨೮,೦೦೦ ಹಳ್ಳಿಗಳು ಜೇನುಗೂಡುಗಳಂತೆ ಬಾಳು ಬಾಳಿದ ಹೊರತು ಈ ಕೆಲಸ ಆಗದು. ಪ್ರತಿ ಹಳ್ಳಿಯಲ್ಲಿಯೂ ಸಂಪತ್ತು, ಶುಚಿ, ವಿದ್ಯಾಶಿಕ್ಷಣ, ಸಮಾಜ ಮತ್ತು ಧಾರ್ಮಿಕ ಜೀವನ, ರಾಜಕೀಯ ಕಟ್ಟು, ಲೋಕಸಂಪರ್ಕ, ಸಮರಸ ಜೀವನ ಇವು ರೂಡಿಸ ಬೇಕಾದಲ್ಲಿ ಅಲ್ಲಿನ ಜನ ತಾವು ಒಂದೊಂದು ಸ್ವಸಂಪೂರ್ಣವಾದ ಮಂಡಲಿ, ಒಂದು ಸಮಗ್ರ, ಜೀವಂತ ಅವಯವಿ ಎಂಬುದನ್ನು ಮರೆಯಬಾರದು. ಅಲ್ಲಿನ ಬಡತನ, ಅಜ್ಞಾನ, ಕೊಳೆ, ಜಡತೆ, ಸಾಲಗಾರಿಕೆ, ವೈಮನಸ್ಯ ಇವುಗಳನ್ನು ನಿವಾರಿಸಲು ಹೊರಗಿನವರ ಸಹಾಯಕ್ಕೆ ಏಕೆ ಕಾಯಬೇಕು? ಸರಕಾರಕ್ಕಾದರೂ ಏಕೆ ಕಾಯ ಬೇಕು? ಯಾವ ಸರ್ಕಾರವಾಗಲಿ ಹೊರಗಿಂದ ಎಷ್ಟು ಮಾಡಬಲ್ಲದು? ಸ್ವಸತ್ವ-ನಿಷ್ಠವಾದ ಪ್ರಗತಿಚೈತನ್ಯ ಪ್ರತಿ ಹಳ್ಳಿಯಲ್ಲಿಯೂ ಹುಟ್ಟಿ ಕಾರ್ಯಮಾಡಿದಲ್ಲದೆ ನಾಡಿನ ಮಂಗಳ ಸಾಧಿತವಾಗದು. ಆಯಾ ಹಳ್ಳಿಯವರು, ತಮ್ಮ ಕೆರೆ ಕಾಲುವೆ ಗಳನ್ನು ತಾವು ಚೊಕ್ಕಮಾಡಿಕೊಳ್ಳಬಾರದೆ? ತಮ್ಮ ಊರಿಗೆ ಕುಡಿಯುವ ನೀರನ್ನು ಒದಗಿಸಲು ನಾಲ್ಕು ಬಾವಿಗಳನ್ನು ತೋಡಿಕೊಳ್ಳಲಾರರೆ? ಒಂದು ಚಾವಡಿ, ಸೊಸೈಟಿ, ಒಂದು ಪಾಠಶಾಲೆ, ಒಂದು ದೇವಸ್ಥಾನ, ಆಸ್ಪತ್ರೆ ಕಟ್ಟಿಕೊಳ್ಳಲಾರರೆ? ತಮ್ಮ ಒಳಜಗಳಗಳನ್ನು ಕಾಲಕಾಲಕ್ಕೆ ತಾವಾರಿಸುವ ಮುಖಂಡರ ಮೂಲಕ ತೀರಿಸಿ ಕೊಳ್ಳಲಾಗದೆ? ತಮ್ಮ ಬೀದಿಗಳನ್ನೂ ಹಿತ್ತಿಲನ್ನೂ ಶುಚಿಗೊಳಿಸಿಕೊಂಡು, ರಸ್ತೆ, ದೀಪ, ಬೆಳಗಿಸಿಕೊಳ್ಳಲಾರರೆ? ಊರಿನವರು ಒಂದು ಕಾರ್ಯಯೋಜನೆಯನ್ನು ಮಾಡಿಕೊಂಡು ಪ್ರತಿಯೊಬ್ಬರೂ ಇನ್ನೊಬ್ಬರಿಗೆ ಭದ್ರವಾದ ಸುಂದರವಾದ ಮನೆಗಳನ್ನು ಕಟ್ಟಿಕೊಡುವುದರಲ್ಲಿ ನೆರವಾಗುವುದು ಕಷ್ಟವೆ? ಎಲ್ಲರ ಮಕ್ಕಳೂ ಊರಿನ ಮಕ್ಕಳೆಂದು ಎಣಿಸಿ ಅವರಿಗೆ ಓದುಬರಹ ಲೆಕ್ಕಾಚಾರದ ತಿಳಿವಳಿಕೆ ಕೊಡುವಂತೆ ಏರ್ಪಡಿಸಿಕೊಳ್ಳುವುದು ಅಶಕ್ಯವೆ? ಊರಲ್ಲಿ ೫೦ ಹಸು, ಎಮ್ಮೆ ಕಟ್ಟಿಕೊಂಡು ಮಕ್ಕಳೆಲ್ಲರಿಗೂ ದಿನಾ ಒಂದೊಂದು ಬಟ್ಟಲು ಹಾಲುಕೊಡು ವುದು, ಊರಸುತ್ತ ಆಯಾ ಪ್ರದೇಶದಲ್ಲಿ ಬೆಳೆವ ಬಾಳೆ, ಸೀಬೆ, ಕಿತ್ತಿಳೆ, ಟೊಮಾಟೊ, ಸೇಬು, ದ್ರಾಕ್ಷಿ, ಅಂಜೂರ, ಮಾವು ಮುಂತಾದ ಹಣ್ಣುಗಳನ್ನು ಆಯಾಕಾಲದಲ್ಲಿ ಒದಗಿಸಿ ನಾಳಿಗೆ ಬೆಳೆಯಬೇಕಾಗಿರುವ ಪೌರರನ್ನು ಪುಷ್ಟರಾಗಿ ಬೆಳಸುವುದು ಅಸಾಧ್ಯವೆ? ಶಾಲೆಗೆ ಹೋಗುವ ಎಳೆಯ ಮಕ್ಕಳಿಗೆಲ್ಲ ಬೆಳಗ್ಗೆ ಸ್ನಾನ ಮಾಡಿಸಿ, ಒಂದು ಸ್ವಲ್ಪ ಆಹಾರಕೊಟ್ಟು ದಿನಕ್ಕೆ ಹತ್ತು ನಿಮಿಷ ಅಂಗಸಾಧನೆ ಮಾಡಿಸಿ, ದಿನಕ್ಕೊಂದೊಂದು ಒಗೆಯ ಪ್ರಾರ್ಥನೆ ಹೇಳಿಕೊಟ್ಟು ಆಡಿಸುತ್ತ ನಲಿ ಸುತ್ತ ಹರ್ಷಗೊಳಿಸುತ್ತ ಶಿಕ್ಷಣ ಕೊಡಲಾಗದೆ? ಊರಿನವರು ತಮ್ಮಲ್ಲಿನವರ

ಸಾಲಗಾರಿಕೆ ಹರಿಯುವಂತೆ ಒಟ್ಟಿಗೆ ಸಹಕರಿಸಿ ಪರಿಹಾರೋಪಾಯಗಳನ್ನು ಕಲ್ಪಿಸಿ ಕೊಂಡರೆ — ಹೆಚ್ಚು ಕೆಲಸಗಳಿಗೆ ಹೊರಗಿನ ಪ್ರಪಂಚದಿಂದಲೂ ಸರ್ಕಾರದಿಂದಲೂ ನೆರವು ದೊರೆಯದೆ ಹೋದೀತೆ? ನಾಡಿಗೆ ಬೇಕಾದ್ದು ಕೇವಲ ಹಣವಲ್ಲ. ಜನದ ಕಾರ್ಯಶಕ್ತಿ, ಬುದ್ಧಿಶಕ್ತಿ; ಇವಿದ್ದರೆ ಹಣ ಮಾಡುವ ಕೆಲಸವನ್ನೆಲ್ಲ ಬೇರೆ ರೀತಿ ಯಲ್ಲಿ ಮಾಡಿಕೊಳ್ಳಬಹುದು. ಈ ಬಗ್ಗೆ ಕಾರ್ಯವ್ಯವಸ್ಥೆ ಮಾಡಬೇಕೆಂದು ದೇಶದಲ್ಲಿ ಆರಂಭವಾಗಿರುವ ಗ್ರಾಮಪುನರುಜ್ಜೀವನದ ಯೋಜನೆ ಶ್ಲಾಘ್ಯವಾದ್ದು.

***

ಸಿನೆಮಾಗಳು ಬೇರೆ ಬೇರೆ ದೇಶಗಳಲ್ಲಿ 'ಡಾಕ್ಯುಮೆಂಟರೀಸ್' ಎಂಬ ಬಗೆಯ ಚಿತ್ರಗಳನ್ನು ತಯಾರುಮಾಡಿ ತಿಳಿವಳಿಕೆ ಕೊಡುತ್ತಿವೆ. ಆಕಾಶವಾಣಿ, ಸಿನೆಮಾ ಎರಡೂ ಕೂಡಿದರೆ ಇಂತಹ ನೆರವು ಬಹು ಕಾರ್ಯಕಾರಿಯಾದೀತು.

ಪಾಲ್ ರೋಥಾ ಎಂಬವರು ಈ ಬಗೆಯ ಚಿತ್ರನಿರ್ಮಾಣದಲ್ಲಿ ಹೆಸರಾದ ಮಾನ್ಯರು. 'ಹೊಸತಾಗಿ "World of Plenty" ಎಂಬ ಸುಮಾರು ಒಂದು ಗಂಟೆ ಕಾಲ ನಡೆಯುವ ಚಿತ್ರವೊಂದನ್ನು ತಯಾರುಮಾಡಿದ್ದಾರಂತೆ. ಅದನ್ನು ಹಾಟ್ ಸ್ಪ್ರಿಂಗ್ಸ್ ಎಂಬ ಕಡೆ ಸೇರಿದ್ದ 'ಪ್ರಪಂಚದ ಆಹಾರ ಸಮ್ಮೇಳನ'ದ ೨೦೦ ಪ್ರತಿ ನಿಧಿಗಳಿಗೆ ತೋರಿಸಿದರಂತೆ. ಅಲ್ಲಿದ್ದ ಅಮೇರಿಕ, ಚೀನಾ, ಈಜಿಪ್ಟ್, ಇಂಡಿಯಾ ಪ್ರತಿನಿಧಿಗಳು ಎಲ್ಲರೂ ತಮ್ಮ ತಮ್ಮ ದೇಶದಲ್ಲಿ ಅದನ್ನು ತೋರಿಸುವ ಅವಕಾಶ ಕಲ್ಪಿಸಿಕೊಡಬೇಕೆಂದು ಬೇಡಿದರಂತೆ. ರಾಜಕೀಯ ಜೀವನದಲ್ಲಿಯೇ ಇದೊಂದು ಉತ್ತಮ ಘಟನೆ ಎಂದು ಅದನ್ನು ನೋಡಿದ 'ಕಿಂಗ್ಸ್‌ಲಿ ಮಾರ್ಟಿನ್' ಎಂಬ ಪ್ರಸಿದ್ಧ ಪತ್ರಿಕಾ ಸಂಪಾದಕರು ಬರೆದಿದ್ದಾರೆ. ಅದರ ಸಂದೇಶ ಇಷ್ಟೇ: ಸಮ್ಮೇಳನದ ಮುಖ್ಯ ತೀರ್ಮಾನಗಳನ್ನು ಸಂಗ್ರಹಿಸಿ ಆ ಚಿತ್ರ ಕಣ್ಣಿಗೆ ಕಟ್ಟಿದಂತೆ ತೋರಿಸುವುದು. ಯಾರ ಬುದ್ಧಿ ಅತಿ ಸಂಕುಚಿತವಾದ ವ್ಯಕ್ತಿ ಅಥವಾ ಪಕ್ಷಪ್ರಯೋಜನದ ಕಡೆಗೆ ಮಾತ್ರ ಒಲಿಯದೆ ಸಾರ್ವಜನಿಕ ಮಂಗಳದ ಕಡೆಗೆ ಒಲಿಯುತ್ತದೆಯೊ ಅಂಥ ಎಲ್ಲರಿಗೂ ಇದು ರುಚಿಸುವುದು ಎಂದಿದ್ದಾರೆ. ಯುದ್ಧಮುಗಿದ ಮೇಲೆ ಪ್ರಪಂಚದ ಎಲ್ಲರಿಗೂ ಆಹಾರ ನಿರ್ಮಾಣಕಾರ್ಯ ವಿಸ್ತಾರಗೊಳ್ಳಬೇಕಾಗುವುದು. ಅದರ ಉತ್ಪತ್ತಿಗಾಗಿ ಇಂದಿನ ವಿಜ್ಞಾನ ಒದಗಿಸಬಲ್ಲ ಎಲ್ಲಬಗೆಯ ಯಂತ್ರ, ಶಾಸ್ತ್ರತಂತ್ರಗಳನ್ನೂ ಹೂಡ ಬೇಕಾಗುತ್ತದೆ. ಲಾಭಕ್ಕೋಸ್ಕರವಾಗಿ ಉತ್ಪತ್ತಿಯನ್ನು ಮಿತಮಾಡುವ ನಾಶಕರ ಪ್ರವೃತ್ತಿಗಳ ಪಾಲನೆಗೂ ಹುಚ್ಚುತನಕ್ಕೂ ಹಿಂತಿರುಗುವ ಅವಿವೇಕಕ್ಕೆ ಮನಸ್ಸು ಒಳಗಾಗದಾದರೆ; ಯಾವ ರೈತನಾಗಲಿ, ಮೂಲಸಾಮಗ್ರಿಗಳ ಉತ್ಪತ್ತಿಕಾರನಾಗಲಿ, ಅತ್ಯುತ್ಪತ್ತಿ ಮಾಡುತ್ತಿರುವೆನೆಂಬ ಭ್ರಾಂತಿಗೆ ಒಳಗಾಗಲಾರ ಎಂಬುದು ಒಂದು

ತೀರ್ಮಾನ. ಎರಡನೆಯದಾಗಿ — ಪ್ರಪಂಚದಲ್ಲಿ ಹಸಿದ ಜನರ ಹಸಿವನ್ನು ಹೋಗಲಾಡಿಸುವ ಅಗತ್ಯ ತುರುತಿನದು; ಬರಿಯ ತತ್ವದ್ದಲ್ಲ ಎಂಬ ಸಂಗತಿಯೂ ಮನವರಿಕೆಯಾಗಬೇಕು ಎಂಬುದು. ಯುದ್ಧದಿಂದ ಪಾಳಾದ ಯೂರೋಪಿನಲ್ಲಿಯೇ ಅಲ್ಲ—ಅರ್ಧಪುಷ್ಟಿ ಇರುವ ಅಥವಾ ಪೋಷಣೆಯೇ ಇಲ್ಲದ ಬಾಲ್ಕನ್ ಚೀಣಾ ಇಂಡಿಯಾ ದೇಶಗಳಿಗೆ ಉತ್ತಮ ಆಹಾರಪದಾರ್ಥಗಳ ಸಕ್ಷೆ ಭೂಪಟಗಳು ಅಣಕಿಸುವಂತೆ ಕಂಡಾವು. ಆದರೂ ಇಂತಹ ಸಮ್ಮೇಳನಗಳ ಕಾರ್ಯ ಸಫಲವಾದ ದಿನ ಜಗತ್ತಿಗೆ ಒಂದು ಹೊಸ ಸಂತೋಷ ಬಂದ ಹಾಗಾಗುತ್ತದೆ ಎನ್ನುತ್ತಾರೆ.

ಒಂದೆರುಡು ವಿವರಾಂಶಗಳನ್ನು ಹೇಳಿದರೆ ಇಂಥ ಚಿತ್ರ ಮಾಡಲಾಗದುದೇನು ಎಂಬುದು ಯಾರಿಗೇ ಆಗಲಿ ಸ್ಪಷ್ಟವಾದೀತು. ಇದನ್ನೂ ೧೨-೬-೧೯೪೩ ರ 'ಸ್ಟ್ಯೂಟ್ಸ್‌ಮನ್' ಪತ್ರಿಕೆಯಿಂದಲೇ ತೆಗೆದಿದೆ.

— ಚಿತ್ರಪಟದ ವಿಷಯ: ಆಹಾರ, ಅದರ ಉತ್ಪತ್ತಿ, ಶಾಂತಿಕಾಲದಲ್ಲಿ ಅದರ ಹಂಚಿಕೆ ಅಸಮವಾಗುತ್ತಿರುವ, ಪೋಲಾಗುತ್ತಿರುವ ರೀತಿ, ಯುದ್ಧಕಾರಣದಿಂದ ಅದನ್ನು ಒಂದು ಸ್ಥಿತಿಗೆ ತರಲು ಒದಗಿರುವ ಅಗತ್ಯ, ಯುದ್ಧಾನಂತರ ಪ್ರಪಂಚಕ್ಕೆಲ್ಲ ಹೊಂದುವ ವಿಸ್ತಾರವಾದ ಒಂದು ಕಾರ್ಯಯೋಜನೆಯ ಆವಶ್ಯಕತೆ— ಇವು. ಇವನ್ನು ಹೇಗೆ ಮಾಡಬಹುದು? ಈ ಕಡೆ ಜನದ ಆಸಕ್ತಿಯನ್ನು ಹೇಗೆ ಸೆರೆಹಿಡಿದಿಡಬಹುದು ಎಂದೀರಿ. ಪಾಲ್ ರೋಥಾ ಮತ್ತು ಎರಿಕ್ ನೈಟ್ ಇಬ್ಬರೂ ಸೇರಿ ಅದನ್ನು ಸಾಧಿಸಿದ್ದಾರೆ. ಸ್ವಲ್ಪ ಕಡಮೆ ಒಂದು ಗಂಟೆಯ ಕಾಲ ಈ ಚಿತ್ರ ನಡೆಯುವುದು. 'ಮಾರ್ಚ್ ಆಫ್ ಟೈಮ್' ಎಂಬ ಅಭಿಧಾನದಲ್ಲಿ ಕಾಣಿಸುವ ವಿಚಿತ್ರಗಳ ವೇಗವೂ ಮೋಹಕತೆಯೂ ಅದರಲ್ಲಿವೆ. ಇಂಥ ವಿಷಯಗಳಲ್ಲಿ ಜನಕ್ಕೆ ತಿಳಿವಳಿಕೆ ಸ್ಫೂರ್ತಿಕೊಡಬೇಕೆಂದು ಬರೆವ ಯಾವ ಲೇಖಕನಿಗೂ ಧೈರ್ಯವಿಲ್ಲದ ರೀತಿ ಆ ಉದ್ದೇಶವನ್ನು ಅದು ಸಾಧಿಸುತ್ತದೆ. ಇಲ್ಲಿ ಬರಿಯ ನೊರೆಯಿಲ್ಲ. ಮಾತಿನ ಧೋರಣೆ, ಆಡಂಬರ ಇಲ್ಲ. ಅಂಕಿ, ಅಂಶ, ವಿಷಯ ಕಣ್ಣಿಗೆ ಎದ್ದು ಕಾಣುತ್ತವೆ. ಅವುಗಳಲ್ಲಿ ರೂಢವಾಗಿದೆ ತತ್ವ, ಸತ್ಯ, ಸಿದ್ಧಾಂತ, ಪ್ರಚಾರಗಳು; ಕಣ್ಣು, ಮನಸ್ಸು, ಕಿವಿ, ಹೃದಯ ಒಂದೇ ಸಮಯದಲ್ಲಿ ಸೆಳೆದು ತೃಪ್ತಿಪಡುತ್ತವೆ:— ಸರ್ ಜ್ಞಾನ್ ಆರ್ ಅವರು ಸಂಗತಿಗಳನ್ನು ವಿವರಿಸುತ್ತ ಪ್ರಪಂಚವಿಸ್ತಾರವಾದ ಯೋಜನೆಯನ್ನೂ ಹೊಲಗದ್ದೆಗಳ ನೋಟವನ್ನೂ ಕಾಣಿಸುತ್ತಿರುವಾಗ. ಗಿರಣಿಗಳಲ್ಲಿನ ರೇವು ಬಂದರುಗಳಲ್ಲಿನ ಕಾರ್ಯ ವೈಭವವನ್ನು ತೋರಿಸುತ್ತ ವ್ಯಾಖ್ಯಾನ ಮಾಡುತ್ತಿರುವಾಗ.— ಒಣ ವಾದವಲ್ಲ, ಬದುಕಿಗೂ ಜನಕ್ಕೂ ನೇರವಾಗಿ ಸಂಬಂಧಿಸಿದುದು ಎಂದು ಹೇಳುತ್ತಿರುವಾಗ. ಗಮನವನ್ನು ಸಂತತವಾಗಿ ಸೆಳೆದಿಡಲು ರೋಥಾ ಅವರು ಒಂದು ತಂತ್ರವನ್ನು

ಪ್ರಯೋಗಿಸಿದ್ದಾರೆ: ಸರ್ ಜ್ಯಾನ್ ಆರ್, ಲಾರ್ಡ್ ವುಲ್ಟನ್, ಲಾರ್ಡ್ ಹೊರ್ಡರ್, ಈಸ್ಟರ್ ಬ್ರುಕ್ ಮುಂತಾದ ಅಲ್ಲಿನ ತಜ್ಞರನ್ನು ಸಂದರ್ಶನಮಾಡಿ ಅವರಿಂದ ಮಾತಾಡಿಸುತ್ತಾರೆ ಮಾತ್ರವಲ್ಲದೆ ಪೇಟೆಯ ವ್ಯಾಪಾರಕ್ಕೆ ಹೋಗುತ್ತಿರುವ ಲಂಡನ್ ಪಟ್ಟಣಿಗನೊಬ್ಬನನ್ನು ನಿಲ್ಲಿಸಿ ಮಾತಾಡಿಸುತ್ತಾರೆ; ಮಧ್ಯಪಶ್ಚಿಮದ (Middle West) ರೈತನೊಬ್ಬನನ್ನು ಪ್ರಶ್ನಿಸುತ್ತಾರೆ; ಕೆಲಸದಲ್ಲಿ ನಿರತನಾಗಿರುವ ಪೊಲೀಸಿ ನವನೊಡನೆ ಸಂಭಾಷಣೆ ನಡಸುತ್ತಾರೆ. ಕ್ಯಾಮೆರ ಅವರನ್ನು ಹಿಡಿದು ಕಣ್ಣೆದುರಿಗೆ ನಿಲ್ಲಿಸುತ್ತದೆ. ಅವರು ಚಿತ್ರದಿಂದೆದ್ದು ನಮ್ಮ ಪ್ರಯೋಜನಕ್ಕಾಗಿ ಮಾತನಾಡುತ್ತಾರೆ. ಇಂಗ್ಲಂಡ್, ಅಮೇರಿಕಾ ದೇಶದ ವಿಷಯ ನಿರೂಪಕರು ಸಂಗತಿಗಳನ್ನು ಈ ದೇಶದಿಂದ ಅದಕ್ಕೆ ಅದರಿಂದ ಮತ್ತೊಂದಕ್ಕೆ ಅನ್ವಯಿಸಿ ಪ್ರಯಾಣ ಮಾಡಿಸಿ ತೋರಿಸುತ್ತಾರೆ; ಪ್ರಶ್ನೆ ಕೇಳುತ್ತಾರೆ, ಉತ್ತರವೊದಗಿಸುತ್ತಾರೆ. ಕೆಲವು ವೇಳೆ ಮುಖ್ಯವಾದ ಯಾವುದೋ ಒಂದು ಸಂಗತಿಯೋ, ಅಂಶಪರಂಪರೆಗಳೋ, ಅವುಗಳಿಂದ ಸಿದ್ಧ ವಾಗುವ ತತ್ವವೋ ಪುನರುಕ್ತವಾಗುವುವು. ಮನಸ್ಸಿಗೆ ಹಿಡಿಯುವಂತೆ ಸರಿಯಾದ ಸನ್ನಿವೇಶದಲ್ಲಿ ಉಜ್ವಲವಾದ ಪಟಗಳು, ನಕ್ಷೆಗಳು, ಅಂಕಿಗಳ ಪಟ್ಟಿಗಳು, ದರ್ಶನಗಳು ಎದುರಿಗೆ ಬಂದು ನಿಲ್ಲುವುವು. ಉದಾ: ಸಂಯುಕ್ತ ರಾಜ್ಯದಲ್ಲಿ (ಇಂಗ್ಲಂಡ್-ವೇಲ್ಸ್-ಸ್ಕಾಟ್‌ಲಂಡ್) ವರಮಾನದ ಮಟ್ಟಗಳ ಹಂಚಿಕೆ ಹೀಗಿದೆ: ವರಮಾನ ಸಂಪಾದಿಸುವ ೨೦ ಮಂದಿಯಲ್ಲಿ ೧೪ ಮಂದಿಯ ಆದಾಯ ವಾರಕ್ಕೆ £೨[1] ಅಥವಾ ಇನ್ನೂ ಕಡಮೆ; ಒಬ್ಬಾತನು ಐಶ್ವರ್ಯವಂತ — ಎಂದು ಹೊಡೆದು ತೋರಿಸುವಂತೆ ಒಂದೊಂದು ಸಂಗತಿಯನ್ನು ಕಾಣಿಸುತ್ತಾರೆ: ನೋಡುನೋಡುತ್ತ ಈ ಒಬ್ಬ ಸಿರಿವಂತನು ಒಂದು ಪಾದಪಸದ ಕಂಬದಂತೆ ಎದ್ದು ಸುತ್ತಣವರ ಮೇಲೇರಿ ಕಾಣು ತ್ತಾನೆ. ಇಂಥ ವಿಧಾನಗಳಲ್ಲಿ — ಇವುಗಳ ವಿವಿಧತೆ ಅನಂತ — ಸಾಮಾನ್ಯವಾಗಿ ಚಿತ್ರ ಗತವಾಗುವುದು ಅಶಕ್ಯ ಎಂಬಂತಹ ಅಂಶಗಳೂ ಅತಿ ಹಿಂದಿನಿಂದಲೂ ಆಡಿ ಆಡಿ ಅರ್ಥ ಕಳೆದುಕೊಂಡು ಸಪ್ಪೆಯಾಗಿರುವ ಮಾತುಗಳೂ ಸೇರಿ ಚಿತ್ರದಲ್ಲಿ ಜೀವಗೊಳ್ಳುವುವು. ಲೋಕಕ್ಕೆಲ್ಲ ಗೊತ್ತಾದಂತೆ (ಪೇಟೆ ಗಿರಾಕಿ ಸಾಲದೆಂಬ ಕಾರಣದಿಂದ) ಕಾಫೀ ಯನ್ನು ಸಮುದ್ರದಲ್ಲಿ ಸುರಿದು ಹಾಳುಮಾಡಿದ ಸಂಗತಿ ಕಣ್ಣಿಗೆ ಕಾಣುವಂತೆ ಇಲ್ಲಿ ನಡೆಯುತ್ತದೆ. ಪಾಠಶಾಲೆಗಳಲ್ಲಿಯೂ ಯುದ್ಧದ ಪಾಳೆಯಗಳಲ್ಲಿಯೂ ಉಪಾಧ್ಯಾಯರ ಮತ್ತು ಕಪ್ಪು ಹಲಗೆಗಳ ಕೆಲಸವನ್ನು ಈ ಬಗೆಯ ಚಿತ್ರಪಟಗಳು ಹೇಗೆ ಮಾಡು ತ್ತಿವೆ ಎಂಬಂಶವನ್ನು ಮುಂದಟ್ಟುಮಾಡಿಕೊಡುತ್ತದೆ. ಪ್ರತಿದಿನದ ವೃತ್ತಪತ್ರಿಕೆಗಿಂತ

[1] ವಾರಕ್ಕೆ ೨ ರೂಪಾಯಿ ಕೂಡ ಸರಾಸರಿ ಸಂಪಾದನೆ ಇಲ್ಲದ ಭರತಖಂಡದ ವರಮಾನ ಗಳೊಡನೆ ಈ ಸಂಗತಿಯನ್ನು ಹೋಲಿಸಬೇಕು.— ಸಂ.

ಜೀವನದ ಸಂಗತಿಗಳನ್ನೂ ಅಗತ್ಯವಾದ ಕಾರ್ಯ ನೀತಿರೀತಿಗಳನ್ನೂ ವಿಶದಪಡಿಸುವ ಒಂದು ಯಂತ್ರಸಾಧನೆ ಈ ಮೂಲಕ ಪ್ರಪಂಚಕ್ಕೆ ಬಂದಂತಾಗಿದೆ. ಆದುದರಿಂದ ಇದರಿಂದ ಸಂಸ್ಕೃತಿ ಜೀವನಕ್ಕೂ ರಾಜಕೀಯ ಪ್ರಪಂಚಕ್ಕೂ ಮೇಲ್ತರದ ಆಯುಧ ಸಾಮಗ್ರಿ ದೊರೆತಂತಾಯಿತು. ಅಯೋಗ್ಯರೂ ಅಶಕ್ತರೂ ಉತ್ತಮ ಕಲೆಗಾರರಲ್ಲದವರೂ ಇದನ್ನು ಇಷ್ಟು ಮೋಹಕವಾಗಿ ಉಪಯೋಗಿಸಲಾರರಾಗಿರುವುದು ನಮ್ಮ ಅದೃಷ್ಟ ವಿಶೇಷ. ಹೊಸ ಕ್ರಮ ಹೊಸ ವಿಧಾನಗಳೆಂದರೆ ಬಹು ಮಟ್ಟಿಗೆ ಹೊಸ ದೃಷ್ಟಿ ಎಂದೇ ಅರ್ಥ. ಈ "World of Plenty" ಎಂಬ ಚಿತ್ರ ಪತ್ರಿಕೆಗಳ ಮೊದಲಪುಟದ ಕಥೆಯಂತೆ ಇದೆ. ಅಥವಾ, ವೃತ್ತಪತ್ರಿಕೆಯ ಅಗ್ರ ಲೇಖನದಂತೆ ಇದೆ. ಸಿನೆಮಾ ನೋಡಲು ಹೋದವರ ಕಣ್ಣನ್ನು ಹೊಡೆದು ಬುದ್ಧಿಯನ್ನು ಎಚ್ಚರಿಸುತ್ತದೆ. ವಿನೋದವಿಲಾಸ ಮಾತ್ರ ಬೇಕೆನ್ನುವವರಿಗೆ . ಅದು ಯಾರಿಗೆ ಹೇಗೇ ಕಾಣಿಸಲಿ, ಅದರಿಂದ ಲೋಕಜೀವನಕ್ಕೆ ಸಂಬಂಧಿಸಿದಂತೆ ಒಂದು ಹೊಸ ಚಿತ್ತ ಚಿತ್ತಿದಂತೆ ಖಂಡಿತವಾಗಿ ಆಗಿದೆ.

ನಮ್ಮ ನಾಡಿನ ಜನಕ್ಕೆ ಪರ್ಯಾಲೋಚ್ಯವಾದೀತೆಂದು ನಂಬಿ ಇದನ್ನು ಸಂಗ್ರಹಿಸಿದೆ.

***

**ಈ ಸಲದ ಕನ್ನಡಸಾಹಿತ್ಯ ಪರಿಷತ್ ಸಮ್ಮೇಳನದ ಅಧ್ಯಕ್ಷರು**

ಇದೇ ಡಿಸೆಂಬರ್ ಕೊನೆಯ ವಾರದಲ್ಲಿ ಶಿವಮೊಗ್ಗೆಯಲ್ಲಿ ಕೂಡಲಿರುವ ಕನ್ನಡ ಸಾಹಿತ್ಯ ಪರಿಷತ್ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಶ್ರೀ ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಎಂ.ಎ. ಅವರು ಆಯ್ದು ಬಂದಿದ್ದಾರೆ. ಬೇಂದ್ರೆ ಹೆಸರು ಕನ್ನಡನಾಡಿನ ಮನೆಮಾತು. ಬೇಂದ್ರೆ 'ಮಾಸ್ತರ' ಪ್ರಭಾವ ಉತ್ತರ ಕರ್ನಾಟಕದಲ್ಲಿ ಹಾಗೆ. ಅವರು ಕವಿ ಗೆಳೆಯರು, ಮಾಸ್ತರು.

ತುಂಗಭದ್ರೆಯ ಉತ್ತರದವರಾದರೂ ಅವರು ಕಾವೇರಿ ಗೋದಾವರಿಗಳ ನಡುವೆ ಇರುವ ಎಲ್ಲ ಕನ್ನಡ ನಾಡಿನ ಗೆಳೆಯರು. ಗೆಳೆಯರ ಗುಂಪಿನ ನಾಯಕರಾಗಿದ್ದವರು. ಹಿರಿಯರಾದ ಶ್ರೀ ಆಲೂರರಂಥವರ ಜೊತೆಯಲ್ಲಿ ಜಯಕರ್ನಾಟಕದ ಚಾಲನೆಯಲ್ಲಿ ಸಹಕರಿಸಿದವರು. ಇಂದು ಉತ್ತರ ಕರ್ನಾಟಕದಲ್ಲಿ ತೆರೆದು ಹಾಡುವ ಅನೇಕ ಇನಿಗೊರಲುಗಳು, ಸಾಹಿತ್ಯವನ್ನು ನೋಡಿ ನಲಿಯುವ ಅನೇಕ ಹೃದಯಗಳು ಬೇಂದ್ರೆ ಮಾಸ್ತರ ಪ್ರಸಾದ. ಚಿತ್‌ಪಾವನ ಮರಾಟಿ ಬ್ರಾಹ್ಮಣವಂಶದಲ್ಲಿ ಹುಟ್ಟಿದರೂ ಕನ್ನಡಿಗರಲ್ಲಿ ಕನ್ನಡಿಗರಾದ ಅವರ ಭಕ್ತಿ, ಒಲವು ಅನನ್ಯಸಾಧಾರಣವಾದವು. ಎಲ್ಲಿ ಕನ್ನಡ ಕೆಲಸ ಆಗಬೇಕಾದರೆ ಅಲ್ಲಿ ನೆರವಿಗೆ ಸಿದ್ಧವಾಗಿ ನುಡಿದು, ಬರೆದು, ಸ್ಫೂರ್ತಿ

ಕೊಟ್ಟಿರುವ ಸತ್ವ ಅವರದು. ಪ್ರತಿಭೆ, ಹೃದಯಸ್ಪರ್ಶಿಯಾದ ಮಾತಿನ ಮೊನೆ-ಬೆಡಗು, ಒಳ್ಳೆ ಮಿಂಚಿಸಂತೆ ಬೆಳಗುವ ಚಿತ್ರಭಾವಗಳ ವೈಖರಿ, ನಾಡತಾನಗಳ ಮತ್ತು ಜನಪದ ಧಾಟಿಗಳ ಛಂದೋವಿಹಾರಗಳಲ್ಲಿ ತಾಂಡವವಾಡುವ ಅವರ ಕವಿತಾವಿಲಾಸ, ನಿಂತಕಡೆ ನುಡಿದಕಡೆ ಕಲ್ಪನೆಯ ಕೈಲಾಸವನ್ನೂ, ಅಚ್ಚ ಕವಿತೆಯ ಕೈವಲ್ಯಗಳನ್ನೂ ತೋರಿಸಬಲ್ಲ ಚಾತುರಿ ಕವಿತೆಯ ರುಚಿಯರಿತ ಸಹೃದಯರಿಗೆಲ್ಲ ಪರಿಚಿತವಾದವು.

ಗೆಳೆತನದ ಸವಿಯಿತ್ತು, ನಾಡಿನ ಒಗ್ಗಟ್ಟಿಗಾಗಿ ದುಡಿಯುತ್ತ, ಸ್ವಂತವಾಗಿ ಸರಳವಾದ ಬಾಳನ್ನು ಬದುಕುತ್ತ, ಹತ್ತುಜನ ಎಳೆಯರ, ಕಿರಿಯರ ಪ್ರೋತ್ಸಾಹಕರಾಗಿ, ಸ್ವಾರ್ಥತ್ಯಾಗದಿಂದ ನಾಡ ಕೈಂಕರ್ಯಮಾಡಿ, ಉತ್ತಮ ಕವಿಗಳಾಗಿ, ಎಲ್ಲರಿಗೂ ಪ್ರಿಯರಾಗಿ ಮಾನ್ಯರಾಗಿರುವ ಅವರ ಅಧ್ಯಕ್ಷತೆಯಲ್ಲಿ ನಡೆಯುವ ಸಮ್ಮೇಳನ ಸ್ಮರಣೀಯವಾಗಲಿ; ಅವರ ಪಟ್ಟದ ವರ್ಷದಲ್ಲಿ ಅಖಿಲಕರ್ನಾಟಕದ ಸೌಭಾಗ್ಯ ಮೇಲಾಗಿ ತೆನೆಯಿಡಲಿ.

ಭೃಂಗದ ಬೆನ್ನೇರಿ ಬಂದ ಕಲ್ಪನಾವಿಲಾಸ — ಅರ್ಥವಿಲ್ಲದ ಸ್ವಾರ್ಥವಿಲ್ಲದ ಬರಿಯ ಭಾವಗೀತವಾಗುವೆನೆಂದು ತೃಪ್ತಿಪಟ್ಟರೂ ಆ ತೃಪ್ತಿಯ ಏರಿಗೆ ಏರಬಲ್ಲ ಕಲ್ಪನಾವಿಲಾಸದಿಂದ ನಾಡ ಕಾವ್ಯಕೃತಿಗಳು ಸಿದ್ಧಿಪಡೆದು ಅಮರಸತ್ವವಾಗಲಿ.

ಶಿವಮೊಗ್ಗೆಯ ಕರ್ನಾಟಕ ಸಂಘದ ಆಶ್ರಯದಲ್ಲಿ ನಡೆಯುವ ಈ ಉತ್ಸವ ಕನ್ನಡನಾಡನ್ನು ಬೆಸೆದು, ಒಂದು ಮೊನೆಯಲ್ಲಿ ಅದನ್ನು ಮುಂದೆ ಸುಗ್ಗಿಸುವ ಚೈತನ್ಯವಾಗಲಿ.

***

ವಿನಾಯಕನ ಸಂಚಿಕೆಯಲ್ಲಿ ಕದಂಬರನ್ನು ಕುರಿತ ಒಂದು ಲೇಖನವನ್ನು ಕೊಟ್ಟಿದ್ದೆವು. ಅವರ ಕಾಲಕ್ಕೆ ಸಂಬಂಧಿಸಿದ ಶಿಲ್ಪ, ಶಿಲಾಲೇಖ ತಾಮ್ರ ಲೇಖಗಳು,

**ಚಿತ್ರಗಳ ಪರಿಚಯ**

ನಾಣ್ಯ, ಲಿಪಿಗಳನ್ನು ಅಚ್ಚುಮಾಡಿ ಅದರ ಚಿತ್ರಪರಿಚಯವನ್ನು ಮಾಡಿಕೊಡುವ ಪ್ರಯತ್ನ ಈ ಸಲ ನಡೆದಿದೆ. ಅದಕ್ಕೆ ಆವಶ್ಯಕವಾದ ಎಲ್ಲ ನೆರವನ್ನೂ ಕೊಟ್ಟ ಪ್ರಾಕ್ತನ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳಾದ ಡಾ|| ಎಂ. ಎಚ್. ಕೃಷ್ಣ ಅವರಿಗೂ, ಅವರ ಕಚೇರಿಯಲ್ಲಿನ ಗೆಳೆಯರಿಗೂ ಈ ಪತ್ರಿಕೆ ತುಂಬಾ ಋಣಿಯಾಗಿದೆ.

***

## ಕಂಬನಿ

೧. ದಕ್ಷಿಣದೇಶದ ಸಂಸ್ಕೃತ ವಿದ್ವನ್ಮಣಿಗಳೂ ಪ್ರಾಚ್ಯ ವಿದ್ಯಾಪಾರಂಗತರೂ ಮೇಲ್ತರದ ಪ್ರಾಧ್ಯಾಪಕರೂ ಆಗಿದ್ದ ಮಹಾಮಹೋಪಾಧ್ಯಾಯ ಮುಂತಾದ



ಕಾಕುತ್ಸವರ್ಮನ ತಾಲಗುಂದದ ಸ್ತಂಭ ಶಾಸನ
(ಕ್ರಿ.ಶ. ೪೩೫–೪೫೦)

KADAMBA




1




4




6




10




11




14

ಕದಂಬರ ನಾಣ್ಯಗಳು

ಎಂಟು ದಳದ ಪದ್ಮ, ಸಿಂಹ, ಕಪಿಗಳನ್ನು ೧-೪-೧೦ ರಲ್ಲಿ ನೋಡಿ

ಬಿರುದು ಪಡೆದಿದ್ದ ಶ್ರೀ ಎಸ್. ಕುಪ್ಪುಸ್ವಾಮಿಶಾಸ್ತ್ರಿ, ಎಂ.ಎ., ಐ.ಇ.ಎಸ್. ಅವರು ಸ್ವಲ್ಪ ದಿನಗಳ ಮುಂಚೆ ಕಾಲವಾದ್ದು ಭರತಖಂಡಕ್ಕೇ ಒಂದು ದೊಡ್ಡ ನಷ್ಟ. ದಕ್ಷಿಣದೇಶದಲ್ಲಿ ಅನೇಕ ವಿದ್ಯಾಸಂಸ್ಥೆಗಳ ನಿರ್ಮಾಣಕ್ಕೂ ಚಾಲನೆಗೂ ಅವರು ಸ್ಫೂರ್ತಿಕೊಟ್ಟರು; ಪರಿಶೋಧನೆಗಳನ್ನು ನಡಸಿದರು; ಹತ್ತಾರು ಉತ್ತಮ ಶಿಷ್ಯರನ್ನು ತಯಾರುಮಾಡಿ ಅವರನ್ನು ಲೋಕಕ್ಕೆ ದಾನಮಾಡಿದರು. 'ಜರ್ನಲ್ ಆಫ್ ಓರಿಯೆಂಟಲ್ ರಿಸರ್ಚ್' ಅಂತಹ ಪತ್ರಿಕೆಯ ಸ್ಥಾಪಕರಾದರು. ತಮ್ಮ ಖಚಿತವಾದ ನುಡಿ, ಬುದ್ಧಿವಾದ, ಸರಣಿ, ಜ್ಞಾನಗಳಿಂದ ದೇಶವಿದೇಶಗಳ ಮಹಾ ವಿದ್ವಾಂಸರ ಮೆಚ್ಚುಗೆ ಪಡೆದು ನಮ್ಮ ನಾಡಿಗೆ ಕೀರ್ತಿತಂದರು. ಸ್ವಚ್ಛವಾದ, ಉದಾರವಾದ ಜೀವನದಿಂದಲೂ ಶಾಸ್ತ್ರಜ್ಞಾನ ಮತ್ತು ವಿದ್ಯಾ ಪಕ್ಷಪಾತದಿಂದಲೂ ಅವರನ್ನು ತಿಳಿದ ಎಲ್ಲರ ಭಕ್ತಿ ಪ್ರೀತಿಗಳಿಗೂ ಪಾತ್ರರಾದರು. ಇಂಥವರ ಸ್ಮರಣೆಮಾಡುವುದೇ ಒಂದು ಭಾಗ್ಯ.

೨. ಕನ್ನಡದಲ್ಲಿ ಬರೆವ ಮತ್ತು ಸಾರ್ವಜನಿಕ ಕೆಲಸಮಾಡುವ ಮಹಿಳೆಯರೇ ಅಲ್ಪಸಂಖ್ಯೆಯ ಮಂದಿ. ಅಂಥ ಕೆಲವೇ ಮಂದಿಯಲ್ಲಿ ಹೆಸರಾಗಿ, ಕತೆ ಪ್ರಬಂಧಗಳನ್ನು ಬರೆದು, ಸಮಾಜ ಕಾರ್ಯಗಳಲ್ಲಿ ಭಾಗವಹಿಸಿ ಮಹಿಳಾ ಲೋಕಕ್ಕೆ ಸೇವೆ ಸಲ್ಲಿಸಿ, ಕೆಲವುಕಾಲ ಜಯಕರ್ಣಾಟಕದ ಸಂಪಾದಕಿಯರಾಗಿದ್ದ ಶ್ರೀ. ಶ್ಯಾಮಲಾದೇವಿ ಬೆಳಗಾಂಕರ್ ಅವರು ತೀರಿಕೊಂಡದ್ದರಿಂದ ಕನ್ನಡದ ಮಹಿಳಾ ಲೋಕದಿಂದ ಒಂದು ಸಾರ್ಥಕ ಪ್ರಭಾವ ಕಣ್ಮರೆಯಾದಂತಾಗಿದೆ. ಅವರನ್ನು ಕಳೆದುಕೊಂಡ ನಷ್ಟ ಶ್ರೀ ರಾಮಚಂದ್ರರಾವ್ ಅವರಿಗೆ ಹೇಗೊ ಕನ್ನಡಿಗರಿಗೂ ಹಾಗೇ ಹಿರಿದೆಂದು ಹೇಳಿ ಈ ಸಮಯದಲ್ಲಿ ರಾಯರಿಗೆ ನಮ್ಮ ಸಹಾನುಭೂತಿಯನ್ನು ಅರ್ಪಿಸಲು ಬೇಡುತ್ತೇವೆ.

---



ಕದಂಬ ಮೃಗೇಶವರ್ಮನ ಮಗ ರವಿವರ್ಮನ ೩೪ನೆಯ ವರ್ಷದ ಕೋರಮಂಗ ತಾಮ್ರಶಾಸನ

(೫ನೆಯ ಶತಕದ ಕೊನೆ ಅಥವಾ ೬ನೆಯ ಶತಕದ ಲಿಪಿ)

# ವಸ್ತುಕೋಶ

ಈಗ್ಗೆ ಸುಮಾರು ಮೂವತ್ತು ವರ್ಷಗಳ ಹಿಂದೆ ಮೊದಲಾದ ಕನ್ನಡ ಕವಿತೆ ಈಗ ಗರಿಮೂಡಿ ಹಾರಾಡುತ್ತ ತನ್ನ ಸೋಟವನ್ನು ವಿಶಾಲಪಡಿಸಿಕೊಳ್ಳುತ್ತ ಒಂದು ನೆಲೆಗೆ ಬಂದು ನಿಂತಿದೆ. ಬೆಳೆ ಬೇಕಾದಷ್ಟು ಬಂದಿದೆ. ಓದುವವರೂ ಹೆಚ್ಚುತ್ತಿದ್ದಾರೆ. 'ನೂತನ ಕವಿತೆಯೆಂದು ಕುಂದಿಟ್ಟು ಜರೆಯುವವರು' ಕಡಮೆಯಾಗಿದ್ದಾರೆ. ಹತ್ತಾರು ಮಂದಿ ಉತ್ತಮ ಕವಿಗಳಿಂದ ನಮ್ಮ ಬಾಳ್ವೆಗೆ ಹೊಳಪು ಬಂದಿದೆ. ಸಣ್ಣ ಪುಟ್ಟ ಕವಿಗಳಂತೂ ಲೆಕ್ಕವಿಲ್ಲದಷ್ಟು ಮಂದಿ. ಸಂತತವಾದ ಸ್ಫೂರ್ತಿಯಿಂದ ಎಡೆಬಿಡದೆ ಹಾಡುವವರು ಕೆಲವರು. ಸಮಯಸ್ಫೂರ್ತಿಯಿಂದ ಬರೆಯುವವರು ಹಲವರು. ಹೇಗೋ ಒಂದೆರಡು ಪದ್ಯಗಳನ್ನು ಬರೆದು ತೆಪ್ಪಗಿರುವವರು ಬಹುಮಂದಿ. ಇಂದಿನ ಕವಿತೆಯಲ್ಲಿ ಉತ್ಕೃಷ್ಟವಾದುವು ಕಡಮೆಯಾಗಿಯೂ ಎರಡನೆಯ ವರ್ಗದವು ಹೇರಳವಾಗಿಯೂ ಇದ್ದರೆ ಅದು ಸಹಜವೇ. ಇದರಿಂದ ಕವಿತೆಯ ಬೆಳಸು ಒಬ್ಬನ ಅಭ್ಯಾಸಕ್ಕೆ ಅಳವಡದಷ್ಟು ವಿಪುಲವಾಗಿಬಿಟ್ಟಿದೆ.

೧. ಇಂದಿನ ಕನ್ನಡ ಕವಿತೆ[1]

ಇಂದು ನಮ್ಮ ಜೀವನದ ಆಶೆ ಆದರ್ಶಗಳೂ ಭಯ ಸಂದೇಹಗಳೂ ನಮ್ಮ ಕವಿಗಳನ್ನು ಹಾಡಿಸುತ್ತಿವೆ. ಇವು ಅತಿರಮ್ಯವಾದರೀತಿಯಲ್ಲಿ ರೂಪುಗೊಂಡಿವೆ. . . . ಇಂದಿನ ಕವಿತೆ ಹಿಂದಿನದಕ್ಕೆ ಏನೂ ಕಡಮೆಯಿಲ್ಲವೆಂದೂ ಅದು ಸ್ವಾಭಾವಿಕವಾದ ಬೆಳವಣಿಗೆಯೆಂದೂ ನಿರೂಪಿಸುವುದು ನನ್ನ ಕೆಲಸ. ಎಲ್ಲ ಕವಿತೆಗಳನ್ನಾಗಲಿ ಎಲ್ಲ ಕವಿಗಳನ್ನಾಗಲಿ ಹೆಸರು ಹಿಡಿದು ಸೂಚಿಸುವ ಸಾಹಸಕ್ಕೆ ತೊಡಗಿಲ್ಲ. ವಿಷಯ ದೊಡ್ಡದು. ಆದರ ಒಂದು ಮುಖವನ್ನು ಮಾತ್ರ ಇಲ್ಲಿ ಬಿಂಬಿಸುತ್ತಿದ್ದೇನೆ.

ಕವಿಗೆ ಸ್ಫೂರ್ತಿ ಎರಡು ರೀತಿಯಾಗಿ ಬರಬಹುದು; ತನ್ನೊಳಗೆ ಉದಿಸಿ ವಿಕಾಸಗೊಳ್ಳುವ ಭಾವಾವೇಗಗಳೂ, ಆಲೋಚನೆಗಳೂ, ಚಿತ್ರಗಳೂ ಅವನ ನಾಲಗೆಯನ್ನು ಕುಣಿಸುತ್ತವೆ. ಸುತ್ತಲಿನ ಪರಿಸ್ಥಿತಿಗಳು ಅವನ ಮನಸ್ಸನ್ನು ಸೆರೆಹಿಡಿದು ಉದ್ರೇಕಗೊಳಿಸಿ ಅವನನ್ನು ನುಡಿಸುತ್ತವೆ. ಇವು ಒಂದರೊಡನೆ ಒಂದು ಬೆರೆತು ಇರುವುದೇ ಹೆಚ್ಚು. ಇದನ್ನು ಗಮನಿಸಿದರೆ ಇಂದು ನಮ್ಮ ಕವಿಗಳು ಮನಸ್ಸಿನಲ್ಲಿ ತುಂಬಿಕೊಂಡಿರುವ ಆವೇಶಗಳು ಅವರಿಗೆ ಹೇಗೆ ಬಂದುವೆಂಬುದನ್ನು ತಿಳಿಯಲು

---

[1] ಶ್ರೀ ಡಿ. ಎಲ್. ನರಸಿಂಹಾಚಾರ್, ಎಂ.ಎ. "ಆಕಾಶವಾಣಿ" ೨-೯-೧೯೪೩ ಇಂದ.

ಸುಲಭವಾಗುತ್ತದೆ. ಸ್ವಯಂಸ್ಫೂರ್ತಿಯಿಂದ ಅವರು ಕಂಡಿರುವ ಕನಸುಗಳು ವ್ಯಕ್ತವಾಗುತ್ತವೆ.

ಇಂಗ್ಲಿಷು ಭಾಷಾಸಾಹಿತ್ಯಗಳ ಅಭ್ಯಾಸ ನಮಗುಂಟಾದದ್ದು ನಮ್ಮ ನಾಡಿನ ಎಲ್ಲ ಪುನರುಜ್ಜೀವನಕ್ಕೂ ಕಾರಣ. ಅದು ಕತ್ತಲೆಯ ಮನೆಗೆ ಬೆಳಕನ್ನು ತುಂಬಿಸುವ ಕಿಟಿಕಿಯಾಯಿತು. ಅದರ ಮೂಲಕ ಆ ಸಾಹಿತ್ಯದ ಪರಿಚಯ ಒಂದೇ ಅಲ್ಲದೆ ಇತರ ಪಾಶ್ಚಾತ್ಯ ದೇಶಗಳ ಸಾಹಿತ್ಯಗಳೂ ನಮ್ಮ ಕೈಗೆ ಸಿಕ್ಕಿದುವು. ವಿಜ್ಞಾನಶಾಸ್ತ್ರಗಳೂ ರಾಜ್ಯತಂತ್ರವೂ ಅರ್ಥಶಾಸ್ತ್ರವೂ ನಮಗೆ ಹೊಸ ಕಣ್ಣನ್ನು ಕೊಟ್ಟವು. ನಮ್ಮ ದೃಷ್ಟಿ ವಿಶಾಲವಾಯಿತು; ವಿಚಾರಶಕ್ತಿ ಬೆಳೆಯಿತು; ಯಾವುದನ್ನೂ ವಿಮರ್ಶಿಸಿ ಒರೆಹಚ್ಚಿ ತಿರುಳನ್ನು ಗ್ರಹಿಸುವ ಸಾಮರ್ಥ್ಯ ಬಲಿಯಿತು. ಚರಿತ್ರೆಯ ವ್ಯಾಸಂಗದಿಂದ ನಮ್ಮಲ್ಲಿ ಚಾರಿತ್ರಕ ದೃಷ್ಟಿ ಅಂಕುರಿಸಿತು. ನಮ್ಮ ಬದುಕಿಗೂ ಸಾಹಿತ್ಯಕ್ಕೂ ತೀರ ಬೇರೆಯಾದ ಈ ಇಂಗ್ಲಿಷು ಸಂಸ್ಕೃತಿಯ ಸಂಪರ್ಕ ನಮ್ಮ ಏಳಿಗೆಯ ದಾರಿಯನ್ನು ಕಾಣಿಸಿತು. ಅದರ ಪ್ರಭಾವ ನಮ್ಮ ಬದುಕಿನ ಪ್ರತಿಯೊಂದು ನಡೆವಳಿಕೆಯಲ್ಲಿಯೂ ತುಂಬಿಕೊಂಡಿದೆ. ನಮ್ಮಲ್ಲಿರುವ ಕೊರತೆಗಳನ್ನು ನೀಗಿ ನಮ್ಮ ದೇಶದ ಬಯಕೆಗಳನ್ನು ಈಡೇರಿಸಿಕೊಳ್ಳುವ ಹಂಬಲ ನಮಗೆ ಉಂಟಾದದ್ದು ಅದರಿಂದ. ಇಂಗ್ಲಿಷು ಸಾಹಿತ್ಯವನ್ನು ಚೆನ್ನಾಗಿ ಓದಿ ಅದರ ಅಂದಕ್ಕೆ ಸೋತು ನಮ್ಮ ನಾಡುಭಾಷೆಗಳಲ್ಲಿಯೂ ಅದನ್ನು ರೂಪಿಸುವ ಪ್ರೇರಣೆ ಸಾಹಿತಿಗಳಿಗೆ ಬಂತು. . . . ಕನ್ನಡವನ್ನೂ ಇಂಗ್ಲಿಷನ್ನೂ ಕಲಿತ ಸವ್ಯಸಾಚಿಗಳಾದ 'ಶ್ರೀ' ಅವರು ಕನ್ನಡದ ಹೊಸ ಕಾವ್ಯಕ್ಕೆ ಪ್ರೇರಕರಾದರು. ಅವರು ರಚಿಸಿದ 'ಇಂಗ್ಲಿಷು ಗೀತೆಗಳು' ಇಂಗ್ಲಿಷು ಕಾವ್ಯಮಾರ್ಗವನ್ನು ತೋರಿಸಿದ್ದೊಂದೇ ಅಲ್ಲದೆ ಹೊಸಕನ್ನಡ ಛಂದಸ್ಸನ್ನೂ ಧಾಟಿಯನ್ನೂ ಕಾಣಿಸಿತು. ಹೊಸ ಚೈತನ್ಯ ಹರಿಯುವುದಕ್ಕೆ ಹೊಸಪಾತ್ರವನ್ನು ನಿರ್ಮಿಸಿತು. ಹೊಸಕನ್ನಡದ ಬಗೆಬಗೆಯ ಮಟ್ಟುಗಳಿಗೆ ಅವರು ನಿರ್ಮಾಪರಾಗಿದ್ದಾರೆ. ಅವರು ತೋಡಿದ ನಾಲೆ ಇಂದು ತುಂಬು ಹೊನಲಾಗಿದೆ. ಹೀಗೆ ಹೊಸಕನ್ನಡ ಕವಿತೆಗೆ ಬೇಕಾದ ವಿಷಯಸಂಗ್ರಹ ಇಂಗ್ಲಿಷು ವಿದ್ಯೆಯ ಪ್ರಸಾರದಿಂದ ಬಂದು ಕನ್ನಡದ ಕಾಲುವೆಯಲ್ಲಿ ಹರಿಯತೊಡಗಿತು. ಇದರ ಫಲವಾಗಿ ಕವಿಗಳ ದೃಷ್ಟಿ ನೂತನವಾಯಿತು.

ಹಿಂದೆ ನಮ್ಮ ಸಾಹಿತ್ಯ ಬೆಳೆದದ್ದು ಬಲುಮಟ್ಟಿಗೆ ಮತಪ್ರಚಾರಕ್ಕಾಗಿ. ಈಗ ಮತವು ನಮ್ಮ ಕಾವ್ಯರಥವನ್ನು ಮುಂದಕ್ಕೆ ಎಳೆಯಲಾರದಾಗಿದೆ. ಎಲ್ಲ ಧರ್ಮಗಳ ತಿರುಳು ಒಂದೇ ಎಂದು ಅರಿತು ಅದನ್ನು ಕಾವ್ಯದ ಮೂಲಕ ಹಬ್ಬಿಸುವುದಕ್ಕೆ ಇಂದಿನ ಕವಿತೆ ತೊಡಗದೇ ಇಲ್ಲ. ಸೃಷ್ಟಿಯ ಮರ್ಮವನ್ನರಿಯದೆ ವಿಸ್ಮಯಪಡುವುದು, ಕಷ್ಟದಲ್ಲಿ ಚಿತ್ತಶಾಂತಿಯನ್ನು ಕೊಡುವುದು, ಪೌರುಷಪ್ರಯತ್ನಕ್ಕೆ ನಾನಾ ಮಾರ್ಗ

ಗಳನ್ನು ತೋರಿಸುವುದು, ಇವು ಎಲ್ಲ ಮತಗಳ ಸಾರ. ಈಗ ಮತಕ್ಕೆ ಪ್ರತೀಕವಾಗಿ ನಾನಾ ಭಕ್ತಿಗಳು ಬಂದು ನಿಂತಿವೆ. ದೇಶಪ್ರೇಮ, ಭಾಷಾಪ್ರೇಮ ಮುಂತಾದುವು ನಮ್ಮ ಮನಸ್ಸನ್ನು ಈಗ ಆಕ್ರಮಿಸಿಕೊಂಡಿವೆ. ಪ್ರಗತಿಮಾರ್ಗವನ್ನು ಹಿಡಿದು, ಏಳಿಗೆಗಾಗಿ ದುಡಿಯಬೇಕೆಂಬ ಹಂಬಲ ನಮ್ಮ ಜನರಿಗೆ ಹೆಚ್ಚಿದೆ. ಇವೆಲ್ಲ ಇಂದಿನ ಕವಿತೆಯಲ್ಲಿ ಬೆಳಗುತ್ತಿವೆ. ನಮ್ಮ ನಾಡುನುಡಿಗಳ ಹಿಂದಿನ ವೈಭವವನ್ನೂ ಇಂದಿನ ಬೀಳನ್ನೂ ಹೋಲಿಸಿ ಕೊರಗುವ ಕವಿತೆಗಳು ಕೆಲವಿವೆ. ಇವು ಬರಿಯ ಕೊರಗಿನಲ್ಲಿಯೇ ಮುಗಿಯದೆ ಹಿಂದಿನಂಥ ವೈಭವವನ್ನು ನಮ್ಮ ಪ್ರಯತ್ನದಿಂದ ತಿರುಗಿ ಗಳಿಸಬೇಕೆಂಬ ಉತ್ಸಾಹದಿಂದ ಕೂಡಿವೆ. ಐರೋಪ್ಯರು ನಮ್ಮ ನಾಡಿಗೆ ಬಂದು ನಮ್ಮ ಹಿಂದಿನ ಚರಿತ್ರೆಯನ್ನೂ ಸಂಸ್ಕೃತಿಯನ್ನೂ ಶೋಧಿಸಿ ಹೊರಗೆಡವಿದರು. ಅವರ ದಾರಿಯಲ್ಲೇ ನಮ್ಮವರೂ ನಡೆದು ನಮ್ಮ ಬಾಳು ಹಿಂದೆ ಮುಟ್ಟಿದ್ದ ಉನ್ನತಿಯ ಶಿಖರವನ್ನು ಎಲ್ಲರಿಗೂ ಕಾಣಿಸಿದರು. ಕವಿಗಳ ಮನಸ್ಸನ್ನು ಇದು ಸೂರೆಗೊಂಡಿತು. ಈ ವೈಭವ ದಿಂದ ಪುಲಕಿತವಾದ ಕವಿತೆಗಳು ಹೇರಳವಾಗಿವೆ. . . .

ಇದು ತ್ಯಾಗದ ಯುಗ. ಏತಕ್ಕಾಗಿ ತ್ಯಾಗ? ನಮ್ಮವರಿಗೆ ಮೇಲ್ಮೆಯನ್ನುಂಟು ಮಾಡುವುದಕ್ಕಾಗಿ. ಎಷ್ಟೋ ಜನ ತ್ಯಾಗಶೀಲರು ನಮ್ಮ ನಡುವೆ ಇದ್ದಾರೆ. ಅತಿ ದೊಡ್ಡದಾದ ಒಂದು ಬಯಕೆಯನ್ನು ಅವರು ಸಾಧಿಸುವುದಕ್ಕಾಗಿ ತೊಡಗಿದ್ದಾರೆ. ಅದೇ ಅವರ ಬಾಳಿನ ಉಸಿರು. ನಾನಾಮುಖವಾಗಿ ಮುಂದುವರಿದು ಎಲ್ಲ ರೀತಿಯ ನೆಮ್ಮದಿಯ ಉನ್ನತಿಯನ್ನು ನಮ್ಮ ನಾಡಿಗೆ ಉಂಟುಮಾಡುವುದಕ್ಕಾಗಿ ತಪಸ್ವಿಗಳಂತೆ ದೀಕ್ಷಿತರಾಗಿದ್ದಾರೆ. ಈ ತ್ಯಾಗ ಕನ್ನಡ ಕವಿಗಳನ್ನು ಕೆರಳಿಸದೆ ಇಲ್ಲ.

. . . . ದುಷ್ಟಚಿಂತನೆಗಳನ್ನು ಬಿಟ್ಟು ತ್ಯಾಗಮುಖಿಯಾದ ಸಾಧನೆಯಲ್ಲಿ ಮಾತ್ರವೇ . . . . ನಾಡಿನ ಸೌಭಾಗ್ಯ ಸಾಧ್ಯ.

ಸುಖವೂ ಸಂತೋಷವೂ ಎಲ್ಲರ ಹಕ್ಕು. ಸಮಾಜದಲ್ಲಿ ಇವು ಒಂದು ಪಂಗಡಕ್ಕಿದ್ದು ಮತ್ತೊಂದಕ್ಕೆ ಇಲ್ಲದೇಹೋದಾಗ ಅತೃಪ್ತಿಯೂ ಅಶಾಂತಿಯೂ ಹೆಚ್ಚಾಗುವುವು. ಒಬ್ಬರು ಐಶ್ವರ್ಯದಲ್ಲಿ ಮೆರೆಯುತ್ತಿದ್ದರೆ ಹಲವರು ಬಡತನದಲ್ಲಿ ತೊಳಲುತ್ತಿದ್ದಾರೆ. ಇದು ನ್ಯಾಯವಲ್ಲವೆಂದೂ ದೇಶದ ಸಂಪತ್ತನ್ನು ವೃದ್ಧಿಗೊಳಿಸಲು ದುಡಿಯುವ ಅನೇಕರ ಮೇಲ್ಮೆಗಾಗಿ ಅವರಿಂದ ಪುಷ್ಟರಾದ ಶ್ರೀಮಂತರು ಉದಾರಿಗಳಾಗಬೇಕೆಂದೂ ಹೇಳುವ ಒಂದು ತತ್ವ ನಮ್ಮ ಕವಿಗಳ ಅನುಭವಕ್ಕೂ ಬಂದಿದೆ. ಇದರಿಂದ ಬಡತನವನ್ನು ತೊಲಗಿಸುವುದಕ್ಕೂ ಅಜ್ಞಾನವನ್ನು ಕಳೆಯುವುದಕ್ಕೂ ಪ್ರಯತ್ನಿಸಬೇಕೆಂಬ ಪ್ರೇರಣೆ ಉಂಟಾಗಿದೆ. . . .

ನಮ್ಮ ಸಮಾಜದಲ್ಲಿ ಹಲವು ದೋಷಗಳು ಹಿಂದಿನಿಂದ ಇವೆ. ಇಂದು ಅವು

ನಮ್ಮ ಪ್ರಗತಿಗೆ ಅಡ್ಡವಾಗಿವೆ. ಹಲವರಿಗೆ ಇದರಿಂದ ಬಹು ಹಿಂಸೆ. ಈ ದ್ವೇಷಗಳನ್ನು ನಿವಾರಿಸಲು ಸುಧಾರಣೆಯೆಂಬ ಚಿಕಿತ್ಸೆ ಆಗಬೇಕು. ಕೆಲವರು ಶಸ್ತ್ರಚಿಕಿತ್ಸೆಯನ್ನು ಸೂಚಿಸಿದರೆ ಮತ್ತೆ ಕೆಲವರು ಮದ್ದುಕೊಟ್ಟು ನಿಧಾನವಾಗಿ ಗುಣಪಡಿಸುವುದು ಮೇಲೆಂದು ಹೇಳುತ್ತಾರೆ. ಒಂದು ಕ್ರಾಂತಿ ಪದ್ಧತಿ, ಇನ್ನೊಂದು ಪ್ರಗತಿ ಪದ್ಧತಿ. ಕನ್ನಡ ಕವಿಗಳು ಇಂಥ ಸುಧಾರಣೆಗಳಿಗೆ ಗಮನವನ್ನು ಸಲ್ಲಿಸಿದ್ದಾರೆ.

ಸೌಂದರ್ಯ ದರ್ಶನದಲ್ಲಿ ಹೊಸ ಕನ್ನಡ ಕವಿತೆ ಮುಂದುವರಿದಿದೆ; ಬಳಕೆಯಾಗಿರುವ ವಸ್ತುಗಳಲ್ಲೇ ಹೊಸದಾದ ಸೊಗಸನ್ನು ತೋರಿಸುತ್ತಿದೆ. ಮಾನವನ ಹೃದಯಸೌಂದರ್ಯವನ್ನೂ ಸೃಷ್ಟಿಯ ಸೌಂದರ್ಯವನ್ನೂ ತೂಗಿ ನೋಡಲು ಹವಣಿಸುತ್ತಿದೆ.

ಸಾಧಾರಣ ಮನುಷ್ಯರಾದರೂ ಅವರಲ್ಲಿ ಇರುವ ಹೃದಯಸೌಂದರ್ಯ ಎಷ್ಟೋ ಜನರಲ್ಲಿ ಇರುವುದಿಲ್ಲ. ಪ್ರಕೃತಿಸೌಂದರ್ಯವನ್ನು ಇಂದಿನ ಕವಿಗಳು ಬಣ್ಣಿಸುವ ರೀತಿ ಹೊಸದು. ಇಂಗ್ಲಿಷು ಸಾಹಿತ್ಯದಲ್ಲಿ ಪ್ರಕೃತಿಯ ವಿಲಾಸ ಚೆಲ್ಲಾಡಿರುವುದನ್ನು ನಮ್ಮ ಕವಿಗಳು ಕಂಡು ಅದರಂತೆಯೇ ಸಹಜತೆಯನ್ನು ಬಿಡದೆ ಭಾವಪೂರ್ಣವಾಗಿ ವರ್ಣಿಸಿದ್ದಾರೆ. . . .

ಪ್ರಕೃತಿಯ ಚೆಲುವಿನಿಂದ ಕವಿಗಳ ಮನಸ್ಸು ಸೊಕ್ಕಿ ಸಮಾಧಿಯನ್ನು ಹೊಂದಿದೆ. ಅವುಗಳನ್ನು ಓದಿದಾಗ ಉಂಟಾಗುವ ಚಿತ್ತಶಾಂತಿ ವರ್ಣನೆಗೆ ಮೀರಿದ್ದು. ಇವೆಲ್ಲ ಅಂತಃಸ್ಫುರಣೆಯಿಂದ ಜನ್ಮಿಸಿರುವ ಗೀತಗಳು.

ಮೇಲೆ ಕಾಣಿಸಿರುವ ಅಂಶಗಳೆಲ್ಲ ಪುನರುಜ್ಜೀವನ ಹೊಂದಿರುವ ಭರತಖಂಡದ ಎಲ್ಲ ಭಾಷೆಗಳಲ್ಲಿಯೂ ಕಾಣಿಸುತ್ತವೆ. ಇಂಗ್ಲಿಷಿನ ವಿದ್ಯೆ ಹರಡಿ ನಮ್ಮ ದೇಶ ಭಾಷೆಗಳು ಕಣ್ಣುತೆರೆದು ಹೊಸ ಸಾಹಿತ್ಯದ ಸೃಷ್ಟಿಗೆ ಆರಂಭಿಸಿ ಭಾರತದ ಬಯಕೆಗಳನ್ನು ನಾನಾ ರೀತಿಯಲ್ಲಿ ರೂಪಿಸುತ್ತಿವೆ. ಬಂಗಾಳಿ, ಗುಜರಾತಿ ಮುಂತಾದ ಕೆಲವು ಭಾಷೆಗಳ ಸಾಹಿತ್ಯ— ಬಂಕಿಮಚಂದ್ರ, ರವೀಂದ್ರನಾಥ ಠಾಕೂರ ಮುಂತಾದ ಕವಿಶ್ರೇಷ್ಠರು ಕಾರಣರಾಗಿ ಬಹುದೂರ ಮುಂದಕ್ಕೆ ಹೋಗಿದೆ. ಯಾವ ಪ್ರಾಂತ್ಯದಲ್ಲಿ ನೋಡಿದರೂ ಹೊಸ ಚೈತನ್ಯದ ಸುಳಿದಾಟ ಸಾಹಿತ್ಯದಲ್ಲಿ ಕಾಣುತ್ತದೆ. ಕನ್ನಡ ಕವಿಗಳು ಕೂಡ ಭರತಖಂಡವನ್ನೆಲ್ಲ ಆವರಿಸಿಕೊಂಡಿರುವ ನಾನಾ ಆದರ್ಶಗಳನ್ನು ಉಗ್ಗಡಿಸಿ ನಿರೂಪಿಸಿದ್ದಾರೆ. ಭರತಖಂಡದ ಮಹಾಮೇಳದಲ್ಲಿ ಕನ್ನಡ ಸಾಹಿತ್ಯವು ತನ್ನ ವೀಣೆಯ ಧ್ವನಿಯನ್ನು ಬೆರಸಿ ಸಮುದಾಯವಾದ ಮಾಧುರ್ಯವನ್ನು ಹೆಚ್ಚಿಸಿದೆ. ದೇಶಪ್ರೇಮ, ಭಾಷಾಭಕ್ತಿ, ಸಾಹಿತ್ಯಸೇವೆ, ಜನರ ಉದ್ಧಾರ, ಅಜ್ಞಾನದ ತೂರಾಟ, ಜ್ಞಾನಪ್ರಸಾರ, ಬಿಡುಗಡೆಯ ಬಯಕೆ, ಶಾಂತಿ, ನೆಮ್ಮದಿ — ಒಟ್ಟಿನಲ್ಲಿ ಮನುಷ್ಯನ

ಬಾಳು ಯಾವ ಯಾವುದರಿಂದ ಹಸಗೊಳ್ಳುವುದೋ, ಉಜ್ವಲವಾಗುವುದೋ ಅವೆಲ್ಲ ಅಂಶಗಳು ಈಗಿನ ಕನ್ನಡ ಕವಿತೆಯ ತಿರುಳಾಗಿವೆ.

ಹೊಸ ಕನ್ನಡ ಕವಿತೆ ನಿಜವಾದ ಸ್ಫೂರ್ತಿಯಿಂದ ಹಾಡುತ್ತಿದೆ. ನಾನಾ ಕಡೆಗಳಿಂದ ಬಂದ ಪ್ರೇರಣೆಗೆ ಹೊಳಲುಕೊಡುತ್ತ, ಕೆಲವುವೇಳೆ ಅದನ್ನು ಇನ್ನೂ ಹೆಚ್ಚು ಸಾಂದ್ರವಾಗಿಸುತ್ತ, ಅದು ಜೀವನದಲ್ಲಿ ಮಂಗಳವನ್ನು ಅರಸಲು ಹೊರಟಿದೆ. . . . . ಇಂತಹ ಹಿರಿಯ ಆದರ್ಶವನ್ನು ಸಾಧಿಸಲು ಹೊರಟಿರುವ ಕನ್ನಡ ಕವಿತೆ ಮುಂದೆ ಇನ್ನೂ ಹೆಚ್ಚಾಗಿ ಭವ್ಯತೆಯ ಮಂದಿರವನ್ನು ರೂಪಿಸಲಿ.

ಡಿ.ಎಲ್.ಎನ್.

***

**ಡಾ|| ಜಿ. ಸಿ. ಘೋಷ್ ಅವರ ಸಂದೇಶ**

ನಮ್ಮ ಮುನ್ನಡೆಯಲ್ಲಿನ ನಿಧಾನತೆಯನ್ನು ಕುರಿತು ಯೋಚಿಸಿದರೆ ಅಸಹನೆ ಉಂಟಾಗುತ್ತದೆ. ಈಚಿನ ೧೫೦ ವರ್ಷಗಳಲ್ಲಿ ಹಿಂದಿನ ೧೦,೦೦೦ ವರ್ಷಗಳಲ್ಲಿ ಆದುದಕ್ಕಿಂತ ಹೆಚ್ಚಿನ ಪ್ರಗತಿಯನ್ನು ಬೇರೆ ದೇಶಗಳವರು ಸಾಧಿಸಿದ್ದಾರೆ. ಇದಕ್ಕೆ ಪ್ರಧಾನಕಾರಣ ವಿಜ್ಞಾನದ ಬೆಳವಣಿಗೆ; ಅದು ಆರ್ಥಿಕಜೀವನದ ಮೇಲೂ, ಸಾಮಾನ್ಯರ ಮನಸ್ಸಿನ ದೃಷ್ಟಿ ರೀತಿಯ ಮೇಲೂ ಬಹು ಪರಿಣಾಮಕಾರಿಯಾದ್ದರಿಂದ. ಅನಟೋಲ್ ಫ್ರಾನ್ಸ್ ಎಂಬ ಸಾಹಿತಿ ಹೇಳಿದರು : 'ನಾಗರಿಕತೆಯೆಂಬುದು ಬಡವರ ಸಹನೆಯ ಮೇಲೆ ನಿಂತಿದೆ' ಎಂದು. ವಿಜ್ಞಾನ ಮಾಡಿರುವ ಉಪಕಾರದ ಫಲವಾಗಿ ಇಂದು ಅದನ್ನು ಸಾಧಾರಣರ ತೃಪ್ತಿಯ ಮೇಲೆ ಭದ್ರವಾಗಿ ನಿಲ್ಲಿಸಬಹುದಾಗಿದೆ. ಮನುಷ್ಯನನ್ನು ಗುಲಾಮನನ್ನಾಗಿ ಮಾಡದೆ ನಾಗರಿಕತೆಯನ್ನು ಸಾಧಿಸಬಹುದು. ದಾಸನ ಕೆಲಸವನ್ನು ಒಂದು ಯಂತ್ರ ಹೆಚ್ಚು ಸುಲಭವಾಗಿ ಮಾಡಬಲ್ಲದು ; ಅದು ಹೊರುವ ಹೊಣೆಯನ್ನು ಮನುಷ್ಯನ ಮಾಂಸಖಂಡಗಳು ಹೊರಲಾರವು. ಮಾನವಶಕ್ತಿಯನ್ನು ಹೆಚ್ಚು ಸಂತೋಷದ ಕೆಲಸಗಳಿಗೆ ಹೂಡಿಕೊಳ್ಳಬಹುದು. ಇಂಗ್ಲಂಡಿನಲ್ಲಿ ಪ್ರತಿಯೊಬ್ಬರ ಸೌಕರ್ಯಕ್ಕಾಗಿಯೂ ೮ ಯಂತ್ರದ ಆಳುಗಳು ದುಡಿದರೆ ಇಂಡಿಯಾದಲ್ಲಿ ೬ ಜನಕ್ಕೆ ಒಬ್ಬ ಆಳು ದುಡಿವಷ್ಟು ಮಾತ್ರ ಇದೆ. ಇಂಗ್ಲಂಡಿನ ಐಶ್ವರ್ಯಕ್ಕೂ ಇಂಡಿಯಾದ ಬಡತನಕ್ಕೂ ಈ ವ್ಯತ್ಯಾಸವೇ ಕಾರಣ.

ಪ್ರಕೃತಿಯ ಎಲ್ಲ ಅನುಕೂಲಗಳಿದ್ದೂ ಭೂಮಿಯಿಂದ ಸಾಕಾದಷ್ಟು ಪ್ರಯೋಜನ ಪಡೆಯದೆ ಇರುವುದು ಮಹಾಪರಾಧ.

ಅಶೋಕ ಬುದ್ಧ ಮುಂತಾದವರ ಹೆಸರನ್ನು ಹೆಮ್ಮೆಯಿಂದ ಹೇಳಿಕೊಂಡು ಪ್ರಾಚೀನ ವೈಭವವನ್ನೂ ಸಾಧನೆಯನ್ನೂ ಕೊಚ್ಚಿಕೊಳ್ಳುತ್ತ ನಾವು ಬಹು ಪುರಾತನ

ರಾದ್ದಕ್ಕೇ ಹಿರಿಯರೆಂದು ತೃಪ್ತಿಪಟ್ಟುಕೊಳ್ಳಬಾರದು. ಹಿಂದಿನದಕ್ಕಾಗಿ ಹೆಮ್ಮೆ—ಇಂದಿನ ಸ್ಥಿತಿಯನ್ನು ಉತ್ತಮಪಡಿಸಿಕೊಂಡರೆ ಮಾತ್ರ ಸಾರ್ಥಕವಾದೀತು.

ತಮ್ಮ ಸ್ಥಿತಿಯನ್ನು ಮೇಲ್ಪಡಿಸಿಕೊಳ್ಳಬೇಕೆಂಬ ಪ್ರವೃತ್ತಿ ಸಾಮಾನ್ಯರಲ್ಲಿ ಬಲಿಯಬೇಕು. ವಿದ್ಯಾರ್ಜನೆಯ ಫಲವನ್ನು ಅನುಭವಿಸುವವರ ಮೇಲೆ ದೊಡ್ಡ ಭಾರದ ಹೊರೆ ಹೊತ್ತಿದೆ. ಅವರ ಉತ್ಸಾಹದಿಂದ ಸಂಪ್ರದಾಯ ಪಾಲನೆಯ ರೂಪದಲ್ಲಿ ಬಂದಿರುವ ಘಡತೆ ಪದ್ಧತಿಗಳ ಬಿಗಿ ಸಡಿಲವಾಗಬೇಕು; ಜಡತೆ ತೊಲಗಬೇಕು. ಅವರ ಪ್ರಯತ್ನ, ನಾಗರಿಕತೆ, ಸ್ವಾರ್ಥತ್ಯಾಗಗಳಿಂದಲೇ ಜನಜೀವನಕ್ಕೆ ಪುಷ್ಟಿ ಬರಬೇಕು. ಸತ್ಯವನ್ನು ನೋಡೋಣ; ನುಡಿಯೋಣ: ನಾವು ಬಹುಕಾಲದಿಂದ ಪುರಾತನ ಅವಶೇಷಗಳಂತೆ— ಜರಠಗಳಂತೆ ಮಾತ್ರ ಒದ-ಕಿದ್ದೇವೆನ್ನಿಸುತ್ತದೆ. ಈ ಸ್ಥಿತಿಯನ್ನು ಉತ್ತಮಪಡಿಸೆವಾದರೆ ಬಾಳನ್ನು ಕೊನೆಗಾಣಿಸುವುದು ಮೇಲು.

ಮನಸ್ಸಿನ ಜಡತೆಯನ್ನು ಪರಿಹರಿಸಲು ವಿಜ್ಞಾನದ ಶಿಕ್ಷಣಕ್ಕಿಂತ ಉತ್ತಮ ಸಾಧನ ಬೇರೊಂದಿಲ್ಲ. ಕೈಗಾರಿಕೆ, ವ್ಯವಸಾಯಗಳಿಗೆ, ವಿಜ್ಞಾನದ ತತ್ವಗಳೂ ವಸ್ತುಗಳೂ ಉತ್ಪನ್ನಗಳೂ ವಿಧಾನಗಳೂ ಒದಗಿಸಿರುವ ಶಕ್ತಿಸಾಧನಗಳನ್ನು ಬಳಸಿಕೊಂಡರೆಯೇ ನಾವು ಕೊಳೆಯದೆ ಉಳಿದೇವು—ಬೆಳೆದೇವು. ಬೇರೆ ದೇಶಗಳಲ್ಲಿ ಜನಜೀವನದ ಸಂಪತ್ತಿಯೂ ಸಂಸ್ಕೃತಿಯ ಮಟ್ಟವೂ ಉತ್ತಮಪಟ್ಟು, ಕೈಗಾರಿಕೆ, ಕಸುಬು, ಕಲೆ ಇವು ಈ ಮೂಲಕ ಅಭಿವೃದ್ಧಿಯಾಗಿವೆ. ನಮ್ಮಲ್ಲಿಯೂ ಅದೇ ಬದುಕುವ ದಾರಿ! ವಿಜ್ಞಾನವೆಂದರೆ ಕೇವಲ ಸಂಗತಿಗಳನ್ನೂ ಪದಾರ್ಥಗಳನ್ನೂ ಹೊಸದಾಗಿ ಕಂಡುಹಿಡಿಯುವುದಾಗಲಿ, ಅವುಗಳ ಪರಸ್ಪರ ಸಂಬಂಧಗಳನ್ನು ತಿಳಿಸುವುದಾಗಲಿ, ಜನದ ಅಗತ್ಯಕ್ಕೆ ಅವುಗಳನ್ನು ಒದಗಿಸಿಕೊಳ್ಳುವುದಾಗಲಿ—ಅಲ್ಲ. ಅದು ಮನುಷ್ಯನ ಮನಸ್ಸನ್ನು ಉನ್ನತಗೊಳಿಸುವ ಸಾಧನ. ಸತ್ಯವನ್ನು ಅರಿಯುವ ಮಾರ್ಗ; ಸತ್ಯವನ್ನು ಕಂಡುಹಿಡಿಯಬಹುದು ಎಂಬ ಭರವಸೆ ಕೊಡುವ ವಿಶ್ವಾಸ.

ಪ್ರೆಸಿಡೆಂಟ್ ರೂಸ್‌ವೆಲ್ಟರು ಜನಜೀವನದ ರಕ್ಷಣೆಗಾಗಿ ಬೇಕಾದ ಎಂಟು ಸಂಗತಿಗಳನ್ನು ಪಟ್ಟಿಮಾಡಿದರು: ಪ್ರಪಂಚದಲ್ಲಿ ಪ್ರಜಾಧಿಕಾರ ತತ್ವ ಸ್ಥಾಪಿತವಾಗಿ ನಿಲ್ಲಬೇಕಾದರೆ. ಜೊತೆಗೆ ಒಂಬತ್ತನೆಯದಾಗಿ "ವಿಜ್ಞಾನ ಮನೋಧರ್ಮದ ಅಗತ್ಯ" ಎಂಬುದನ್ನು ಸೇರಿಸಬೇಕು. ಅರಿಯದ ಉತ್ಸಾಹೀ ಯುವಕರನ್ನು ಅಪಮಾರ್ಗಗಳಿಗೆ ಎಳೆಯುವ ರಾಜಕೀಯಾದಿ ಪ್ರಚಾರಗಳ ಹಾವಳಿಯನ್ನು ತಪ್ಪಿಸಿ ಅವರನ್ನು ಉದ್ಧಾರ ಮಾಡಬೇಕಾದರೂ ವಿಜ್ಞಾನಶಿಕ್ಷಣ ಅಗತ್ಯ.

ರಾಷ್ಟ್ರದ ಯೋಗ್ಯತೆ ವ್ಯಕ್ತಿಯಾದ ಅಲ್ಲಿನ ಪ್ರಜೆಯ ಯೋಗ್ಯತೆಯ ಮೇಲೆ ನಟ್ಟಿದೆ ಎಂದು ಜ್ಞಾನ್ ಸ್ಟುವರ್ಟ್ ಮಿಲ್ ಹೇಳಿದುದು ನಿಜ.

ಸಂಸ್ಕೃತಿತರುವ, ಸಂಸ್ಕೃತಿತಾರದ ವಿಷಯುಗಳು ಎಂಬ ಭೇದ ವಿದ್ಯೆಯಲ್ಲಿ ಸಲ್ಲದು. ಬೋಧನೆಯಲ್ಲಿ ಮಾತ್ರ ಸಂಸ್ಕೃತಿ ಸಾಧಕ, ಸಂಸ್ಕೃತಿ ನಾಶಕ ವಿಧಗಳುಂಟು. ಸುತ್ತಲಿನ ಪರಿಸ್ಥಿತಿಯ ಎಡರು ತೊಡರುಗಳನ್ನು ನಿವಾರಿಸಿಕೊಳ್ಳಬೇಕಾದರೆ ಮೇಲ್ತೆರದ ಬಾಳನ್ನು ಬಯಸಿ ಅದಕ್ಕಾಗಿ ಹೋರಾಡಿ ಗೆಲ್ಲಬೇಕು. ಇಂದು ಇದೇ ನಮ್ಮ ಪ್ರಧಾನಕಾರ್ಯ.

ಈಗ ನಮ್ಮ ವೈಸರಾಯ್ ಆಗಿ ಬಂದಿರುವ ಮಹನೀಯರು ಲಂಡನಿನಲ್ಲಿ ಮಾತನಾಡುತ್ತ ಹೇಳಿದರು: ಯುದ್ಧರಂಗದಲ್ಲಿ ಅಕ್ಷರಾಷ್ಟ್ರಗಳನ್ನು ಸೋಲಿಸಲೂ ಪ್ರಪಂಚವನ್ನು ನಾಶಗೊಳಿಸಲೂ ಕೇಳಿದಷ್ಟು ಹಣ ಸಿಕ್ಕುತ್ತಿದೆ. ಶಾಂತಿಯನ್ನು ಕೆಡಿಸುವ ಶತ್ರುಗಳಾದ, ಬಡತನ, ಅವಿದ್ಯೆ, ನಿರುದ್ಯೋಗ, ಅನಾರೋಗ್ಯವೆಂಬ ಶತ್ರುಗಳನ್ನು ನಾಶಮಾಡಲು ಸಾಕಾದಷ್ಟು ಹಣ ದೊರೆಯುವುದು ಕಷ್ಟವಾಗುವುದೆಂಬುದನ್ನು ಪರ್ಯಾಲೋಚಿಸಿದರೆ ನನಗೆ ಆಶ್ಚರ್ಯವಾಗುತ್ತದೆ ಎಂದು.

ಅಕ್ಷರಾಷ್ಟ್ರಗಳವರು ಬೇಗ ಸೋತು ಶರಣಾಗುವರು: ಶಾಂತಿಯ ಈ ಶತ್ರುಗಳೊಡನೆ ಕಾದಾಡಿ ಜಯಪಡೆಯಬೇಕಾದ ಕೆಲಸ ಉಳಿಯುವುದು. ಇತರ ಕಡೆಗಳಿಗಿಂತ ಭರತಖಂಡದಲ್ಲಿ. ಆ ಕಾಳೆಗ ನಿಮ್ಮನ್ನು,— ಹೊಸ ಪದವೀಧರರನ್ನು ಕರೆಯುತ್ತಿದೆ, ಕೆಣಕುತ್ತಿದೆ. ಅದರ ಸೈನಿಕರಾಗಿ. ಮುಂದೆ ಕಣ್ಣುಹಾಯಿಸಿನೋಡಿ. ಹಿನ್ನೋಟ ಬೇಡ. ಆ ಕಾಳಗ-ಸಂತೋಷ ನಿಮ್ಮನ್ನು ಹುರಿದುಂಬಿಸಲಿ. ಅಲ್ಲಿ ಗೆಲವು ಪಡೆಯುವ ವರೆಗೂ ನಿಮ್ಮ ಕೈಯಬಾವುಟ ಕೆಳಗಿಳಿಯದಿರಲಿ."

—ಮೈಸೂರು ವಿಶ್ವವಿದ್ಯಾನಿಲಯದ
೧೯೪೩ ರ ಪದವೀದಾನ ಮಹೋತ್ಸವದ ಭಾಷಣದಿಂದ.

***

ಈ ವರ್ಷ ಸಂಘದ ರಜತೋತ್ಸವವನ್ನು ನಡಸಬೇಕೆಂದು ನಿಶ್ಚಯಿಸಿರುವ ಸಂಗತಿಯನ್ನು ಈ ಹಿಂದೆಯೆ ಪ್ರಕಟಿಸಲಾಗಿತ್ತಷ್ಟೆ. ಸಂಘದ ಹಿಂದಿನ ಕಾರ್ಯದರ್ಶಿಗಳೂ, ಅಧಿಕಾರಿ ವರ್ಗದವರೂ, ಅಭಿಮಾನಿಗಳೂ ಆ ನಿಶ್ಚಯವನ್ನು ಅನುಮೋದಿಸಿ ಉತ್ಸವ ಕಾರ್ಯಗಳನ್ನು ಮುಂದುವರಿಸುವಲ್ಲಿ ನಮ್ಮೊಡನೆ ಸಹಕರಿಸುತ್ತಿರುವುದು ಸಂತೋಷಕರವಾಗಿದೆ.

೩. ಬೆಂಗಳೂರು ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು. ರಜತೋತ್ಸವ

ಉತ್ಸವವನ್ನು ಬರುವ ನವೆಂಬರ್ ತಿಂಗಳು ಇಲ್ಲವೆ ಡಿಸೆಂಬರ್ ಅಂತ್ಯದೊಳಗಾಗಿ ನಡಸಲು ತೀರ್ಮಾನವಾಗಿದೆ. ಆ ಸಂದರ್ಭದಲ್ಲಿ **ಸಂಘ ಸಮ್ಮೇಳನವನ್ನೂ** ಸಂಘದ ಹಿಂದಿನ ಮತ್ತು ಇಂದಿನ ಸದಸ್ಯರು ಭಾಗವಹಿಸುವ **ಬರಹಗಾರರ ಕೂಟ**

ವೊಂದನ್ನೂ ನಡಸಬೇಕೆಂದು ಉದ್ದೇಶಿಸಿದೆ. ವಿದ್ಯಾರ್ಥಿಗಳಿಗಾಗಿ ಭಾಷಣ, ವಾಚನ, ಪ್ರಬಂಧ ಮತ್ತು ಸಣ್ಣಕತೆ — ಇವುಗಳಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿದೆ. ವಿಜ್ಞಾನ ವಿಷಯವನ್ನು ಕುರಿತ ಕನ್ನಡದ ಉತ್ತಮ ಪ್ರಬಂಧವೊಂದಕ್ಕೆ ಈ ಸಂಘದ ಮೊದಲನೆಯ ಅಧ್ಯಕ್ಷರಾಗಿದ್ದ ದಿವಂಗತರಾದ ರಾಜಸೇವಾಸಕ್ತ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಹೆಸರಿನಿಂದ ಬಹುಮಾನವನ್ನು ಕೊಡಲು ನಿಶ್ಚಯಿಸಿದೆ; ಮತ್ತು ಉತ್ಸವದ ಅಂಗವಾಗಿ ಅವರ ಭಾವಚಿತ್ರ ಅನಾವರಣವನ್ನೂ ನೆರವೇರಿಸಬೇಕೆಂದು ಗೊತ್ತುಮಾಡಿದೆ. ಗಮಕ, ಸಂಗೀತ, ನಾಟಕ ಮತ್ತು ಉಪನ್ಯಾಸಗಳನ್ನು ಒಳಕೊಂಡ ಎರಡು ದಿನದ ಕಾರ್ಯಕ್ರಮ ಏರ್ಪಾಡಾಗಿದೆ. ಕರ್ಣಾಟಕ ಸಂಘದ ೨೫ ವರ್ಷದ ಚರಿತ್ರೆಯನ್ನೊಳಗೊಂಡ ಸಣ್ಣ ಪುಸ್ತಕವೊಂದನ್ನು ಪ್ರಕಟಿಸಲು ನಿಶ್ಚಯಿಸಿದೆ.

ಸಂಘದ ಘನತೆಗೆ ತಕ್ಕಂತೆ ಉತ್ಸವವನ್ನು ಯಶಸ್ವಿಯಾಗಿ ನಡಸುವುದಕ್ಕೆ ಸುಮಾರು ಒಂದು ಸಾವಿರ ರೂಪಾಯಿ ವೆಚ್ಚವಾಗಬಹುದೆಂದು ಅಂದಾಜು ಮಾಡಲಾಗಿದೆ. ಈ ೨೫ ವರ್ಷಗಳಲ್ಲಿ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಾಗಿದ್ದವರೂ ಕರ್ಣಾಟಕ ಸಂಘದ ಪುರೋಭಿವೃದ್ಧಿಗಾಗಿ ದುಡಿದವರೂ ಹಲವು ಸಾವಿರ ಮಂದಿ. ಅವರಲ್ಲಿ ಎಷ್ಟೋ ಮಹನೀಯರು ಜೀವನದ ನಾನಾ ರಂಗಗಳಲ್ಲಿ ಬಹು ಉನ್ನತ ಸ್ಥಾನದಲ್ಲಿದ್ದಾರೆ. ಇವರಲ್ಲದೆ ಈ ಕಾಲೇಜಿನಲ್ಲಿ ವ್ಯಾಸಂಗಮಾಡದಿದ್ದರೂ ಈ ಸಂಘದ ವಿಶೇಷ ಚಟುವಟಿಕೆಗಳಲ್ಲಿ ಮಮತೆಯಿಟ್ಟು ಸಹಕರಿಸುತ್ತಿರುವ ಅಭಿಮಾನಿಗಳೂ ಬಹಳ ಜನ ಇದ್ದಾರೆ. ಇವರೆಲ್ಲರೂ ಎಂದಿನಂತೆ ನೆರವಾದರೆ ಇಷ್ಟು ಹಣ ಕೂಡುವುದು ದೊಡ್ಡದೇನೂ ಅಲ್ಲ. ಈ ಭರವಸೆಯಿಂದಲೆ ಈ ಕಾರ್ಯವನ್ನು ಕೈಕೊಂಡಿದ್ದೇವೆ. ಎಲ್ಲರೂ ಉದಾರವಾಗಿ ಸಹಾಯಮಾಡಬೇಕೆಂದು ಕೋರುತ್ತೇವೆ.

ಸಹಾಯದ್ರವ್ಯವನ್ನು ಸಂಘದ ಕಾರ್ಯದರ್ಶಿಗಳಿಗೆ ನೇರವಾಗಿಯಾದರೂ ಕಳಿಸಬಹುದು; ಹಣ ಶೇಖರಿಸಲು ಸಂಘದಿಂದ ಅಧಿಕಾರ ಪಡೆದ ಪ್ರತಿನಿಧಿಗಳ ವಶಕ್ಕಾದರೂ ಕೊಡಬಹುದು. ಕಡೆಯಲ್ಲಿ ಎಲ್ಲರಿಗೂ ಅಧಿಕೃತವಾದ ರಸೀತಿ ಕೊಡಲಾಗುತ್ತದೆ.

ಸಂಘದ ಹಿಂದಿನ ಸದಸ್ಯರೂ ಅಭಿಮಾನಿಗಳೂ ತಮ್ಮ ಈಗಿನ ವಿಳಾಸಗಳನ್ನು ಬರೆದು ತಿಳಿಸಿದರೆ ತುಂಬ ಉಪಕಾರವಾಗುತ್ತದೆ.

ಕನ್ನಡದ ಅಭಿಮಾನಿಗಳಾದ ಸರ್ವ ಮಹಾಜನರೂ ಉದಾರದ್ರವ್ಯ ಸಹಾಯದಿಂದಲೂ ಇತರ ಬಗೆಯ ಸಹಕಾರದಿಂದಲೂ ನಮಗೆ ನೆರವೀಯಬೇಕೆಂದು ಪ್ರಾರ್ಥಿಸುತ್ತೇವೆ.

ಬಿ. ಎಂ. ಶ್ರೀಕಂಠಯ್ಯ,
ಅಧ್ಯಕ್ಷ.

ಬಿ. ಎಲ್. ಗುರುರಾಜರಾವ್,
ಕಾರ್ಯದರ್ಶಿ.

---

# ಪ್ರಾಚ್ಯಲೇಖನಮಾಲೆ

**ಭಾರತಿ — ಅಕ್ಟೋಬರ್, 1943.**

ರಾಜೇಂದ್ರ ಚೋಳ ಚಕ್ರವರ್ತಿ — ವೆಂಗಿ. ಡಾ|| ನೇಲಮಾರು ವೆಂಕಟರಮಣಯ್ಯ

(ಆತನ ಗೋದಾವರಿ ತೀರ ನಿವಾಸದ ಕಾಲವನ್ನು ತಿಳಿಸುವ ಶಿಲಾಶಾಸನ ತಮಿಳಿನಲ್ಲಿರುವ ಭೀಮಾವರದ್ದು. ಕ್ರಿ.ಶ. ೧೧ನೆಯ ಶತಾಬ್ದದ ಪೂರ್ವ ಚಾಳುಕ್ಯ ಚೋಳ ಪರಸ್ಪರ ಸಂಬಂಧನಿರ್ಣಯಕ್ಕೆ ಇದೊಂದು ಮುಖ್ಯಸಾಧನ. . . . ೭ ಶಾಸನಗಳ ಆಧಾರ:— ಇವೆರಡೂ ಕರಿದಿಂಡ್ಡಿ ಶಾಸನದಲ್ಲಿ ಹೇಳಿದಂತೆ ಚೋಳಚಕ್ರವರ್ತಿ ರಾಜೇಂದ್ರನು ಕ್ರಿ.ಶ. ೧೦೨೨ರಲ್ಲಿ ಎಂದರೆ ರಾಜರಾಜ ನರೇಂದ್ರನ ಪಟ್ಟಾಭಿಷೇಕದಲ್ಲಿ ರಾಜಮಹೇಂದ್ರ ಪ್ರಾಂತ ಇದ್ದನೆಂದೂ, ಆಗ ರಾಜರಾಜನರೇಂದ್ರನು ಚೋಳನ ಆನೆಕಾಪಾಗಿ ಇದ್ದನೆಂದೂ ಸ್ಥಿರಪಡಿಸುತ್ತವೆ. . . .)

**ಶಿವಾನುಭವ — ಸಂಪುಟ ೧, ಅಕ್ಟೋಬರ್, ೧೯೪೩.**

ಬಸವೇಶ್ವರನ ಚರಿತ್ರೆ— ರಾ|| ಬ|| ಪಿ. ಜಿ. ಹಳಕಟ್ಟಿ.

ವೀರಶೈವ ರಾಜಮನೆತನಗಳ ಚರಿತ್ರೆ— ರಾ|| ಬ|| ಪಿ. ಜಿ. ಹಳಕಟ್ಟಿ.

ಸಂಕೀರ್ಣ ವಚನಗಳು — ಭಾಗ ೩.

**The Jaina Antiquary — IX, 1. June, 1943.**

1. ವಿಜಯನಗರಕೆ ಜೈನ ಶಿಲಾಲೇಖ — ಕಾ. ಪ್ರ. ಜೈನ.
2. ಪಾರ್ಶ್ವದೇವಕೃತ ಸಂಗೀತ ಸಮಯಸಾರ — ನಾ. ಮ್ಹೋ. ಖರೆ.
3. ತುಲುದೇಶಮೆ ಜೈನಧರ್ಮ— ಬಿ. ಎ. ಸಾಲೆತೋರ.
4. ಜೈನಿಯೋಂಕೀ ದೃಷ್ಟಿಮೇ ವಿಕ್ರಮಾದಿತ್ಯ— ಭುಜಬಲಿಶಾಸ್ತ್ರೀ.

1. 'The Jaina Theory of Anekanta Vada'— PROF. K. C. BHATTACHARYA.
2. 'Jaina and Buddhistic Studies'— DR. A. N. UPADHYE.
3. 'Advent of Jainism'— PROF. D. S. TRIVEDA.

**Man in India — XXIII, 2. June, 1943, Marriage Number.**

1. 'Santal Poetry and An Anthology of Marriage Sermons
2. Betrothal Dialogues'— W. G. ARCHER.

**The New Review — XVIII, No. 107. November, 1943.**

'Kautilya's Imperialism'— V. R. R. DIKSHITAR.

**Journal of the University of Bombay — XII, 1. July, 1943.**

1. 'The Origin of Civilization in Egypt'— S. N. CHAKRAVARTI.

TABLE OF THE EARLY PERIODS IN EGYPT, MESOPOTAMIA AND INDIA

| Date | Egypt | Mesopotamia | India |
|---|---|---|---|
| B.C. 3400 | Early Dynasties | Early Dynasties | Mohenjo-Daro |
| | Semainean | Jemdet Nasr | Amri |
| | Gerzean | Uruk | |
| 4500 | Amratian | Al'ubaid | |
| 5000 | Badarian | | |
| | Tasian | Neolithic Settlement at Kish | Neolithic Settlement at Sukkur and Rohri |

'2. Some Tamil Folk Songs'— M. N. SRINIVAS.

**Philosophy and Phenomenological Research — III, 4. June, 1943.**

'How to Read a Word'— J. K. FEIBLEMAN.

(1) Ontological Aspect: A word has a being and perhaps also existence. It is a sign which indicates object or reference. Does not depend on knower; on its effect. The symbolism of the word is not a mark on paper, nor a part of the grammar, syntax or vocabulary of a particular language, not even an intended meaning. It is a possible (or actual) sign.

(2) Epistemological Aspect: We consider a word in its knowledge-relation to a knower. . . . An aspect of something for somebody. An element in the knowledge process.

(3) Psychological Aspect: We are still closer to the word. Effect of the word on the knower. . . . The person affected by the meaning of the word becomes important. From a philosophy of language— a Semantics — we step into the psychology of language.

A word is the arbitrary symbol standing for an idea; and can take

(*a*) Innumerable forms . . . For the meaning we require a sign, and not the thing, or even the sound.

(*b*) Its indirect reference: is the actual thing which illustrates the object of the direct reference.

Thus words refer directly to abstract values and universally and indirectly to actual things.

Consider: Logic words, value words and fact words.

Value words are abstractions from actuality to possibility.

Logic words are abstractions from value.

**Journal of Education and Psychology — I, 3. October, 1943.**

1. 'Emotional Reaction for Stimuli Presented in Foreign Tongue and Mother Tongue'— DR. N. S. N. SASTRY.
2. 'Psychology of Laughter: The View of an Eminent Art Critic of Ancient India'— K. R. PISHAROTI.

   (Bharata and Abhinavagupta).
3. 'A Theory of Emotional Experience'— B. KUPPUSWAMY.
4. 'Sanskrit through Sanskrit'— An idle Caprice'— D. G. APTE.

**Psychological Bulletin — 39, 10. October, 1942.**

'Speech and Personality'— FILLIMORE H. SANFORD.

Is concerned with the existence, consistency, and significance of individual differences in the mode of verbal expression.

**Islamic Culture — XVII, 4. October, 1943.**

'Law and Culture in Islam'— A. A. A. FYZEE.

**Exhibition of Islamic History and Culture:** Opened on 25th August at Madras.

Describes:

The Life of the Prophet Room—The Mosque Room—The Pilgrimage Room—The History Room—The Karnatic Room—The Architecture Room—The Arcot Room—The Literary Room—The Mughal Room—The Art Gallery—The Hall of Science—The Arab Room—The Iqbal Room—The Orientalists' Room—The Urdu Room—A Book Stall.

**Indian Culture — VIII, 4. April-June, 1943.**

1. 'Life and Works of Vyasaraja Swamin' (1478-1593) — B. N. KRISHNAMURTHY SARMA.
2. 'Pre-Indo-European'— S. K. CHATTERJI.

   Proofs for postulating a Pre-Indo-European primitive Indo-Hittite.
3. 'Dravidian and Monkhmer: Speakers or Australids: A Study in Variation'— A. K. MITRA and B. K. CHATTERJI.
4. 'Hindu Architecture and Sculpture' (continued) — P. K. ACHARYA.
5. 'Hindu Ideal of Life' (According to S'rauta Sutras) — BATAKRISHNA GHOSH.

**Miscellanea—**

1. 'Contacts between Kautilya and Vatsyayana'— C. W. GURNER.
2. 'A Note on the Basim Copper Plate Inscription of Vakataka Vindhya Sakti II.'

The supposition that the Vakatakas had their original home in the south is wholly unjustifiable; based as it is on wrong premises. There is absolutely no resemblance between the phraseology of the Vakataka and that of the Pallava characters. The same remark also applies to the section of the Parihara which apparently developed both in Vakataka and Pallava grants, from the exemptions prevalent in Satavahana age and noticed in Satavahana charters. It should be remembered that the Vakatakas and Pallavas were both successors of S'atavahanas. Regarding Vakataka—in an inscription in Ameravati in the Andhra country, it is apparently a personal name and has absolutely nothing to do with the Vakataka ruling family—D. C. SIRCAR.

**dyar Library Bulletin — VII, 2. Blavatsky Number 8, May, 1943.**

1. 'The Commentary of Caturbhuja Misra of Kampilya on the Amarusataka and its Chronology'— P. K. GODE.

C.M. . . . had before him Arjunavarmadeva's commentary on A . . . He composed his commentary Bhavacintamani after C.A.D. 1250. The later limit to the date of this commentary is . . . date Samvat 1726 (= A.D. 1670) of a M.S. at B.O.R.I. No. 365 of 1887-91.

Kampilya is possibly Kampil = 28 miles N.E. of Fattegad in Farukhabad District, U.P.

2. 'Inscriptions of Uttaramerur'— A. N. KRISHNA AIYANGAR.

Pallava records from last quarter of 8th Century to the middle of the 13th which witnessed the downfall of the Cola Empire. Three inscriptions are printed: belonging to the time of Rajaraja the Great of the Imperial Colas of the Vijayalaya line.

3. 'Visesamrta of Tryambakanura' (An Orthographical Lexicon)— Edited by H. G. NARAHARI.

A lexicon for Nouns. Possibly composed after Medini (C. 1200 A.D.) 1700 A.D. latest limit.

4. 'Serial Publications of Rgvedavyakhya — Nyayakusumanjali — Vaisnavopanisads.'—

5. Horasastra of Varahamihira—and Sangitaratnakarah.

---

ಮೈಸೂರು ಮಹಾರಾಜರವರ ಕಾಲೇಜಿನ

# ಕರ್ಣಾಟಕ ಸಂಘದ ಪ್ರಕಟನೆಗಳು

---

ನಾಗಾನಂದನಾಟಕ (ಶ್ರೀ ಅನಂತನಾರಾಯಣ ಶಾಸ್ತ್ರಿಗಳವರಿಂದ)—
ಬೆಲೆ ರೂ. ೧—೦—೦

ಕಿರಿಯಕಾಣಿಕೆ (ಎರಡನೆಯ ಮುದ್ರಣ)—ಕ್ಯಾಲಿಕೊ ಪ್ರತಿ ರೂ. ೧—೮—೦

ಮಾರಾಟಗಾರರು :

**ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು**

---

ಆಷಾಢಭೂತಿ (ಶ್ರೀ. ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ)—
ಕ್ಯಾಲಿಕೊ ಪ್ರತಿ ರೂ. ೧—೮—೦

ಸಾವಿನ ಸಮಸ್ಯೆ (ಶ್ರೀ. ವೆಂಬಾರ್ ವೆಂಕಟಾಚಾರ್ಯ, ಎಂ.ಎ., ಬಿ.ಕಾಮ್., ಎಲ್.ಎಲ್.ಬಿ. ಅವರಿಂದ)— ಸಾದಾ ಪ್ರತಿ ರೂ. ೦—೧೨—೦

---

ಮಾರಾಟಗಾರರು :

**ಕೃಷ್ಣ ಮತ್ತು ಕಂಪನಿ, ಮೈಸೂರು**

---

## ಹೊಸ ಪ್ರಕಟನೆಗಳು

ಮೈಸೂರ ಮಲ್ಲಿಗೆ (ಸಚಿತ್ರ ಕವನ ಸಂಗ್ರಹ)—ಶ್ರೀ ಕೆ. ಎಸ್. ನರಸಿಂಹ ಸ್ವಾಮಿ ಅವರಿಂದ. ಬೆಲೆ, ಕ್ಯಾಲಿಕೊ ಪ್ರತಿ ರೂ. ೧—೪—೦ ; ಸಾದಾ ಪ್ರತಿ ರೂ. ೦—೧೨—೦

ಗಗ್ಗಯ್ಯನ ಗಡಿಬಿಡಿ (ಮೂರು ಪ್ರಹಸನಗಳು)—ಶ್ರೀ. ನಾ. ಕಸ್ತೂರಿ, ಎಂ.ಎ., ಬಿ.ಎಲ್. ಅವರಿಂದ. ಬೆಲೆ, ಕ್ಯಾಲಿಕೊ ಪ್ರತಿ ರೂ. ೧—೪—೦ ; ಸಾದಾ ಪ್ರತಿ ರೂ. ೦—೧೨—೦.

ಕಾರ್ಯದರ್ಶಿ, ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು,
ಮೈಸೂರು

# ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಪ್ರಕಟನೆಗಳು

**ಗದಾಯುದ್ಧ ನಾಟಕಂ** (ದ್ವಿತೀಯ ಮುದ್ರಣ)—ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಂದ ಸಂಪಾದಿತ. ಬೆಲೆ ೦-೮-೦.

**ಭಕ್ತಿಭಾಂಡಾರಿ ಬಸವಣ್ಣನವರು** (ದ್ವಿತೀಯ ಮುದ್ರಣ)—ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಏ. ಅವರಿಂದ. ಬೆಲೆ ರೂ. ೧-೦-೦.

**ತಾವರೆ**—ಎಂ. ವೆಂಕಟೇಶ ಐಯಂಗಾರ್, ಎಂ.ಎ. ಅವರಿಂದ ರಚಿತವಾದ ಪದ್ಯ ಕಾವ್ಯ (ಸಚಿತ್ರ). ಬೆಲೆ ೦-೮-೦.

**ಸೋಕ್ರಟೀಸನ ಮರಣ**—ಎಸ್. ಜಿ. ಶಾಸ್ತ್ರಿ, ಬಿ.ಎ., ಎಂ.ಎಸ್‌ಸಿ. ಅವರಿಂದ. ಡಿ. ವಿ. ಗುಂಡಪ್ಪನವರ ಅವತರಣಿಕೆಯೊಡನೆ. ಬೆಲೆ ರೂ. ೧-೦-೦.

**ಚೀನಾದೇಶದ ಬೌದ್ಧ ಯಾತ್ರಿಕರು**—ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ. ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್. ಅವರ ಮುನ್ನುಡಿಯೊಡನೆ. ರೂ. ೧.

**ಭಾಸನ ಏಕಾಂಕ ನಾಟಕಗಳು**—ಎಲ್. ಗುಂಡಪ್ಪ, ಎಂ.ಎ. ಅವರಿಂದ. ಕ್ಯಾಲಿಕೊ ಪ್ರತಿ. ಬೆಲೆ ರೂ. ೧-೮-೦.

**ಭಾಸಕವಿ**—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರಿಂದ. ಬೆಲೆ ರೂ. ೧-೪-೦.

**ಮೈಸೂರು ದೇಶದ ವಾಸ್ತುಶಿಲ್ಪ (ಸಚಿತ್ರ)**, ಭಾಗ ೧—ಬಿ. ವೆಂಕೋಬರಾವ್, ಬಿ.ಎ. ಅವರಿಂದ. ಬೆಲೆ ರೂ. ೫-೦-೦.

**ಭಾಸಕವಿಯ ಚಾರುದತ್ತ**—ಎಲ್. ಗುಂಡಪ್ಪ, ಎಂ.ಎ. ಅವರಿಂದ. ಬೆಲೆ ೦-೮-೦.

**ಅಶ್ವತ್ಥಾಮನ್** (ಹೊಸ ಮುದ್ರಣ)—"ಶ್ರೀ" ಅವರಿಂದ. ಬೆಲೆ ೦-೧೨-೦; ೧-೮-೦.

**ಷೇಕ್ಸ್‌ಪಿಯರ್ ನಾಟಕಕಥೆಗಳು** (ನಾಲ್ಕು)—ಲಕ್ಷ್ಮೀನರಸಿಂಹಶಾಸ್ತ್ರಿಗಳಿಂದ, ಎಸ್. ವಿ. ರಂಗಣ್ಣ, ಎಂ.ಎ. ಅವರ ಅವತರಣಿಕೆಯೊಡನೆ. ಬೆಲೆ ರೂ. ೦—೧೨—೦.

ಮೈಸೂರು ಮಹಾರಾಜಾ ಕಾಲೇಜಿನ ಕರ್ಣಾಟಕಸಂಘದ ಪ್ರಕಟನೆಗಳಾದ

**ಗಗ್ಗಯ್ಯನ ಗಡಿಬಿಡಿ** (ಪ್ರಹಸನಗಳು)— ಬೆಲೆ ರೂ. ೧—೪—೦ ; ೦—೧೨—೦.

**ಮೈಸೂರು ಮಲ್ಲಿಗೆ** (ಕವನಗಳು)— ಬೆಲೆ ೦—೧೨—೦.

ಇವೂ ನಮ್ಮಲ್ಲಿ ದೊರೆಯುತ್ತವೆ.

# ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ.ಎ.
೧೧. *ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. *ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. *ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. *ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. *ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.
೧೮. *ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ*—ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೨೧. ಸಾರ್ವಜನಿಕ ವೆಚ್ಚ*—ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.
೨೨. ಶಿಶುವಿಹಾರಗಳು*—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.
೨೩. *ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ, ಎಂ.ಎ.
೨೪. *ವಿಡಂಬನ—ಎಸ್. ವಿ ರಂಗಣ್ಣ, ಎಂ.ಎ.
೨೫. ಎಲ್ಲೋರ ಮತ್ತು ಅಜಂತಾ—ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.
೨೬. *ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೨೭. *ಭಾಸ—ಎಚ್. ಎಲ್. ಹರಿಯಪ್ಪ, ಎಂ.ಎ.
೨೮. *ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ, ಎಂ.ಎ.
೨೯. *ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೩೦. *ರಕ್ತ—ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜನಾಥ್, ಎಂ.ಎ.
೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.
೩೩. ಗಣಿತಶಾಸ್ತ್ರದ ಸ್ವರೂಪ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.

೩೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ, ಎಂ.ಎ.
೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ, ಎಂ.ಎ.
೩೬. ಆಳ್ವಾರುಗಳು—ಎಂ. ಯಾಮುನಾಚಾರ್ಯ, ಎಂ.ಎ.
೩೭. ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳಸಿದ ರಾಜರು—
ವಿ. ರಾಘವೇಂದ್ರರಾವ್, ಎಂ.ಎ., ಬಿ.ಟಿ.
೩೮. ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ, ಎಂ.ಎ.
೩೯. ಮಕ್ಕಳ ಭಾವಜೀವನ—ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.
೪೦. ಸಹಕಾರ—ಎಸ್. ಗೋಪಾಲಸ್ವಾಮಿ, ಎಂ.ಎ.
೪೧. ನಯಸೇನ—ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
೪೨. ಕೌಟಿಲ್ಯ—ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.
೪೩. ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ, ಎಂ.ಎ.
೪೪. ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್, ಎಂ.ಎ.
೪೫. ಲಕ್ಷ್ಮೀಶ—ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ.
೪೬. ರುಚಿ—ಎಸ್. ವಿ. ರಂಗಣ್ಣ, ಎಂ. ಎ.
೪೭. ಕೀಟಗಳು—ಡಿ. ಎಸ್. ವೀರಯ್ಯ, ಎಂ.ಎಸ್‌ಸಿ.
೪೮. ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.

೧೯೪೨ನೆಯ ಜುಲೈಯಿಂದ ಈಚೆಗೆ ಅಚ್ಚಾದ ಪುಸ್ತಕಗಳ ಸಾಧಾರಣ ಪ್ರತಿ ೩ ಆಣೆ, ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೧—೪—೦; ಉತ್ತಮ ಪ್ರತಿ ೪ ಆಣೆ, ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೨—೦—೦.

**ಪ್ರಚಾರ ಮತ್ತು ಪ್ರಕಾಶನಕಾರ್ಯ,**
**ಕಾರ್ಯದರ್ಶಿ,**
**ಯೂನಿವರ್ಸಿಟಿ ಆಫೀಸ್ ಕಟ್ಟಡ, ಮೈಸೂರು.**

* ಈ ಪುಸ್ತಕಗಳು ಮುಗಿದುಹೋಗಿವೆ.

---

## ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಬೆಲೆ: ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

ಪ್ರಧಾನಸಂಪಾದಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೧. **ಹರಿಶ್ಚಂದ್ರಕಾವ್ಯ ಸಂಗ್ರಹ** (ತೃತೀಯ ಮುದ್ರಣ)—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೨. **ಕರ್ಣಾಟಕ ಕಾದಂಬರೀ ಸಂಗ್ರಹ**—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ.
೩. **ಪ್ರಭುಲಿಂಗಲೀಲೆಯ ಸಂಗ್ರಹ** (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸ ಮೂರ್ತಿ, ಬಿ.ಎ.

೪. ಸಾಕ್ರೆಟೀಸನ ಕೊನೆಯ ದಿನಗಳು(ಸಚಿತ್ರ)—ಅನುವಾದಕರು: ಎ. ಎನ್. ಮೂರ್ತಿರಾವ್, ಎಂ.ಎ.

೫. ಶ್ರೀರಾಮಕೃಷ್ಣ ಪರಮಹಂಸ—ಲೇಖಕರು: ಕೆ. ವಿ. ಪುಟ್ಟಪ್ಪ, ಎಂ.ಎ.

೬. ರವೀಂದ್ರನಾಥ ಠಾಕೂರರು (ಸಚಿತ್ರ)—ಲೇಖಕರು: ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ.

೭. ಆರೋಗ್ಯ ಅದರ ಜ್ಞಾನ ಮತ್ತು ಸಾಧನ (ಸಚಿತ್ರ)—ಲೇಖಕರು: ಜಿ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್‌ಸಿ.

೮. ಪಂಪರಾಮಾಯಣ ಸಂಗ್ರಹ—ಸಂಪಾದಕರು: ಆಸ್ಥಾನ ಮಹಾ ವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾಚಾರ್, ಎಂ.ಎ.

೯. ಹಣ ಪ್ರಪಂಚ—ಲೇಖಕರು: ವಿ. ಸೀತಾರಾಮಯ್ಯ, ಎಂ.ಎ.

೧೦. ಸಂಸ್ಕೃತ ನಾಟಕ—ಲೇಖಕರು: ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೧೧. ಜೀವವಿಜ್ಞಾನ—ಲೇಖಕರು: ಬಿ. ವೆಂಕಟನಾರಾಯಣಪ್ಪ, ಎಂ.ಎ.

೧೨. ಹಿಂದೂದರ್ಶನಸಾರ—ಲೇಖಕರು: ಮಹಾಮಹೋಪಾಧ್ಯಾಯ ಪಂಡಿತ ರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು.

೧೩. ರಾಜನೀತಿ—ಲೇಖಕರು: ಎಚ್. ಕೃಷ್ಣರಾವ್, ಎಂ.ಎ.

೧೪. ಹದಿಬದೆಯ ಧರ್ಮ—ಸಂಪಾದಕಿಯರು: ಡಿ. ಚಂಪಾಬಾಯಿ, ಎಂ.ಎ.

೧೫. ಪುರಾಣನಾಮಚೂಡಾಮಣಿ—ಲೇಖಕರು: ಬೆನಗಲ್ ರಾಮರಾವ್, ಎಂ.ಎ., ಎಲ್ ಎಲ್.ಬಿ., ಮತ್ತು ಪಾಸ್ಯಂ ಸುಂದರಶಾಸ್ತ್ರಿ; ಬೆಲೆ, ರೂ.೩-೪-೦

೧೬. ಯುಧಶೋರ ಚರಿತ್ರೆಯ ಸಂಗ್ರಹ—ಸಂಪಾದಕರು: ಕೆ. ವಿ. ರಾಘವಾ ಚಾರ್, ಎಂ.ಎ., ಬಿ.ಟಿ.

೧೭. ಗ್ರೀಕರ ತತ್ವಶಾಸ್ತ್ರಸಾರ ಸಂಗ್ರಹ—ಲೇಖಕರು: ಕೆ. ಆರ್. ಶ್ರೀನಿವಾಸ ಅಯ್ಯಂಗಾರ್, ಎಂ.ಎ.; ಬೆಲೆ, ಸಾದಾ ರೂ. ೧—೦—೦.

೧೮. ಹಿಂದೂ ದೇಶದ ಭೂಚರಿತ್ರೆ—ಲೇಖಕರು: ವೈ. ನಾಗಪ್ಪ, ಎಂ.ಎಸ್‌ಸಿ.

೧೯. ವಚನಧರ್ಮಸಾರ—ಲೇಖಕರು: ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

## ಅಚ್ಚಿನಲ್ಲಿರುವ ಪುಸ್ತಕಗಳು

೨೦. ಪ್ರಾಣಿಶಾಸ್ತ್ರ—ಡಾ|| ಎ. ಸುಬ್ಬರಾವ್, ಬಿ.ಎ., ಡಿ.ಎಸ್‌ಸಿ., ಮತ್ತು ಎ. ನಾರಾಯಣರಾವ್, ಎಂ. ಎಸ್‌ಸಿ.

೨೧. ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು—ಜಿ. ಹನುಮಂತರಾವ್, ಎಂ.ಎ.

ಕ್ಯೂರೇಟರ್,
ಓರಿಯೆಂಟಲ್ ಲೈಬ್ರೆರಿ, ಮೈಸೂರು.

# ಪ್ರಬುದ್ಧ ಕರ್ಣಾಟಕಕ್ಕೆ ವಿನಿಮಯವಾಗಿ ಬರುವ ಪತ್ರಿಕೆಗಳು

## ಇಂಗ್ಲಿಷ್ ಪತ್ರಿಕೆಗಳು

*Annals of the Oriental Research Institute*, University, Madras; *Bramhavidya*, Adyar, Madras; *Bulletin of the School of Oriental Studies*, London; *Journal of the Andhra Historical Research Society*, Rajahmundry; *Journal of the Karnataka Historical Research Society*, Dharwar; *Quarterly Journal of the Mythic Society*, Bangalore; *The Indian* P.E.N.; *Annals of the Venkateswara Oriental Institute*, Tirupati; *The Jaina Siddhanta Bhaskara and the Jaina Gazette*, Arrah; *Bulletin of the Deccan College Research Institute*, Poona; *Publication of the Kannada Research Office*, Dharwar; *Fergusson College Magazine*, Poona; *Karnataka College Miscellany*, Dharwar; *The Journal of the Literary Committee of the L.E. Association*, Dharwar. *Annals of Bhandarkar Oriental Research Institute*, Poona.

## ವಾರಪತ್ರಿಕೆಗಳು

'ಒಕ್ಕಲಿಗರ ಪತ್ರಿಕೆ', ಬೆಂಗಳೂರು; 'ಕನ್ನಡ ನುಡಿ', ಬೆಂಗಳೂರು; 'ಕಂಠೀರವ', ಮಂಗಳೂರು; 'ತಾಯಿನಾಡು', ಬೆಂಗಳೂರು; 'ನವಸಂದೇಶ', ಬಳ್ಳಾರಿ; 'ವಿಶ್ವಕರ್ಣಾಟಕ', ಬೆಂಗಳೂರು; 'ಸ್ವದೇಶಾಭಿಮಾನಿ' ಮಂಗಳೂರು.

## ಮಾಸಪತ್ರಿಕೆಗಳು

'ಅಧ್ಯಾತ್ಮ ಪ್ರಕಾಶ', ಹೊಳೇನರಸೀಪುರ; 'ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ' (ತೆಲುಗು), ಕಾಕಿನಾಡ; 'ಕತೆಗಾರ', ಬೆಂಗಳೂರು; 'ಕನ್ನಡ ಸಹಕಾರಿ', ಮಂಗಳೂರು; 'ಜಯಕರ್ನಾಟಕ', ಧಾರವಾಡ; 'ಜಯಂತಿ', ಧಾರವಾಡ; 'ಭಾರತಿ' (ತೆಲುಗು), ಮದರಾಸು; 'ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ', ಬೆಂಗಳೂರು; 'ಮಕ್ಕಳ ಪುಸ್ತಕ', ಬೆಂಗಳೂರು; 'ಮೈಸೂರು ಸಹಕಾರ ಪತ್ರಿಕೆ', ಬೆಂಗಳೂರು; 'ವಿದ್ಯಾದಾಯಿನಿ', ಮೈಸೂರು; 'ವಿಮಾ ವಾಣಿಜ್ಯ', ಬೆಂಗಳೂರು; 'ವಿವೇಕಾಭ್ಯುದಯ', ಮೈಸೂರು; 'ಶರಣಸಾಹಿತ್ಯ', ಬೆಂಗಳೂರು; 'ಶಿವಾನುಭವ', ಬಿಜಾಪುರ; 'ಸದ್ಬೋಧಚಂದ್ರಿಕೆ', ಅಗಡಿ; 'ಸರಸ್ವತಿ', ಬೆಂಗಳೂರು; 'ಸುದರ್ಶನ', ಮೈಸೂರು; 'ಸುಬೋಧ', ಬೆಂಗಳೂರು; 'ಜೀವನ', ಧಾರವಾಡ; 'ವಿಭೂತಿ' (ತೆಲುಗು), ಸಿಕಂದ್ರಾಬಾದು; 'ಕಥಾವಳಿ', ಬೆಂಗಳೂರು.

## ತ್ರೈಮಾಸಿಕ ಪತ್ರಿಕೆಗಳು

'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', ಬೆಂಗಳೂರು; 'ಗರಿಕೆ', ಮೈಸೂರು; 'ಭಾರತ ಇತಿಹಾಸ ಸಂಶೋಧನ ಮಂಡಲದ ಪತ್ರಿಕೆ' (ಮರಾಠಿ), ಪೂನಾ; 'ಶ್ರೀಮನ್ ಮಹಾರಾಜ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ,' ಮೈಸೂರು.

## ಗ್ರಂಥಮಾಲೆ

'ಮನೋಹರ ಗ್ರಂಥಮಾಲೆ', ಧಾರವಾಡ; 'ಮಿಂಚಿನಬಳ್ಳಿ', ಧಾರವಾಡ.

# ಪ್ರಬುದ್ಧ ಕರ್ಣಾಟಕ

## ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪತ್ರಿಕೆ

'ಪ್ರಬುದ್ಧ ಕರ್ಣಾಟಕ'ವು ವಿನಾಯಕನ ಹಬ್ಬ, ದೀಪಾವಳಿ, ಸಂಕ್ರಾಂತಿ, ಕಾಮನ ಹಬ್ಬ—ಈ ಹಬ್ಬಗಳ ಹೊತ್ತಿಗೆ ವರ್ಷಕ್ಕೆ ನಾಲ್ಕು ಸಲ ಹೊರಡುತ್ತದೆ.

**ವಾರ್ಷಿಕ ಚಂದಾ (ಅಂಚೆವೆಚ್ಚ ಸೇರಿ):**

| | | | | |
|---|---|---|---|---|
| ಚಂದಾದಾರರಿಗೆ | ರೂ. | ೨ | ೦ | ೦ |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | ರೂ. | ೩ | ೦ | ೦ |
| ವಿದ್ಯಾರ್ಥಿಗಳಿಗೆ ಮಾತ್ರ | ರೂ. | ೧ | ೮ | ೦ |

ಚಂದಾಹಣವನ್ನೂ ಅದರ ವಿಚಾರವಾಗಿ ಪತ್ರಗಳನ್ನೂ ಕಾರ್ಯದರ್ಶಿ, ಪ್ರಚಾರ ಮತ್ತು ಪ್ರಕಾಶನ ಕಾರ್ಯ, ಯೂನಿವರ್ಸಿಟಿ ಆಫೀಸು, ಮೈಸೂರು, ಎಂಬ ವಿಳಾಸಕ್ಕೆ ಕಳುಹಿಸಬೇಕು. (ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರವರಿಗಾಗಲಿ ಪ್ರಬುದ್ಧ ಕರ್ಣಾಟಕದ ಸಂಪಾದಕರಿಗಾಗಲಿ ಕಳುಹಿಸಬಾರದು.) ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಚಂದಾಹಣವನ್ನು ತಮ್ಮ ತಮ್ಮ ಕಾಲೇಜಿನ ಪೇ ಅಂಡ್ ಅಕೌಂಟ್ಸ್ ಅಧಿಕಾರಿಗಳಿಗೆ ಮುಂಗಡವಾಗಿ ಸಲ್ಲಿಸಿ, ಪಡೆದ ರಸೀತಿಯನ್ನು ತಮ್ಮ ವಿಳಾಸದೊಂದಿಗೆ ಕಳುಹಿಸಿಕೊಡಬೇಕು. ಕಾಲೇಜುಗಳ ಅಧ್ಯಾಪಕ ವರ್ಗದವರೂ ಇದೇ ರೀತಿ ಮಾಡಬಹುದು.

ಪ್ರಬುದ್ಧ ಕರ್ಣಾಟಕಕ್ಕೆ ಚಂದಾದಾರರನ್ನು ಒದಗಿಸಿಕೊಡುವ ಪುಸ್ತಕ ವ್ಯಾಪಾರಿಗಳಿಗೂ ವೃತ್ತಪತ್ರಿಕೆಗಳ ಮಾರಾಟಗಾರರಿಗೂ ಶೇಕಡ ೧೨½ ಯಂತೆ ಕಮಿಷನ್ ಕೊಡಲಾಗುವುದು. ಪಾಠಶಾಲಾ ಸಂಸ್ಥೆಗಳಿಗೆ ಪ್ರಚಾರ ಶಾಖೆಯ ಕಾರ್ಯದರ್ಶಿಗಳೇ ನೇರವಾಗಿ ಗಮನಕೊಡುವರು

'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗೆ ಲೇಖನಗಳನ್ನೂ ವಿಮರ್ಶೆಗೆ ಗ್ರಂಥಗಳನ್ನೂ ವಿನಿಮಯಕ್ಕೆ ಪತ್ರಿಕೆಗಳನ್ನೂ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು.

ಈ ಕೆಳಗೆ ಕಾಣಿಸಿರುವ ಪ್ರಬುದ್ಧ ಕರ್ಣಾಟಕ ಹಳೆಯ ಸಂಚಿಕೆಗಳು ದೊರೆಯುತ್ತವೆ. ಸಂಚಿಕೆ ಒಂದಕ್ಕೆ

| ಸಂಪುಟ. | ಸಂಚಿಕೆ. | ಸಂಚಿಕೆಗಳ ಸಂಖ್ಯೆ. | | ಬೆಲೆ |
|---|---|---|---|---|
| ೧೪ | ೧ | ೩೯ | | ೦–೩–೦ |
| ೧೭ | ೧ | ೫ | | ೦–೩–೦ |
| ೨೧ | ೧, ೨, ೩, ೪ | ೧೬೯ | | ೦–೪–೦ |
| | | | ನಾಲ್ಕು ಸಂಚಿಕೆಗಳು | ೦–೧೨–೦ |
| ೨೨ | ,, | ೫೮ | | ೦–೮–೦ |
| ೨೩ | ,, | ೧೦ | | ೦–೮–೦ |

ಸಂಪಾದಕ, 'ಪ್ರಬುದ್ಧ ಕರ್ಣಾಟಕ',
ಮಹಾರಾಜರ ಕಾಲೇಜು, ಮೈಸೂರು.

Edited by V. Sitaramiah, M.A. Published by D. S. Gordon, M.A., LL.B., A.M., Dip. Edn., The University, Mysore. Printed by F. McD. Tomkinson, The Wesley Press and Publishing House, Mysore City.